# ಕಸ್ತೂರಿ

ಕನ್ನಡ ಡೈಜೆಸ್ಟ್



ವ್ಯವಸ್ಥಾಪಕ ಸಂಪಾದಕ :

ಕೆ. ಶಾಮರಾವ್

**

ಸಹಸಂಪಾದಕ :

ಮಾಧವ ನಾ. ಮಹಿಷಿ

**

ಕಲೆ :

ಪಿ. ಆರ್. ಪಾಟೀಲ

**

ಮುಖಪುಟ :

ಬ್ರಹ್ಮಕಮಲ

**

ಛಾಯಾಚಿತ್ರ :

ಶ್ರೀಮತಿ ಕವಿತಾ ಎಸ್. ಧವಳೆ

ಚಂದಾ ದರಗಳು :

| | | |
|---|---|---|
| ಬಿಡಿ ಸಂಚಿಕೆ | ... | ೨-೫೦ |
| ೧ ವರ್ಷಕ್ಕೆ | ಅಂಚೆ ಸೇರಿ | ೨೯-೦೦ |
| ೨ ವರ್ಷಕ್ಕೆ | ,, | ೫೫-೦೦ |
| ೩ ವರ್ಷಕ್ಕೆ | ,, | ೮೨-೦೦ |

KASTURI, February 1987

# ಬೆಳಕಿಂಡಿ

ತಾನೇನು ಮಾತಾಡುತ್ತಿದ್ದೇನೆ, ಯಾವುದನ್ನು ಕುರಿತು ಮಾತಾಡುತ್ತಿದ್ದೇನೆಂಬುದರ ಅರಿವಿರುವಾತನೊಂದಿಗೆ ವಾದಕ್ಕಿಳಿಯುವುದರಂಥ ಕಷ್ಟದ ಕೆಲಸ ಮತ್ತೊಂದಿಲ್ಲ.

—ವಿ. ಎಚ್.

*

ಬಲ ಅಂದರೇನು?

ಬರಿಗೈಯಿಂದಲೆ ಚಾಕಲೇಟೊಂದನ್ನು ನಾಲ್ಕು ಭಾಗಗಳಾಗಿ ಮುರಿದು ನಂತರ ಅವುಗಳಲ್ಲೊಂದನ್ನು ಮಾತ್ರ ತಿನ್ನುವ ಸಾಮರ್ಥ್ಯ.

-ಜೆ. ವಿ.

*

"ನಮಗೆ ಮಾತು-ನಡಿಗೆ ಕಲಿಸುವವರು ನೀವೇ. ನಾವು ಬಹಳ ಮಾತಾಡೋದಕ್ಕೆ ತೊಡಗಿದರೆ ಓಡಾಟ ಜಾಸ್ತಿಯಾದರೆ 'ಬಾಯಿ ಮುಚ್ಚಿಕೊಂಡು ಸುಮ್ನೆ ಕೂಡು ಒಂದು ಕಡೆ' ಅನ್ನುವವರೂ ನೀವೇ" — ೧೦ರ ಹುಡುಗನ ಮಾತು.

---

## ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ ಒಂದನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳ ೫ ನೇ ದಿನಾಂಕದೊಳಗೆ ತಲುಪದೇ ಹೋದ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

# ಈ ಸಂಚಿಕೆಯಲ್ಲಿ



ಪುಸ್ತಕ ವಿಭಾಗ

# ಸಹಚಿಂತನ

## ಅನ್ನ

ಅನ್ನ ಎನ್ನುವುದಕ್ಕೆ ಭಾರೋಪ್ಯ ಭಾಷೆಗಳಲ್ಲಿ ಜ್ಞಾತಿಪದಗಳುಂಟೆಂದು ಆಚಾರ್ಯರು ಹೇಳಿದ್ದು (ಜನವರಿ ಸಂಚಿಕೆಯ 'ಪದಾರ್ಥ ಚಿಂತಾಮಣಿ'ಯಲ್ಲಿ) ಸರಿಯಾಗಿಯೇ ಇದೆ. ಉದಾಹರಣೆಗೆ ಜರ್ಮನ್ನನ್ನೇ ತೆಗೆದುಕೊಳ್ಳಿ. ಅಲ್ಲಿ essen ಎಂದರೆ ಅನ್ನ, ಅಶನ. ಆದ್ದರಿಂದಲೇ ಮಿತ್ತಾಗಸೆನ್ ಎಂದರೆ ಮಧ್ಯಾಹ್ನದ ಊಟ ಹಾಗೂ ಆಬ್ಟೆಂತೆಸೆನ್ ಎಂದರೆ ರಾತ್ರಿಯೂಟ. ಈ ಪದವನ್ನು ಕ್ರಿಯಾಪದವಾಗಿ ಬಳಸಿದರೆ ಊಟ ಮಾಡುವುದು ಮತ್ತು ನಾಮಪದವಾಗಿ ಬಳಸಿದರೆ ತಿಂಡಿ.

ಯಾವ ಭಾಷೆಯೂ ಮಡಿವಂತಿಕೆಯಿಂದ ಬೆಳೆಯುವುದಿಲ್ಲ ಹಾಗೂ ಇಂಗ್ಲಿಷ್ ಭಾಷೆ ಬೆಳೆದದ್ದೇ ಇಂಗ್ಲೀಷ್ ಮಾತಾಡುವ ಜನ ಭಾಷೆಯ ಬಗೆಗೆ ಮಡಿವಂತಿಕೆಯ ಭಾವನೆಯನ್ನು ಬೆಳೆಸಿಕೊಂಡಿರದಿದ್ದರಿಂದ ಎಂಬ ಖಜಾನೆ ಕೃಷ್ಣಮೂರ್ತಿಗಳ ವಾದವೂ ಒಪ್ಪತಕ್ಕದ್ದೆ. ಗ್ರೀಕಿನ ಸಿಸಿಫಸ್ ಪ್ರಾಣಿಶಾಸ್ತ್ರಜ್ಞರ ಬಾಯಿಯಲ್ಲಿ ಜಿಜಿಫಸ್ ಆಗಿರಬೇಕು. ಏಕೆಂದರೆ, ಲ್ಯಾಟಿನ್ನಿನಲ್ಲಿ ಜಿಜಿಫಸ್‍ಅನ್ನು ಎಲಚಿಹಣ್ಣಿಗೆ ಸಮಾನಾರ್ಥಕವಾಗಿ ಬಳಸುವುದಿದೆ. Chauvin ಅನ್ನು ಫ್ರೆಂಚ್ ಭಾಷೆಯಲ್ಲಿ ಷೋವಿನ್ ಎಂದು ಉಚ್ಚರಿಸಲಾಗುತ್ತದೆ ಪಾಂಪೇನಿನ ಹಾಗೆ. ಅಂತೆಯೆ ಅತಿಯಾದ ದೇಶಾಭಿಮಾನವಿದ್ದಾತ ಷೋವಿನಿಸ್ಟ್.

ಹುಬ್ಬಳ್ಳಿ —ಶ್ರೀಕಾಂತ

## ಪೆಟ್ರೋಲ್-ಪತ್ಥರ್ !

ಇದು ಜನವರಿ ೧೯೮೭ರ 'ಕಸ್ತೂರಿ'ಯಲ್ಲಿ ಬಂದ 'ಇಂಗ್ಲಿಷ್ ಹೀಗೆ ಬೆಳೆಯುತ್ತಿದೆ'ಯ ಕುರಿತು.

ಶ್ರೀ ಖಜಾನೆಯವರು ತಮ್ಮ ಖಜಾನೆಯನ್ನು ಖಾಲಿ ಮಾಡುವ ಹುಮ್ಮಸ್ಸಿನಲ್ಲಿ ಬರೆದುದನ್ನೆಲ್ಲಾ ಒಪ್ಪುವುದು ಸ್ವಲ್ಪ ಕಷ್ಟವೆನಿಸುತ್ತಿದೆ. ಅವರು ಕೆಲವು ಪದಗಳ ವ್ಯುತ್ಪತ್ತಿಯ ಕುರಿತು ಬರೆದುದನ್ನೆಲ್ಲಾ ಭಾಷಾಶಾಸ್ತ್ರಿಗಳು ಒಪ್ಪುವುದಾದರೆ ನನಗೂ ಸಂತೋಷ. ನನ್ನ ಸಂಶಯಕ್ಕೆ ಒಂದು ಉದಾಹರಣೆ— ಪೆಟ್ರೋಲ್. ಇದಕ್ಕೂ ಹಿಂದಿಯ ಪತ್ಥರ್‌ಗೂ ಸಂಬಂಧವಿಲ್ಲ. (ಹಿಂದಿಯ ಪತ್ಥರ್ ಸಂಸ್ಕೃತದ 'ಪ್ರಸ್ತ'ದಿಂದ ಹುಟ್ಟಿದೆ) ಪೆಟ್ರೋಲ್ ಎಂಬುದು petroleumನ ಸಂಕ್ಷಿಪ್ತ ರೂಪ. Petroleum ಎಂಬುದು Petra (= ಶಿಲೆ) ಮತ್ತು oleum (ಎಣ್ಣೆ) ಎಂಬ ಲ್ಯಾಟಿನ್ ಪದಗಳ ಜೋಡಣೆಯಿಂದ ಬಂದುದು. ಇದನ್ನು ನಾವು ಕಲ್ಲೆಣ್ಣೆ ಎಂದರೆ ಉತ್ತರ ಭಾರತದಲ್ಲಿ 'ಶಿಲಾತೈಲ'ವೆನ್ನುತ್ತಾರೆ.

ಪತ್ಥರ್‌ನಿಂದ ಪೀಟರ್‌ನೆನ್ನುವುದು ಕೂಡಾ ಸಂದೇಹಾಸ್ಪದ. ಎಂತಿದ್ದರೂ ಇದು ಭಾಷಾಶಾಸ್ತ್ರಜ್ಞರು ಒಪ್ಪಬೇಕಾದ ಸಂಗತಿ. ಈ ಕುರಿತು ಪಾ. ವೆಂ. ಆಚಾರ್ಯರು ಏನೆನ್ನುವರು ಎಂಬ ಕುತೂಹಲ ನನಗಿದೆ.

ಮಂಗಳೂರು —ಬಾ. ನಾ. ಜೋಶಿ

## ಪರಕೀಯ ?

"ಇಂಗ್ಲಿಷನ್ನು ಬಿಟ್ಟು ದೇಶೀ ಭಾಷೆಯಾದ ಉರ್ದುವಿನ ಉದ್ಧಾರಕ್ಕೆ ಉಸ್ಮಾನಿಯಾ ವಿಶ್ವವಿದ್ಯಾಲಯ ಸ್ಥಾಪನೆ ಆಯಿತು ಎಂದು ಬರೆದಿದ್ದೀರಿ. ಉರ್ದು ಯಾವಾಗ ದೇಶೀಭಾಷೆ ಆಯಿತು? ಅದು ಪರಕೀಯರ ಭಾಷೆ, ಪಾಕಿಸ್ತಾನ ಅಥವಾ ಅರಬದೇಶದ ಜನರು ಈ ಮಾತನ್ನು ಹೇಳಿದರೆ ಸರಿ ಹೋಗುತಿತ್ತು. ಉರ್ದುಭಾಷೆ ನಿಮ್ಮಾಣಿಗೂ ಪರಕೀಯ ಭಾಷೆ.

ಮಂಗಳೂರು —ಲೂಯಿಸ್ ಡಿಸೋಜಾ

[ಉರ್ದು ಪಾಕಿಸ್ತಾನ ಅಥವಾ ಅರಬ್ಬೀಯರ ಭಾಷೆಯೆಂಬ ಕಲ್ಪನೆ ನಿಮ್ಮದಾಗಿದ್ದರೆ ಅದು ತಪ್ಪು. ಅದು ಪಾರಸಿಕ ಮತ್ತು ಸಂಸ್ಕೃತ-ಪ್ರಾಕೃತಗಳಂತಹ ನಮ್ಮ ದೇಶದ ಭಾಷೆಗಳ ಸಂಯೋಜನೆಯಿಂದ ಭಾರತದಲ್ಲೇ ಜನ್ಮತಳೆದ ಭಾಷೆ. ಉರ್ದು ಮಾತಾಡುವವರಲ್ಲಿ ಬಹುಸಂಖ್ಯರು ಮುಸಲ್ಮಾನರಾಗಿರುವುದು ಒಂದು ಆಕಸ್ಮಿಕ. ಉತ್ತರ ಪ್ರದೇಶದಲ್ಲಿ ಅನೇಕ ಹಿಂದೂಗಳು ಉರ್ದು ಮಾತೃಭಾಷೆಯುಳ್ಳವರಾಗಿದ್ದಾರೆ. ದಿ. ಪ್ರೇಮಚಂದ, ಕೃಷ್ಣಚಂದ್ರ, ಮುಂತಾದವರು ಬರೆದದ್ದು ಉರ್ದುವಿನಲ್ಲೇ. -ಸಂ.]

## ಎಲ್ಲಿಯದು?

ಜನವರಿ ೧೯೮೭ರ 'ಕಸ್ತೂರಿ'ಯಲ್ಲಿ ಪ್ರಕಟವಾದ ಸುರೇಶ ಮೂನರ 'ಖುದಿರಾಮ ಬೋಸ್'

ಎಂಬ ಲೇಖನ 'ಇಲಸ್ಟ್ರೇಟೆಡ್ ವೀಕ್ಲಿ ಆಫ್ ಇಂಡಿಯಾ' (ಡಿಸೆಂಬರ್ ೧-೧೯೭೪) ದಲ್ಲಿ ಪ್ರಕಟವಾದ ಲೇಖನದ ಶಬ್ದಶಃ ಅನುವಾದವಾಗಿದೆ. ಸುರೇಶ ಮೂನ ಅವರು ಎಲ್ಲಿಯೂ ತಾವು ಅನುವಾದಕರೆಂದಾಗಲಿ, ಲೇಖನದ ಮೂಲವನ್ನಾಗಲೀ ಉಲ್ಲೇಖಿಸದೇ ಇದ್ದದ್ದು ಆಶ್ಚರ್ಯ.

ಕನ್ನಡ ಸಾರಸ್ವತ ಲೋಕದಲ್ಲಿ ತನ್ನದೇ ಆದ ವಿಶಿಷ್ಟ ಸ್ಥಾನ-ಮಾನ ಹೊಂದಿದ, ಕನ್ನಡಿಗರ ಹೆಮ್ಮೆಯ ಪತ್ರಿಕೆ 'ಕಸ್ತೂರಿ' ಇಂಥ 'ಕೃತಿಚೌರ್ಯ ಕರ್ಮ'ಕ್ಕೆ ಆಸ್ಪದ ಕೊಡಕೂಡದು.

ಮುದ್ದೇಬಿಹಾಳ —ಪಿ. ಎಸ್. ಕನಮಡಿ

**ಯಾವ ಭಾಭಾ?**

ಅಕ್ಟೋಬರ್ ೧೯೮೬ ಸಂಚಿಕೆ ನೋಡಿದೆ, 'ಟಾಟಾ ಸಮಾಜ ಸಂಸ್ಥೆ' ಲೇಖನದಲ್ಲಿ "ಸುವರ್ಣ ಮಹೋತ್ಸವದ ಸಂದರ್ಭದಲ್ಲಿ ಭಾಷಣ ಮಾಡಿದವರು ಹೋಮಿ ಭಾಭಾ" ಎಂದಿದೆ. ಹೋಮಿ ಭಾಭಾ ವಿಮಾನ ಅಪಘಾತದಲ್ಲಿತೀರಿ ಎಷ್ಟೋ ವರ್ಷ ಆಯಿತು. ಭಾಷಣ ಮಾಡಿದವರು ಶ್ರೀ ಜೆ. ಜೆ. ಭಾಭಾ ಎಂದಿರಬೇಕಾಗಿತ್ತು. ಇದು ಲೇಖಕರ ಅಜ್ಞಾನವೋ ಹೇಗೆ?

ಬೊಂಬಾಯಿ —ಆರ್. ಸ್ವಾಮಿನಾಥ

**ವಿಜ್ಞಾನ-ತತ್ವಜ್ಞಾನ**

ಜನವರಿ ೮೭ ರ ಸಂಚಿಕೆಯಲ್ಲಿದ್ದ 'ವಿಶ್ವದ ಏಕದರ್ಶಿತ್ವ' (ಡಾ. ಕೆ. ಚಿದಾನಂದ) ಓದಿದೆ. ಇಲ್ಲಿ ನನ್ನದೊಂದು ಅಭಿಪ್ರಾಯ.

"ವೈಜ್ಞಾನಿಕವಾಗಿ ವಿಶ್ವದಲ್ಲಿ ಒಂದು ಏಕಸೂತ್ರತೆ ಸಿದ್ಧವಾಗಲಿ- (ಆಗಿರಲಿ) ಬೇಕಾದರೆ. ಇದನ್ನು ಯಾವುದೋ ಉಪನಿಷತ್ತು, ಗೀತೆಯೊಂದಿಗೆ ಹೋಲಿಸುವುದು ಬೇಡವೆಂದೆನಿಸುತ್ತೆ. ಹೆಚ್ಚಿನ ಎಲ್ಲ ದರ್ಶನಕಾರರಿಗೂ ಗೀತೆ—ಉಪನಿಷತ್ತುಗಳೇ ಆಧಾರವಾಗಿರುವಾಗ ಅವರವರು ಅದೇ ಸರಿ ಎಂದೇ ವಾದಿಸುತ್ತಾರಾದ್ದರಿಂದ, ಅಲ್ಲದೇ ಸ್ವಭಾವತಃ ಗೀತೆಯಲ್ಲೂ ಪರಸ್ಪರ ವಿರೋಧ ವಿಚಾರಗಳೂ ಇರುವುದರಿಂದ ಮೇಲೆ ಹೇಳಿದ ಹೋಲಿಕೆ ಬೇಡ ಅಲ್ಲವೆ!

ಹಿಂದೆ ನಂಬಿದ ಎಷ್ಟೋ ವಿಷಯಗಳು (ಭೂಮಿ ಚಪ್ಪಟೆಯಾಗಿದೆ ಇತ್ಯಾದಿ) ಇಂದಿನ ವೈಜ್ಞಾನಿಕ ಯುಗದಲ್ಲಿ ಸುಳ್ಳಾಗಿದ್ದು ಸ್ಪಷ್ಟ. ಈ ಕಾರಣದಿಂದಲೂ ವಿಜ್ಞಾನ ಮತ್ತು ಕೇವಲ ಮಾತಿನ ಚಮತ್ಕಾರವೇ ಆಗಿರುವ ತತ್ತ್ವಜ್ಞಾನ (?) (ದರ್ಶನ) ಒಂದಾಗದಿದ್ದರೆ ಖಂಡಿತ ಹಾನಿ ಇಲ್ಲ.

ಚುಂಚನಹಳ್ಳಿ —ಬಿ.ಎಸ್. ಶ್ರೀನಿವಾಸಾಚಾರ್ಯ

**ಧನ್ಯವಾದ**

ನಾನು 'ಕಸ್ತೂರಿ'ಯಲ್ಲಿಯ ಲೇಖನಗಳನ್ನು ಆಗಾಗ್ಗೆ ಬಹಳ ಆಸ್ಥೆಯಿಂದ ಓದುತ್ತಿರುತ್ತೇನೆ. ಜನವರಿ ೧೯೮೭ರ ಸಂಚಿಕೆ ತುಂಬಾ ಆಕರ್ಷಕವಾಗಿದೆ. ಅನೇಕ ಸುಂದರ ಕೃತಿಗಳಿವೆ.

ಅದರಲ್ಲಿ ಉಸ್ಮಾನಿಯಾ ವಿಶ್ವವಿದ್ಯಾಲಯದ ಬಗ್ಗೆ ಆದರ ಪ್ರಗತಿಪಥದ ಬಗ್ಗೆ ವಿಸ್ತಾರವಾದ ಲೇಖನವು ವಾಚಕರನ್ನು ಅಚ್ಚ[illegible]ರದು. ಪ್ರೊ. ಶ್ರೀ ಜಿ. ಡಿ. ನಾಡಕರ್ಣಿ ಅವರ ಲೇಖನ 'ನೆಹರೂ ಯೋಜನೆಯ ರೀತಿ' ಬಹಳೇ ಉತ್ಕೃಷ್ಟ ಹಾಗೂ ಆಕರ್ಷಕ.

ಉತ್ಕೃಷ್ಟ ಲೇಖನವನ್ನು ಸದಾಕಾಲ ಕೊಡುತ್ತಿರುವ 'ಕಸ್ತೂರಿ' ಪತ್ರಿಕೆಗೆ ಅನಂತ ಧನ್ಯವಾದಗಳು.

ಬಾಗಲಕೋಟೆ —ಎಸ್. ಬಿ. ಕುಲಕರ್ಣಿ

**ವಿಚಾರ ಪ್ರಚೋದಕ**

ಜನೆವರಿ 'ಕಸ್ತೂರಿ' ಸಂಚಿಕೆಯಲ್ಲಿ ಮುರಳೀಧರ ಖಜಾನೆಯವರಿಂದ 'ನೋಬೆಲ್ ಬಹುಮಾನ ಪ್ರಶ್ನಾತೀತವೆ?' ಲೇಖನ ನಮ್ಮ ವಿಚಾರಸರಣಿಗಳಿಗೆ ಮುಟ್ಟುಗೋಲು ಹಾಕುವಂತಿದೆ. ಅತ್ಯುತ್ತಮ ಸೇವೆ ಸಲ್ಲಿಸಿದವರಿಗೆ ಕೊಡದೆ, ರಾಜಕೀಯ ನಡೆಸುತ್ತಿರುವುದು ತುಂಬಾ ವಿಷಾದನೀಯ. ಬಿಟ್ರಾಂ ಪಾರಸಲ್, ಗಾಂಧಿ, ನೆಹರು, ಟಿಟೊ ಮುಂತಾದವರು ನೋಬೆಲ್‌ನಿಂದ ವಂಚಿತರಾದದ್ದು ಪಕ್ಷಪಾತವಲ್ಲದೆ ಬೇರೇನು?

ತಾಳಿಕೋಟೆ —ಎ. ಎಲ್. ನಾಗೂರ

ಕಸ್ತೂರಿ

ವರ್ಷ : ೩೧ ಫೆಬ್ರುವರಿ, ೧೯೮೭ ಸಂಚಿಕೆ : ೬

# ನಿಜವಾದ ಧರ್ಮ

ಪ. ರಾಮಕೃಷ್ಣ ಶಾಸ್ತ್ರಿ

ತುಂಗಭದ್ರಾ ನದಿಯ ತೀರದಲ್ಲಿ ಒಂದು ಗುರುಕುಲ ಆಶ್ರಮ ಇತ್ತು. ಅಲ್ಲಿ ಅನೇಕ ಮಂದಿ ಶಿಷ್ಯರು ವಿದ್ಯಾಭ್ಯಾಸ ಮಾಡುತ್ತಿದ್ದರು. ಅವರಲ್ಲಿ ಮಾಧವ ಎಂಬ ಬ್ರಾಹ್ಮಣ ಬಾಲಕನೂ ಒಬ್ಬ. ನಿತ್ಯ ಅವನು ಬೆಳಗ್ಗೆ ನದಿಗೆ ಹೋಗಿ ಸ್ನಾನ ಮಾಡಿ ಹೂ, ಪತ್ರೆ ಮುಂತಾದ ಪೂಜೆಗೆ ಬೇಕಾದ ಸಾಮಗ್ರಿಗಳನ್ನು ಸಂಗ್ರಹಿಸಿ ತಂದು ಗುರುಗಳಿಗೆ ಕೊಡುತ್ತಿದ್ದ.

ಒಂದು ದಿನ ಮಾಧವ ಸ್ನಾನಮಾಡಿ ಹೂಗಳೊಂದಿಗೆ ಬರುವಾಗ ದಾರಿಯಲ್ಲಿ ಕೆಲವು

ಮಂದಿ ಒಬ್ಬ ತರುಣಿಯನ್ನು ಬಲಾತ್ಕಾರದಿಂದ ಸೆಳೆದೊಯ್ದು ಅವಳ ಮಾನಭಂಗ ಮಾಡಲು ಪ್ರಯತ್ನಿಸುತ್ತಿದ್ದುದನ್ನು ಕಂಡ. ತನ್ನ ರಕ್ಷಣೆಗಾಗಿ ಆಕೆ ಆರ್ತಧ್ವನಿಯಿಂದ ಕರೆಯುತ್ತಿದ್ದರೂ ಆಯುಧ ಪಾಣಿಗಳಾದ ಅವರನ್ನೆದುರಿಸಲು ಯಾರೂ ಧೈರ್ಯವಹಿಸಲಿಲ್ಲ.

ಇದನ್ನು ನೋಡಿ ಮಾಧವನ ರಕ್ತ ಕುದಿಯಿತು. ಹೂಗಳನ್ನು ಕೆಳಗಿಟ್ಟು ಅವರೊಂದಿಗೆ ಹೋರಾಡಿದ. ಅವರು ಅವನನ್ನು ಖಡ್ಗದಿಂದ ಕಡಿಯಲು ಪ್ರಯತ್ನಿಸಿದಾಗ ಒಬ್ಬನ ಖಡ್ಗವನ್ನು ಸೆಳೆದು ಅವರಲ್ಲಿ ಕೆಲವರನ್ನು ಕತ್ತರಿಸಿ ಹಾಕಿದ. ಅದನ್ನು ಕಂಡು ಉಳಿದವರು ಕಾಲಿಗೆ ಬುದ್ಧಿ ಹೇಳಿದರು.

ತರುಣಿಯನ್ನು ಸುರಕ್ಷಿತ ಸ್ಥಾನಕ್ಕೆ ಸೇರಿಸಿದ ಬಳಿಕ ಮಾಧವ ಪೂಜಾ ಪರಿಕರಗಳೊಂದಿಗೆ ಆಶ್ರಮಕ್ಕೆ ಬಂದ. ಆಗ ಉಳಿದ ಶಿಷ್ಯರು, "ಗುರುಗಳೇ, ಮಾಧವ ನಮ್ಮ ಆಶ್ರಮದಲ್ಲಿರಲು ಯೋಗ್ಯನಲ್ಲ. ಬ್ರಾಹ್ಮಣನಾಗಿದ್ದು ಕತ್ತಿ ಹಿರಿದು ಯುದ್ಧ ಮಾಡಿದ್ದಾನೆ, ಕೆಲವರನ್ನು ಕೊಂದಿದ್ದಾನೆ" ಎಂದು ದೂರು ಹೇಳಿದರು.

"ಹೌದೆ? ಯಾಕೆ ಹಾಗೆ ಮಾಡಿದ?" ಎಂದು ಗುರುಗಳು ಕೇಳಿದರು.

ಅದರ ಕಾರಣ ಶಿಷ್ಯರ ಬಾಯಿಂದಲೇ ಕೇಳಿ ತಿಳಿದುಕೊಂಡ ಗುರುಗಳ ಮುಖ ಪ್ರಸನ್ನವಾಯಿತು. "ಮಾಧವ ಮಾಡಬಾರದ ಕೆಲಸ ಮಾಡಿಲ್ಲ. ಆತ ಮಾಡಿದ ಕಾರ್ಯ ಧರ್ಮ ಯುಕ್ತವೂ ಸಮಯೋಚಿತವೂ ಆಗಿದೆ. ಒಬ್ಬ ಅಬಲೆಯ ಮಾನಹರಣ ನಡೆದಾಗ ರಕ್ಷಿಸಲು ಅಡ್ಡಿಯಾಗುವ ಬ್ರಾಹ್ಮಣಿಕೆಯಿಂದ ಏನು ಲಾಭ-ವಿದೆ? ನಾರಿಯ ಶೀಲವನ್ನು ರಕ್ಷಿಸದೆ ಸುರಕ್ಷಿತವಾಗಿ ತಂದ ಹೂಗಳಿಂದ ಮಾಡಿದ ಪೂಜೆ ಆ ದೇವರಿಗೆ ಸಂದೀತೆ? ಎಲ್ಲಿ ನಾರಿಗೆ ಪೂಜೆ ನಡೆಯುತ್ತದೋ ಅಲ್ಲಿ ದೇವತೆಗಳಿರುತ್ತಾರೆ. ನೀವು ಧರ್ಮವನ್ನು ಬರೇ ಓದಿನಲ್ಲಿ ತಿಳಿದುಕೊಂಡಿರಿ; ಮಾಧವ ಅದನ್ನು ಆಚರಣೆಗೆ ತಂದ" ಎಂದರು ಗುರುಗಳು.

ಆ ಮಾಧವನೇ ಮುಂದೆ, ವಿಜಯನಗರ ರಾಜ್ಯ ಸ್ಥಾಪನೆ ಮಾಡಿದ ವಿದ್ಯಾರಣ್ಯರು. ✲



## ಬದುಕು

ಈ ಹೊತ್ತು ಅರಳೀತು
ತುಸ ಹೊತ್ತು ನಲಿದೀತು
ಬಾಡೀತು
ಉದುರೀತು
ಬದುಕೊಂದು ಹೂವು; ಗಂಧ ತೇಲಿ
ಗಾಳಿಯಲ್ಲಿ ಬಂದರದಕೆ ಸಾವು
ಅದೇಕೇಕೆ ಅಳಬೇಕು ನಾವು?

(ಒಂದು ಚೀನೀ ಹೈಕು ಅನುವಾದ)

—ಪದ್ಮನಾಭ ಶಾಯಿಲೂರು

# ಬಿಂಬ ಛಾಯೆ
# ಪ್ರತಿಬಿಂಬ ಬಿಂಬಚಿತ್ರ

ಶ್ರೀನಿವಾಸ ತೋಫಖಾನೆ

ಮುಕ್ಕಣ್ಣ ಮಹಾಕಾಯ, ಎತ್ತರದ ನಿಲುವು ಆತನದು. ಕೋಮಲಾಂಗಿಯಾದ ಗಿರಿಜೆ ಆತನನ್ನು ಅರ್ಚಿಸಲೆಂದು ಬೊಗಸೆ ತುಂಬಾ ಹೂವುಗಳನ್ನು ತಂದು ತಲೆಯ ಮೇಲೆ ಇರಿಸಲು ಹವಣಿಸಿದಾಗ ಅವು ನಡುವೆಯೆ ಬೀಳುತ್ತವೆ. ಇಂತಹ ಹೃದಯಂಗಮ ಕಲ್ಪನೆ ಕವಿ ಶ್ರೀ ಹರ್ಷನದು. ಆತನ 'ರತ್ನಾವಲೀ' ನಾಟಿಕೆಯ ನಾಂದಿ ಪದ್ಯ ಈ ಚಿತ್ರವನ್ನು ಒಳಗೊಂಡಿದೆ. ಮೂಲ ಪದ್ಯ ಸಂಸ್ಕೃತದಲ್ಲಿ ಇಂತಿದೆ;



ಪಾದಾಗ್ರಸ್ಥಿತಯಾ ಮುಹುಃ ಸ್ತನಭರೇಣಾ
ನೀತಯಾ ನಮ್ರತಾಂ
ಶಂಭೋಃ ಸಸ್ಪೃಹ ಲೋಚನತ್ರಯ ಪಥಂ
ಯಾಂತ್ಯಾ ತದಾರಾಧನೇ।
ಹ್ರೀಮತ್ಯಾ ಶಿರಸೀಹಿತಃ ಸಪುಲಕ
ಸ್ವೇದೋದ್ಗಮೋತ್ಕಂಪಯಾ
ವಿಶ್ಲಿಷ್ಯನ್ ಕುಸುಮಾಂಜಲಿರ್ಗಿರಿಜಯಾ
ಕ್ಷಿಪ್ತೋಂತರೇ ಪಾತು ವಃ॥

*

ಕನ್ನಡ ಭಾವಾನುವಾದ:

ಗಿರಿಜೆ ಹರನ ಪೂಜೆಗೆಂದು
ಬೊಗಸೆ ತುಂಬ ಹೂವ ತಂದು
ತುದಿಬೆರಳಿನ ಮೇಲೆ ನಿಂದು
ಜಡೆಯಲಿಡಲು ಬಗೆವಳು
ತುಂಬಿದೆದೆಯು ಭಾರವಾಗಿ
ಅಬಲೆ ಮತ್ತೆ ಮತ್ತೆ ಬಾಗಿ
ತ್ರಿಲೋಚನನ ನೋಟ ತಾಗಿ
ಲಜ್ಜೆಯಿಂದ ಮಣಿವಳು
ನಿಮಿರಿ ನಿಲಲು ಮೈಗೂದಲು
ಗಾತ್ರ ಗಾತ್ರ ಬೆವರೊಡೆಯಲು
ನಡುಕ ಒಡನೆ ಕಂಡುಬರಲು
ಉಮೆಯು ತಂದ ಸುಮಗಳು
ದೇವನ ಶಿರ ತಲಪಲಿಲ್ಲ
ಕಳಚಿ ಕೆಳಗೆ ಬಿದ್ದುವಲ್ಲ!
ಕುಸುಮಾಂಜಲಿ ನಿಮ್ಮನೆಲ್ಲ
ಸಲುಹಲಿ ಇಹಪರದೊಳು!

# ಶತಮಾನದ ಕೃತಿ ನೂರು

• ಪಂಪಾಯಾತ್ರೆ • ನನ್ನ ನಲ್ಲ • ಹರಿವ ನೀರಿದು

**ದೇಶಪಾಂಡೆ ಸುಬ್ಬರಾಯ**

೨೩

## ವಿ. ಸೀ./ಪಂಪಾಯಾತ್ರೆ

೧೯೨೮ ರಲ್ಲಿ ಮೊದಲ ಬಾರಿ ಪ್ರಕಟವಾದ ವಿ.ಸೀ. ಅವರ 'ಪಂಪಾಯಾತ್ರೆ' ಕೇವಲ ೬೫ ಪುಟಗಳ ಒಂದು ಪುಟ್ಟ ಪುಸ್ತಕ. ಹಾಳು ಹಂಪೆಯ ಬೋಳು ಪ್ರದೇಶಗಳಲ್ಲಿ ಅನೇಕ ಬಗೆಯ ಗೋಳುಗಳೊಂದಿಗೆ ತಿರುಗಿದ ಐವರು ಮಹನೀಯರ ಒಂದು ಪ್ರವಾಸಕಥನ ಮಾತ್ರ. ಹೇಳಿಕೊಳ್ಳುವಂತಹ ಸಂಶೋಧನಾತ್ಮಕ ಅಂಶಗಳು, ಉತ್ಖನನಾದಿ ವಿವರಗಳು, ಐತಿಹಾಸಿಕ ಒಳಪುಟಗಳ ಅಧಿಕೃತ ವಿಶ್ಲೇಷಣೆಗಳು, ಹೋಗಲಿ, ಹಂಪೆಯ ಪೂರ್ತಿಯಾದ ಸಾಮಾನ್ಯ ವಾಸ್ತವಿಕ ವಿವರ ಕೂಡ ಇಲ್ಲಿ ಸರಿಯಾಗಿ ದೊರೆಯುವುದಿಲ್ಲ. ಹಾಗಿದ್ದೂ ಈ ಕೃತಿ ಈ ಶತಮಾನದ ಅತ್ಯುತ್ತಮ ಕೃತಿಗಳಲ್ಲಿ ಒಂದು ಎನಿಸುವ ಚೋದ್ಯ ಅಡಗಿದ್ದು ಅದರ ಒಂದು ಅತ್ಯಂತ ಮಹತ್ವದ ಹಿನ್ನೆಲೆಯಲ್ಲಿ. ಅದನ್ನು ಹೀಗೆ ವಿಶ್ಲೇಷಿಸಬಹುದೇನೋ.

ಒಂದು ನಾಡಿನ ಸಂಸ್ಕೃತಿ ಒಂದೆಡೆಗೆ: ಮನುಷ್ಯನ ಸಂವೇದನಾಶೀಲತೆ ಇನ್ನೊಂದೆಡೆಗೆ. ಇವೆರಡರ ಪರಸ್ಪರ ಕೊಡುಕೊಳ್ಳುವಿಕೆಯ ಫಲವಾಗಿ ಅರಳಿಕೊಳ್ಳುವ ಕಲೆಗಾರಿಕೆ ಮತ್ತೊಂದೆಡೆಗೆ. ಈ ತ್ರಿಕೋನ ಸಂಗಮಗಳ ಮಧ್ಯ ಅರಳಿಕೊಳ್ಳುತ್ತಲೇ ಇದ್ದು, ಕ್ರಮೇಣವಾಗಿ ಶ್ರೀಮಂತಗೊಳ್ಳುತ್ತಲೇ ಹೋಗುವ, ಹರಳುಗಟ್ಟಿಕೊಳ್ಳುತ್ತಲೇ ಹೋಗುವ ಬದುಕಿನ ಗುರಿ; ಪರಿಪೂರ್ಣತೆ. ಇಲ್ಲಿ ಕೊಡುವ, ಕೊಳ್ಳುವ, ಈಯುವ, ಸ್ವೀಕರಿಸುವ, ಸಂವೇದಿಸುವ, ಸಂವಾದಿಸುವ, ಸಾವಿರ ಕ್ರಿಯೆ ನಿರಂತರಗಳು ಬದುಕಿನ ಹಲವಾರು ಪಲುಕುಗಳಲ್ಲಿ ಪ್ರತಿಫಲನಗೊಳ್ಳುತ್ತಲೇ ಇರುತ್ತವೆ. ಇಂಥ ಪ್ರತಿಫಲನಗಳ ಮಧ್ಯ ಅರಳಿಕೊಂಡ ಒಂದು ಸಹಜ ಸುಂದರ ಮಂದ ಬೆಳಕು, 'ಪಂಪಾಯಾತ್ರೆ'.

ಈಗಾಗಲೇ ಹೇಳಿದಂತೆ, ಒಂದು ಹೊರಮೆ

ಆವರಣದಲ್ಲಿ ನೋಡುವುದಾದರೆ, ಅಂಥ ಹೇಳಿಕೊಳ್ಳುವದೇನೂ ಇಲ್ಲಿ ಚಿತ್ರಿತವಾಗಿಲ್ಲ. ಪ್ರಾದೇಶಿಕ ಹಿನ್ನೆಲೆಯಿಂದಾಗಲೀ, ಘಟನೆಗಳ ನಿಶಿತತೆಯಿಂದಾಗಲೀ ನಮ್ಮ ಮನಸ್ಸನ್ನು ಸೆರೆಹಿಡಿಯುವಂತಹ ಅದ್ಭುತಗಳೇನೂ ಇಲ್ಲಿ ಇಲ್ಲ. ಎಲ್ಲರ ಕಣ್ಣಿಗೂ ಕಂಡಷ್ಟೇ, (ಅಷ್ಟೇ ಏಕೆ, ಊಹೆ [illegible] ಇನ್ನಷ್ಟು ಹೆಚ್ಚಾಗಿಯೇ) ಹಾಳಾಗಿ ಹಂಪೆ ಕಂಡಿದೆ. ಚಿತ್ರಗಳು ಇನ್ನಷ್ಟು ವಿಕಾರವಾಗಿಯೇ ಕಂಡಿವೆ.

ತಲೆ ಮತ್ತು ಹೃದಯ ಎರಡನ್ನೂ ಒಟ್ಟೊಟ್ಟಿಗೆ ಉಪಯೋಗಿಸಿಕೊಳ್ಳುವ ರೀತಿಯನ್ನು ಒಂದು ರೀತಿಯಿಂದ ಚಿಂತನಶೀಲ ಭಾವುಕ ಮನಸ್ಸಿನ ಪಲುಕುಗಳು ಎಂದೆನ್ನಬಹುದೇನೋ.

ಭೂತಕಾಲದಲ್ಲಿ ಏನೋ ಇದ್ದುದು, ಏನೇನೋ ಘಟನೆಗಳ ಪರಿಣಾಮವಾಗಿ, ಹೇಗೋ ಸುಳಿಗಳಲ್ಲಿ ಸಿಕ್ಕು, ವರ್ತಮಾನಕ್ಕೊಂದು ವಿಕಾರ ಮಾತ್ರವಾಗಿ ಉಳಿದ ಯಾವುದೂ ಸದ್ಯದ ಸಾಕ್ಷಿಗಣ್ಣುಗಳಿಗೆ ಸವಾಲಾಗಿಯೇ ಆಗುತ್ತದೆ. ಇತಿಹಾಸದ ಯಾವ ಪುಟಗಳ ಸಮರ್ಥ ಬೆಂಬಲವೂ ಇಲ್ಲದ ಸಂದರ್ಭದಲ್ಲಿ, ಖತಿಗೊಂಡ ಮನಸ್ಸು ಸಾವಿರ ಶಂಕೆಗಳನ್ನು ಉಸುರುತ್ತಿರುವ ಕ್ಷಣಗಳಲ್ಲಿ ಊಹೆಗಳು, ತರ್ಕಗಳು ಸಾವಿರ ದಿಕ್ಕು ಚಲಿಸುತ್ತವೆ. ಆದರೆ ಯಾವ ಊಹೆ, ತರ್ಕವೂ ಯಾವ ದಿಕ್ಕಿನ ಆಸರೆಯನ್ನೂ ಪಡೆಯದೆ ದಿಕ್ಕುಗೇಡಿಯಾಗಿಯೇ ತಿರುಗಿ ಬರುತ್ತದೆ. ಸಂವೇದನಾಶೀಲನೊಬ್ಬ ಹಂಪೆಯನ್ನು ನೋಡಿದಾಗ ಆಗುವ ಬಗೆಯೇ ಹೀಗೆ. ವಿ. ಸೀ. ಅಂಥವರಿಗಾಗದಿನ್ನೇನು? ಆದರೆ, ಎಷ್ಟೇ ಖತಿಗೊಂಡ ಮನಸ್ಸಿಗೂ, ಕೊನೆಯಲ್ಲೂ ದೊರೆಯುವುದು ಇನ್ನಷ್ಟು ಕಹಿ ಮಾತ್ರ. ಇತಿಹಾಸ, ಭೂಗೋಲ, ಸಮಾಜಶಾಸ್ತ್ರ, ಅರ್ಥಶಾಸ್ತ್ರ, ಯಾವುದೇ ಶಾಸ್ತ್ರದ ಹಿನ್ನೆಲೆಯಲ್ಲಿ, ಊಹೆ/ತರ್ಕ ಮಾತ್ರದಲ್ಲಿ ಏನನ್ನೂ ವಿವಸ್ತ್ರಗೊಳಿಸಿದರೂ, ವಾಸ್ತವ ವಿರೂಪದ ಹೊರತಾಗಿ ಇನ್ನೊಂದು ಸತ್ಯ ತೋರದೇ ಹೋಗುವುದೇ ವರ್ತಮಾನದ ಒಂದು ವಿಕಟತೆ ಇರಬಹುದು.

ಸೌಂದರ್ಯದ ಮಧ್ಯದಲ್ಲೇ ಮುಗ್ಧನಾಗುತ್ತಾನೆ, ಮಣಿಯುತ್ತಾನೆ. ಮರೆಯುತ್ತಾನೆ ಕವಿ! ಆದರೆ ಉಧ್ವಸ್ತದ ಮಧ್ಯ ಉದ್ವಿಗ್ನನಾಗುತ್ತಾನೆ, ವಿವೇಚಿಸುತ್ತಾನೆ, ವಿರಾಟ್ ಬದುಕಿನ ಗೂಢಗಳನ್ನು ಬೆದಕುತ್ತಾನೆ, ಆದ್ದರಿಂದ ಬೆಳೆಯುತ್ತಾನೆ. ಹೆಜ್ಜೆ ಹೆಜ್ಜೆಗೂ ಇಂಥ ಚಡಪಡಿಕೆಗಳು, ವಿವೇಚನೆಗಳು, ವಿಶ್ಲೇಷಣೆಗಳು ಇಲ್ಲಿ ಹರಳುಗಟ್ಟಿಕೊಳ್ಳುತ್ತ ಕ್ರಮೇಣವಾಗಿ, ಇಡಿಯ ಮನುಷ್ಯನ ಅಸ್ತಿತ್ವವನ್ನು ಕುರಿತೇ, ಒಂದು ವಾಕ್ಯವೃಂದ ಮಾತ್ರದಲ್ಲಿ ಹೇಳಲಾಗದ 'ಸ್ಥಿತಿ'ಯೊಂದು ನಿರ್ಮಾಣವಾಗುತ್ತದೆ. ಬಹುಶಃ, 'ಪಂಪಾಯಾತ್ರೆ,' ಕೊಡುವ ಕೆಲವು ಉತ್ತಮ ಎತ್ತರಗಳಲ್ಲಿ ಇದೂ ಒಂದು. ವಿಜಯ ವಿಟ್ಠಲನ ಗುಡಿಯ ಸಂದರ್ಶನದ ಸಂದರ್ಭದಲ್ಲಿ, ಹರಿಗೋಲಿನಲ್ಲಿ ತುಂಗಭದ್ರೆಯನ್ನು ದಾಟುವ ಕ್ಷಣಗಳಲ್ಲಿ, ಶಬರಿಯ ಆಶ್ರಮ, ವಾಲಿಯ ಗವಿ, ಇತ್ಯಾದಿ ತಾಣಗಳಲ್ಲಿ ಪಂಪಾಸರಸ್ಸಿನ ದಡದಲ್ಲಿ, ಅಂಜನಾ ಪರ್ವತದ ಅಡಿಯಲ್ಲಿ, ಹೀಗೆ ಅನೇಕ ಸಂದರ್ಭಗಳಲ್ಲಿ ಗೈಯಲಾಗುವ ಕೆಲವು ಚಿಂತನೆಗಳ ಕ್ಷಣಗಳನ್ನು ಈ ಹಿನ್ನೆಲೆಯಲ್ಲಿ ನೆನೆದುಕೊಳ್ಳಬಹುದು.

ಇಲ್ಲಿಯ ಗದ್ಯ ಲೇಖಕನ ಒಡಲಲ್ಲಿ ಕಣ್ತೆರೆದೆ ಕೂತ ಕವಿಯನ್ನೂ ನಾವು ಆಗೀಗ ಗುರುತಿಸಬಹುದು. ಉದಾ: ಒಂದೆಡೆಗಿನ, ಒಂದು ಉಧ್ವಸ್ತದ ಕುಪ್ಪೆಯನ್ನು ವಿವರಿಸುತ್ತಾರೆ ವಿ.ಸೀ.: "ಅಲ್ಲಿನ ದೇವರ ಕೈ ಒಂದು ಕಡೆ, ಕಾಲೊಂದು ಕಡೆ, ರುಂಡ, ಮುಂಡ ಬೇರೆ ಬೇರೆ ಕಡೆ; ಕಣ್ಣೊಂದು ಕಡೆ, ಕಣ್ಣಿನ ಹೊಳಪೊಂದು ಕಡೆ." ಛಿದ್ರಾನ್ವಿತ ಮೂರ್ತಿಯೊಂದರ ಈ ವಿವರದ ಕೊನೆಯ ಭಾಗದ ಅಂಶ ಯಾವ ಹುಡಿಯ ಅಡಿಯಲ್ಲಿ ಬಿದ್ದಿರುವ ಅಂಶ ಯಾರ ಕಣ್ಣಿಗೂ ಕಾಣುವುದಿಲ್ಲ, ವಾಸ್ತವವಾಗಿ ಹಾಗೊಂದು ಅಂಶ ಇರುವುದೇ ಇಲ್ಲ. ಆದರೆ, ಕಳೆದುಹೋದ ಸಂಪತ್ತನ್ನು ಕುರಿತು ಪಳಹಳಿ ತನ್ನನ್ನು ಅಭಿವ್ಯಕ್ತಿಸಿಕೊಳ್ಳುವಾಗ, ಹೇಗೆ ಕವಿ–ಮನ ತನ್ನದೇ ಆದ ರೀತಿಯಲ್ಲಿ ಮಿಡುಕುತ್ತದೆ ಎಂಬುದಕ್ಕೆ ಉದಾಹರಣೆ ಇದು– "ಕಣ್ಣಿನ ಹೊಳಪೊಂದು ಕಡೆ."

ತಮ್ಮ ಊಹೆಯ ವಿಜಯನಗರದ ವೈಭವ-

ವನ್ನು ಸೌಂದರ್ಯದ ವಿವರಗಳನ್ನು ನೀಡಲು ವಿ.ಸೀ. ಅವರು ಆರಿಸಿದ ಇಲ್ಲಿಯ ಕನಸುಗಳ ನಿರೂಪಣೆಯ ತಂತ್ರ ಕೂಡ ಒಂದು ಮೆಚ್ಚಬೇಕಾದ ಅಂಶ. ಈ ಹಿನ್ನೆಲೆಯಲ್ಲಿ, ಕೆಲವು ಒಳ್ಳೆಯ ಚಿತ್ರಕ ಶಕ್ತಿಯ ದೃಶ್ಯಮಾಲೆಗಳೇ ಇಲ್ಲಿ ಒಡಮೂಡಿರುವುದನ್ನು ಗುರುತಿಸಬಹುದು. ಒಂದು ದೃಷ್ಟಿಯಿಂದ, ಇಡಿಯ ವಿಜಯನಗರ ಸಾಮ್ರಾಜ್ಯದ ಇತಿಹಾಸವೇ ತುಂಡು ದೃಶ್ಯಮಾಲೆಗಳಲ್ಲಿ ಇಲ್ಲಿದೆ. ಇಡಿಯ 'ಪಂಪಾಯಾತ್ರೆ'ಯ 'ಹಾಳು' ವಿವರಣೆಗಳಿಗೆ ಒಂದು 'ವೈಭವಯುತ' ಮಗ್ಗುಲಾಗಿ ಬಂದಿರುವ ಬರಹದ ಈ ತಂತ್ರದಿಂದ ಪುಸ್ತಕಕ್ಕೆ ಒಂದು ಭಾವುಕ ಸಮತೋಲ ಬಂದಿದೆ.

ವಿ.ಸೀ. ಅವರಿಗೆ ಮೀಸಲಾದ ಅತ್ಯಂತ ಸೂಕ್ಷ್ಮವಾದ ಹಾಸ್ಯ ಪ್ರಜ್ಞೆಯೂ ಪುಸ್ತಕದ ಉದ್ದಕ್ಕೂ ಹರಿದು ಬಂದಿದೆ. ವಿ.ಸೀ. ಅವರ ವ್ಯಕ್ತಿತ್ವದಷ್ಟೇ ನಾಜೂಕು ಅವರ ಹಾಸ್ಯ. ಒಂದು ಸನ್ನಿವೇಶವನ್ನು ಗಮನಿಸಿ: ಹಾಳು ಹಂಪೆಯ ಕಲ್ಲು ಮುಳ್ಳುಗಳಲ್ಲಿ ನಡೆನಡೆದು ಹಣಾಹಣಿ ಮಳೆಯಲ್ಲಿ ಹಣ್ಣಾಗಿ, ಕತ್ತಲು ತುಂಬಿದ ದುರ್ಗಮ ದಾರಿಯಲ್ಲಿ ಗೊತ್ತಾಗದ, ಆದರೆ ದಣಿದು ಹೋದ ಹೆಜ್ಜೆಗಳನ್ನು ಎತ್ತಿ ಎಳೆದು ಎತ್ತಿ ಎಳೆದು, ಇನ್ನಷ್ಟು ದಣಿದು, ಆದರೂ, ಇಲ್ಲ, ಈಗಲೂ ನಾನೇ ಮುಂದೆ ಮುಂದೆ ಶಕ್ತಿಯುತವಾಗಿ ನಡೆಯಬಲ್ಲೆ ಎಂದು ವಿ. ಸೀ. ಎಷ್ಟೇ ಜೋರಾಗಿ ನಡೆಯಲೆತ್ನಿಸಿದರೂ, ಆ ಬಗ್ಗೆ ಅಪ್ಪಣೆಸಿದರೂ ಕಾಲುಗಳು ಮಾತ್ರ ಸುತರಾಂ ನಿರಾಕರಿಸಿಬಿಟ್ಟವು. ಆ ಸಂದರ್ಭದಲ್ಲಿ, ತಮ್ಮದೇ ಆದ ಕಾಲುಗಳನ್ನು ಕುರಿತು ವಿ.ಸೀ. ಅವರ ಮಾತು: "ಸಮಯಾಸಮಯ ಪರಿಜ್ಞಾನವಿಲ್ಲದೆ ಅಪಮಾನಕ್ಕೆ ಗುರಿಪಡಿಸಬೇಕೆಂಬ ಅಭಿಲಾಷೆ ಅವಕ್ಕಿದ್ದರೆ ನಾನು ಏನನ್ನು ತಾನೇ ಮಾಡುವುದಕ್ಕಾದೀತು?" ಹಣಾಹಣಿ ಮಳೆಯಲ್ಲಿಯ ಛತ್ರಿಯ ಸಂದರ್ಭವನ್ನೂ, ಉಂಗುಷ್ಟ ಕಿತ್ತಿ ಹೋಗಿ ಕಾಲಲ್ಲಿಯ ಚಪ್ಪಲಿಗಳು ಕೈಗೂ, ಕೈಯಿಂದ ಕ್ರಮೇಣವಾಗಿ ಆಚೆಯ ಕಮರಿಗೂ ಸಾಗಿದ ಸನ್ನಿವೇಶವನ್ನೂ ಇಲ್ಲಿ ಇನ್ನಷ್ಟು ಉದಾಹರಣೆಗಳಾಗಿ ನೆನೆದುಕೊಳ್ಳಬಹುದು. ಇಂಥ ಮಾತುಗಳೂ ಚಿತ್ರಗಳೂ ಇಲ್ಲಿ ಯಥೇಚ್ಛ.

ಆದರೆ, ಒಂದೆಡೆಗೆ, ಹಂಪೆಯ ಹಾಳನ್ನು ಕುರಿತು, ಪ್ರಾಯಶಃ ಪ್ರಾತಿನಿಧಿಕವಾಗಿ ಮತ್ತು ಬಹುಶಃ ಗಂಭೀರವಾಗಿ ವಿ. ಸೀ. ಹೇಳುತ್ತಾರೆ: "ಅನನ್ಯ ಸಾಮಾನ್ಯವಾಗಿ ಅದ್ಭುತವಾಗಿರುವುದೇ ಹೊರತು ಒಂದು ಸಾಧಾರಣ ಕಾಣಸಿಗದು" (ನೋಡುವ ನಮ್ಮ ಕಣ್ಣಿನ ಕಸೀನಿಕೆಯ ಗುಣ ನಮ್ಮ ನೋಟಕ್ಕೆ ನಮ್ಮ ನೋಟದ ಗುಣ ನಮ್ಮ ಸ್ವೀಕಾರ ಭಾವಕ್ಕೆ, ಮುಖ್ಯವಾಗಿ ನಮ್ಮ ವ್ಯಕ್ತಿತ್ವಕ್ಕೇ ಬಂದುಬಿಡುತ್ತದೆ.) ಇದೇ ವಿ. ಸೀ. 'ನೋಟ' ವಿ. ಸೀ. 'ವ್ಯಕ್ತಿತ್ವ'.

ಈ 'ವ್ಯಕ್ತಿತ್ವ'ವೇ ವಿ. ಸೀ. ಅವರ ಬರಹಕ್ಕೆ ಒಂದು ತೂಕವನ್ನೂ ಅದಕ್ಕೂ ಮುಖ್ಯವಾಗಿ 'ಹಾಳು ಹಂಪೆ'ಗೂ ಒಂದು ಮೌಲ್ಯಾತ್ಮಕ ಎತ್ತರವನ್ನೂ ತಂದು ಕೊಟ್ಟಿದೆ.

ಆದರೆ ಹಂಪೆಯಲ್ಲಿ ಕುಸಿದದ್ದು ಕೇವಲ ಮನೆ ಮಠ ಕೋಟೆ ಕೊತ್ತಳಗಳಲ್ಲ; ಒಂದು ಕಲೆಗಾರಿಕೆ. ಇಲ್ಲಿ ನೆಲಸಮವಾದದ್ದು ಒಂದು ಸಾಮ್ರಾಜ್ಯವಲ್ಲ, ಒಂದು ಸಂಸ್ಕೃತಿ. ಎಂತಲೇ ಇಲ್ಲಿಯ ಎಲ್ಲ ಕುಸಿತಗಳಿಗೂ, ಪ್ರತಿಯೊಬ್ಬ ಸಂವೇದನಾಶೀಲ ವ್ಯಕ್ತಿ, ಭೂತ, ವರ್ತಮಾನ, ವ್ಯಷ್ಟಿ, ಸಮಷ್ಟಿ, ಕುಟುಂಬ, ಸಮೂಹ, ಹೀಗೆ ಜೀವಿತದ ಎಲ್ಲ ಅವಧಿಯಲ್ಲೂ, ಅಂಶಗಳಲ್ಲೂ, ಉತ್ತರಗಳನ್ನು ಹುಡುಕಲು ಯತ್ನಿಸುತ್ತಾನೆ. ಹೀಗೆ, ಕಂಡ ಒಂದು ಹಾಳು ಹಂಪೆಯಂತಹ ವಾಸ್ತವತೆ, ಅದು ಪ್ರಚೋದಿಸಿದ ಪ್ರಶ್ನೆಗಳು, ಬುಡಮೇಲಾಗಿಸಿದ ಸಮಸ್ಯೆಗಳು, ಉದ್ಭವಿಸಿದ ಊಹೆಗಳು, ಹೊಳೆದುಕೊಂಡ ಉತ್ತರಗಳು, ಜಾರಿಹೋದ ಅಸಹಾಯಗಳು, ಚಾಚಿಗೆ ಒದಗಿದ ಆಸರೆಗಳು, ನಕ್ಕ ಗಳಿಗೆಗಳು, ತಪ್ತ ಕ್ಷಣಗಳು, ಈ ಎಲ್ಲವನ್ನೂ ಒಂದೇ ಮೊತ್ತದಲ್ಲಿ ಹಿಡಿಯಲೆತ್ನಿಸಿದ ವಿ. ಸೀ. ಅವರ ಒಂದು ಅತ್ಯಂತ ಸಂವೇದನಾಶೀಲ ಸಫಲ ಪ್ರಯತ್ನ 'ಪಂಪಾಯಾತ್ರೆ.'

ಬೇಂದ್ರೆ ಅವರು ಈ ಪುಸ್ತಕವನ್ನು ಕುರಿತಂತೆ ಬರೆದಿರುವ 'ಪಂಪಾಯಾತ್ರೆ ಮತ್ತು ವಿ. ಸೀ.' ಎಂಬ ಕವಿತೆಯ ಎರಡನೆ ಭಾಗದಲ್ಲಿ ಹೀಗೆ ಹೇಳುತ್ತಾರೆ:

"ನಾಲಗೆಗೆ ನಿಲುಕದಾ ನುಡಿಗಳುಂಟು, ನುಡಿಗಳಿಗೂ ನಿಲುಕದಾ ಭಾವವುಂಟು/ ಭಾವಗಳ ಬೀಸು ಬಲೆಯಲ್ಲಿ ದೊರೆಯದೆ ನುಸುಳಿ/ ದಾಟಿ ಹೋಪ ನೈಜ ಬೇರೊಂದು ಉಂಟು/ ಓಗೆಂದು ಕೇಳಿದೆನು— ಎಂದ ಮೇಲೆ/ 'ಮೌನಕ್ಕೆ ಮಾತುಂಟೆ? / ಉಂಟು, ಉಂಟು!"

ಇಲ್ಲಿ ಮೌನವಾಗಿದ್ದೂ ಮಾತನಾಡುವ ಶಕ್ತಿ, ಸಂವಾದಿಸುವ, ಸಂವಹಿಸುವ ಶಕ್ತಿ ಎಷ್ಟು ಮಟ್ಟಿಗೆ 'ಹಂಪೆ'ಗಿದೆಯೋ, ಅಷ್ಟೇ ಮಟ್ಟಿಗೆ 'ಪಂಪಾಯಾತ್ರೆ'ಗೂ ಇದೆ.

## ೨೪

## ಮಧುರಚೆನ್ನ/ನನ್ನ ನಲ್ಲ

ಹಲಸಂಗಿ ಊರಿನವರಾದ್ದರಿಂದ 'ಹಲಸಂಗಿ ಚೆನ್ನಮಲ್ಲಪ್ಪ'ನೆಂದು ಗುರುತಿಸಲ್ಪಟ್ಟ 'ಮಧುರ ಚೆನ್ನ'ರ ನಿಜನಾಮಧೇಯ, ಚೆನ್ನಮಲ್ಲಪ್ಪ ಸಿದ್ಧಲಿಂಗಪ್ಪ ಗಲಗಲಿ ಎಂಬುದು. ಸದಾ ಸಜ್ಜನ ಸಹವಾಸಿ, (ಸತ್ಸಂಗಿ) ಮೃದು ಮಾತಿನ* ಚೆನ್ನಮಲ್ಲಪ್ಪ 'ಮಧುರಚೆನ್ನ'ನಾದುದರ ಹಿನ್ನೆಲೆ ಕೂಡ ಚೋದ್ಯವೆನಿಸುವಂತಹ ಗಾಢ ಸ್ನೇಹವೊಂದರ ಫಲ. ಚೆನ್ನಮಲ್ಲಪ್ಪನವರ ವೈಯಕ್ತಿಕ, ಕೌಟುಂಬಿಕ ಸುಖ—ದುಃಖಗಳಲ್ಲೆಲ್ಲ ಸಮಭಾಗಿಗಳಾಗಿದ್ದವರು ಅವರ ಪ್ರಾಣ-ಸ್ನೇಹಿತ ಮಾದಣ್ಣ ನಿಂಗಣ್ಣಪ್ಪ ಓಲೆಕಾರ ಅವರು. ಈ ಮಾದಣ್ಣ—ಚೆನ್ನಮಲ್ಲಪ್ಪನವರ ಒಡನಾಟದ ಕೊಡುಗೆಯೇ 'ಮಧುರಚೆನ್ನ' (ಅಷ್ಟೇ ಏಕೆ; ಮಧುರಚೆನ್ನರ 'ಮಧುರಗೀತ' ಎಂಬ ಖ್ಯಾತ ಕವಿತೆಯ ಭೂಮಿಕೆಯಲ್ಲಿರುವುದೂ ಈ ಸ್ನೇಹವೇ. ಮಾದಣ್ಣನ ಸ್ನೇಹಕ್ಕೊಂದು ಮಾರ್ದನಿ ಈ ಕವಿತೆ.)

೧೯೦೩ ಜುಲೈ ೩೧ ರಂದು, ಎಂದರೆ, ಶ್ರಾವಣ-ಮಾಸದ ಸಿರಿಯಾಳ ಷಷ್ಠಿಯ ದಿನ ಹುಟ್ಟಿದ ಇವರು, ಒಂದು ಪವಾಡವೆಂಬಂತೆ ಸರಿಯಾಗಿ ತಮ್ಮ ೫೦ನೆಯ ಜನ್ಮದಿನದಂದು, ಎಂದರೆ ೧೯೫೩ ಅಗಸ್ಟ್ ೧೫ ರಂದು, ಎಂದರೆ ಶ್ರಾವಣ ಮಾಸದ ಸಿರಿಯಾಳ ಷಷ್ಠಿಯ ದಿನದಂದೇ (ಈ ಬದುಕಿನಿಂದ ಸ್ವಾತಂತ್ರ್ಯ ಪಡೆದುಕೊಂಡು) ತೀರಿ ಹೋದರು. ಅವರು ಗಾಢವಾಗಿ ನಂಬಿದ್ದ ಅರವಿಂದರ ಜನ್ಮದಿನವೂ ಹೌದು ಅಂದು.

ಅವರ ಜನನ ಮರಣದ ಈ ಕಾಕತಾಳೀಯ ಪವಾಡ ಹೌದೋ ಅಲ್ಲವೋ, ಆದರೆ ಲೋಣಿ-ಯಂಥ ಒಂದು ಕುಗ್ರಾಮದಲ್ಲಿ ಹುಟ್ಟಿ, ಮುಲ್ಕಿಯವರೆಗೆ ಮಾತ್ರ ಶಿಕ್ಷಣ ಪಡೆದು ನೂರು ಬಗೆಯ ಪ್ರಾರಂಭಿಕ ಅಡಚಣೆ ಎದುರಿಸಿ ದೈಹಿಕ ಅನಾರೋಗ್ಯದಿಂದ ಬಳಲಿ, ಈ ಮಧ್ಯದಲ್ಲೂ, ಲಿಪಿಶಾಸ್ತ್ರ, ಭಾಷಾಶಾಸ್ತ್ರ, ಜನಪದ ಸಾಹಿತ್ಯ, ಕಾವ್ಯ, ಕಾವ್ಯರೂಪಕ, ಪ್ರಬಂಧ, ಆತ್ಮಕಥನ, ಅನುವಾದ, ಯೋಗ ವಿಚಾರ, ಸಣ್ಣ ಕಥೆ ಮುಂತಾದ ಮುಖಗಳಲ್ಲಿ ಅಹರ್ನಿಶಿ ದುಡಿದು, ಜ್ಯೋತಿಷ್ಯಶಾಸ್ತ್ರವನ್ನು ಕರತಲಾಮಲಕ ಮಾಡಿಕೊಂಡು, ಐವತ್ತರ ಅಲ್ಪಾಯುಷ್ಯದಲ್ಲಿ, ಅನಾರೋಗ್ಯದಲ್ಲಿ ಇಪ್ಪತ್ತೆರಡು ಭಾಷೆಗಳನ್ನು ಕಲಿತು, ಅರವಿಂದರಂಥವರಡಿಯಲ್ಲಿ ಆಧ್ಯಾತ್ಮಿಕ ಸಾಧನೆಗೈದು ... ... ಇದೆಲ್ಲದಕ್ಕೇನನ್ನೋಣ? ಬೇಂದ್ರೆಯವರು ಬರೆದಂತೆ, ಒಟ್ಟಾರೆ, "ಮಧುರ ಗೀತವ ಹಾಡಿ 'ನನ್ನ ನಲ್ಲ'ನ ಒಲಿಸಿ/ಹಲಸಂಗಿ ನಾಡಿನಲಿ ನೆಲೆಸಿ ನಿಂತ/ನನ್ನ 'ಚೆನ್ನ'ನಿಗೆಣೆಯು ಗೆಣೆಯುರಾರಿಪರು/ ಅವನೆ ಅವನಿಗು ಹೆಚ್ಚು ಅವನಿಗಿಂತ."– ಇದು ಸಂಕ್ಷಿಪ್ತದಲ್ಲಿ ಮಧುರಚೆನ್ನ 'ದರ್ಶನ.'

'ನನ್ನ ನಲ್ಲ' ಮಧುರಚೆನ್ನರ ಏಕಮಾತ್ರ

---

* ೧೯೫೦-೫೧ರಲ್ಲಿ, ನಾವು ವಿಜಾಪುರ ಜಿಲ್ಲೆಯ ಲಚ್ಯಾಣ ಗ್ರಾಮದಲ್ಲಿದ್ದಾಗ, ನಮ್ಮ ತಂದೆ-ಯವರ ಸ್ನೇಹಿತರೂ ಆಗಿದ್ದ ಮಧುರಚೆನ್ನರು ಆಗೀಗ ನಮ್ಮ ಮನೆಯಲ್ಲಿರುತ್ತಿದ್ದ ತೀರಾ ಮಸುಕಾದ ಚಿತ್ರ, ಆಗ ೬-೭ ವರುಷದವನಾಗಿದ್ದ ನನ್ನ ಜ್ಞಾಪಕದಲ್ಲಿದೆ. –ಲೇಖಕ

ಪ್ರಕಟಿತ ಕಾವ್ಯಸಂಕಲನ. ಧಾರವಾಡದ ಕರ್ನಾಟಕ ಸಾಹಿತ್ಯ ಮಂದಿರದ ಮೊದಲ ಪ್ರಕಟಣೆಯಾಗಿ, ಬೇಂದ್ರೆಯವರ ಮುನ್ನುಡಿ, ಅ. ನ. ಕೃ. ಅವರ ಸಹಕಾರ, ಮಾಳವಾಡರ ನೆರವು ಇತ್ಯಾದಿಗಳೊಂದಿಗೆ, ದಿ. ೧೨-೫-೧೯೩೩ರಂದು, ತರೀಕೆರೆ ಶಿವಲಿಂಗಯ್ಯನವರಿಂದ ಪ್ರಕಟವಾದ ಕೃತಿ, 'ನನ್ನ ನಲ್ಲ.'

ನಮ್ಮ ಬಹುಜನ ವಿಮರ್ಶಕರು, ಓದುಗರು ಓದಿರುವ 'ನನ್ನ ನಲ್ಲ'ದ ಆವೃತ್ತಿಗೂ ಮತ್ತು ನಾನು ಸದ್ಯಕ್ಕೆ ಆಯ್ದುಕೊಂಡಿರುವ ಆವೃತ್ತಿಗೂ ಒಂದು ವ್ಯತ್ಯಾಸವಿದೆ. ಅದೆಂದರೆ, ನಮ್ಮ ಹೆಚ್ಚಿನ ಜನ ಕಂಡ ಆವೃತ್ತಿಗಳು, ೧೯೫೫ ರಿಂದ ಈಚೆಗೆ, ಎಂದರೆ ಕವಿಯ ಮರಣಾನಂತರ ಪ್ರಕಟವಾದವುಗಳು. ಇವುಗಳಲ್ಲಿ ೬೦ ಕವಿತೆಗಳಿವೆ. ಆದರೆ, ಅವುಗಳಲ್ಲಿ (ಕವಿತೆಗಳಲ್ಲಿ) ಹೆಚ್ಚಿನವೆಲ್ಲ ಈಚಿನ ಆವೃತ್ತಿಗಳಲ್ಲಿ ಮಾತ್ರವೇ ಸೇರಿಸಲ್ಪಟ್ಟಂತಹವು. ೧೯೩೩ರಲ್ಲಿ ಮೊದಲ ಬಾರಿ ಪ್ರಕಟವಾದ ಆವೃತ್ತಿಯಲ್ಲಿದ್ದವುಗಳು, (೭೭ ಪುಟಗಳ ವ್ಯಾಪ್ತಿಯಲ್ಲಿದ್ದ) ೧೫ ಪದ್ಯಗಳು ಮಾತ್ರ. ಹಾಗಿದ್ದೂ, ಆಗಿನಿಂದ ಈಗಿನವರೆಗಿನ ವಿಮರ್ಶಕರು ಹೇಳುವ, ಮಧುರಚೆನ್ನರ, ಭಿನ್ನ ಅಭಿರುಚಿ ಪಾತಳಿಯ ಎಲ್ಲ ಉತ್ತಮ ಕವಿತೆಗಳೂ ಈ ಮೊದಲ ಆವೃತ್ತಿಯಲ್ಲಿರುವುದು ಒಂದು ವೈಶಿಷ್ಟ್ಯ. (ಉದಾ: ದೇವತಾ ಪೃಥಿವೀ, ಧ್ರುವ, ನನ್ನ ನಲ್ಲ, ಮಧುರಗೀತ, ಇತ್ಯಾದಿ.) ಆದ್ದರಿಂದ ಈ ಮೊದಲ ಆವೃತ್ತಿಯನ್ನು ಮಾತ್ರವೇ ಅಧಿಕೃತವೆಂದು ಭಾವಿಸಿ ನಾನು ಇಲ್ಲಿ ಎತ್ತಿಕೊಂಡಿದ್ದೇನೆ.

'ನನ್ನ ನಲ್ಲ'ದ ಒಟ್ಟು ಹದಿನೈದು ಕವಿತೆಗಳಲ್ಲಿ ಗಮನಿಸಲೇಬೇಕಾದ ಎತ್ತರದ ಕವಿತೆಗಳು ನಾಲ್ಕು: ಧ್ರುವ, ನನ್ನ ನಲ್ಲ, ಮಧುರಗೀತ ಮತ್ತು ದೇವತಾ ಪೃಥಿವೀ.

ಮಧುರಚೆನ್ನರು ತಮ್ಮ ಮೊದಲ ಹಂತದಲ್ಲಿ ಬರೆದ ಕವಿತೆಗಳಲ್ಲಿ ಎದ್ದು ಕಾಣುವಂತಹ 'ಭಾವಗೀತಾತ್ಮಕ ಕವಿತೆ' ಧ್ರುವ. ಪುಟ್ಟ ಮಗ ಧ್ರುವನನ್ನು ಕಳೆದುಕೊಂಡ ಸುನೀತಿ ತಾಯಿಯ ಆತಂಕದ ಕ್ಷಣಗಳು, ಉದ್ವೇಗದ ಒಳಕುದಿ, ತಳಮಳದ ಫಡಫಡ, ಅಸಹಾಯದ ಹೊಯ್ದಾಟ, ಎಲ್ಲವೂ ಶಬ್ದ ಮಾತ್ರದಿಂದಲೇ ನಾಟಕೀಯವಾಗುವ ಶಕ್ತಿ ಇಲ್ಲಿಯ ಸಂಚಾರಕ್ಕಿದೆ.

"ಸಣ್ಣ ಕೂಸು! ಐದು ವರ್ಷ! ತುಂಬಲಿಲ್ಲ ಇನ್ನೂ ತನಕ! ಎನ್ನ ಕೂಸು ಎಲ್ಲಿ ಹೋಯಿತು?— ಸಣ್ಣ ಗಿಣಿಯು ಕತ್ತಲಲ್ಲಿ ಎಲ್ಲಿ ಹಾರಿತು?" ಎಂದು ಕೇಳುವ ಪ್ರಶ್ನೆ ಆ ಕತ್ತಲಲ್ಲೂ ನಮ್ಮ ಎದೆಯನ್ನು ನಾಟುವ ಶಕ್ತಿಯನ್ನು ಪಡೆಯುವುದು ಈ ನಾಟಕೀಯತೆಯಿಂದಾಗಿಯೇ, ಅಂತಃಕರಣವನ್ನು ಬಡಿದೆಬ್ಬಿಸುವ ತನ್ನ ತುಂಬು ಭಾವದಿಂದಾಗಿಯೇ, ಮುಖ್ಯವಾಗಿ ಭಾವದ ಮುಸುಕಿನಲ್ಲಿಯೂ ಸಣ್ಣಗೆ ಹಬೆಯಾಡುವ ಅನುಭಾವದ ಸೂಕ್ಷ್ಮ ಸುಳಿದಾಟದಿಂದಾಗಿಯೇ.

ಈ 'ಧ್ರುವ' ಕವಿತೆ ಮಧುರಚೆನ್ನರ ಕಾವ್ಯ ಬದುಕಿಗೆ ಸಂಬಂಧಿಸಿದಂತೆ ಒಂದು ಹೊಸ ಮಜಲನ್ನು ತೆರೆಯಿತು ಎಂಬುದಷ್ಟೇ ಅಲ್ಲ, ಅವರ ವೈಯಕ್ತಿಕ ಬದುಕಿನಲ್ಲಿಯೂ ಒಂದು ಅದಕ್ಕೂ ಮಹತ್ವದ ತಿರುವನ್ನು ತಂದಿತು. ೧೯೨೮ರ ವಿಜಾಪುರ ಸಾಹಿತ್ಯ ಸಮ್ಮೇಳನದಲ್ಲಿ, ಮೊದಲ ಬಾರಿ ಈ ಕವಿತೆಯನ್ನು ಮಧುರಚೆನ್ನರು ಓದಿದಾಗಲೇ, ಬೇಂದ್ರೆಯವರು ಅವರಿಂದ ಆಕರ್ಷಿತರಾಗಿ ಅವರನ್ನು ತಮ್ಮ ಆಯಸ್ಕಾಂತ ಅಂತಃಕರಣದತ್ತ ಎಳೆದುಕೊಂಡರು. ಮುಂದೆ ಎರಡು ದೇಹ ಒಂದು ಜೀವವೆಂಬುಷ್ಟು ನಿಕಟ ನಿಸ್ಪೃಹ ಸ್ನೇಹದಿಂದ ಬದುಕಿಡೀ ಪರಸ್ಪರ ಸ್ಪಂದಿಸಿದ ಒಂದು ಮಹಾನ್ ಕೊಡು-ಕೊಳ್ಳುವಿಕೆಗೆ ಈ 'ಧ್ರುವ' ಕವಿತೆಗೆ ಕಾರಣ-ವಾಯಿತು. ಇದರಿಂದಾಗಿಯೇ ಇಂದಿಗೂ ಮಹತ್ವದ್ದೆಂದು ತೋರುವ ಎಷ್ಟೋ ಉತ್ತಮ ಕವಿತೆಗಳು ಉಭಯತರಿಂದ ಉಗಮಗೊಂಡವು.

ಮಧುರಚೆನ್ನರು ಮುಖ್ಯವಾಗಿ ಒಬ್ಬ ಅನುಭಾವಿ ಕವಿ. ಆದ್ದರಿಂದ ಇವರ ಮುಖ್ಯ ರಚನೆಗಳಲ್ಲೆಲ್ಲ ಅರಳಿಕೊಳ್ಳುವದು ಸಾಧಕನೊಬ್ಬನ ಶೋಧನೆ. ಇಲ್ಲಿ ಒತ್ತು ಬೀಳುವದು ಅಲೌಕಿಕದ ಎಳೆತದತ್ತ, ಇಲ್ಲಿ ಅಭಿವ್ಯಕ್ತಗೊಳ್ಳುವದು ಆಧ್ಯಾತ್ಮಿಕ ತಿಳುವಳಿಕೆ. ಇಲ್ಲಿ ಪ್ರಕಾಶ-ಗೊಳ್ಳುವದು ದರ್ಶನದ ಬೆಳಕು. ಆದರೆ ಹಾಗೆಂದು ಮಧುರಚೆನ್ನರು, ಆಧ್ಯಾತ್ಮದ

ಮುಸುಕಿನಲ್ಲಿ ಪಲಾಯನಗೈಯುವ ಕವಿಗಳಿಂದೂ ಆಗಿಲ್ಲ. ಲೌಕಿಕ ಅಂತಃಕರಣದ ಎಳೆಗಳಲ್ಲೂ ಅಲೌಕಿಕದ ಅಂತಃಸತ್ವವನ್ನು ಕಂಡವರು ಅವರು. ಎಂತಲೇ ಅವರ 'ನನ್ನ ನಲ್ಲ' ಎಷ್ಟು ಯಶಸ್ವಿ ಎನಿಸುತ್ತದೋ, ಅಷ್ಟೇ ಯಶಸ್ವಿ ಎನಿಸುತ್ತದೆ, 'ಮಧುರಗೀತ'.

ಅರವಿಂದರ ಯೋಗ ವಿಚಾರಗಳಿಂದ ಪ್ರಭಾವಿತರಾಗಿದ್ದ ಮಧುರಚೆನ್ನರ ಪರಿಭಾಷೆಯಲ್ಲಿ ಹೇಳುವುದಾದರೆ, 'ಮಧುರಗೀತ' ಒಂದು ರೀತಿಯ 'ಮೈತ್ರಿಯೋಗ'. ಏಕೆಂದರೆ ಈಗಾಗಲೇ ಹೇಳಿದಂತೆ, ಈ ಕವಿತೆಯು ತಳಪಾಯಕ್ಕಿರುವುದು ಮಾವಣ್ಣನ ಜೊತೆಗಿನ ಸ್ನೇಹಭಾವ.

"ಬಹು ದಿನದ ಬಯಕೆಯೊಂದಿತ್ತೆನ್ನ ತಮ್ಮಯ್ಯ! ನಿನ್ನ ಮೇಲೊಂದು ಹಾಡೇನೆಂಬುವಾ।। ಹಲವು ದಿನದಿಂದಲೂ ಪ್ರತಿಭೆ ಮಲಗಿದ್ದವಳು। ಇಂದಿದೇ ಎದ್ದಿಹಳು ಬಾ ನೋಡುವಾ।।"

ಹೀಗೆ, ಕೇವಲ ಒಂದು ಸ್ನೇಹಸೂಕ್ತ ಮಾತ್ರವಾಗಿ ಆರಂಭವಾದರೂ, ಅದಕ್ಕೆ ಕ್ರಮೇಣವಾಗಿ ತೊಡೆದುಕೊಳ್ಳುವ, ಒಂದು ಯೋಗ ಮಾತ್ರವೆಂಬಂತಹ ಅಲೌಕಿಕ ನಿಲುವುಗಳ ಸ್ಪರ್ಶದಿಂದ ಇಡಿಯ ಕಾವ್ಯಕ್ಕೆ ಒಂದು ಹೊಸದೇ ಆದ ಹೊಳಪು ಬಂದುಬಿಡುವುದು ಕುತೂಹಲದ ಸಂಗತಿಯಾಗಿದೆ. ಇದೇ ರೀತಿಯಾಗಿ, ತಮ್ಮನ್ನೆ ಒಳಗೊಳ್ಳುವ, ತಮ್ಮಲ್ಲೇ ತಮ್ಮ ತಾದಾತ್ಮ್ಯವನ್ನು ಸಾಧಿಸಿಕೊಳ್ಳಲೆತ್ನಿಸುವ 'ಆತ್ಮಯೋಗ'ವನ್ನು 'ನನ್ನ ನಲ್ಲ' ಕವನದಲ್ಲಿ ಕಾಣಬಹುದು.

ಒಂದು ದೃಷ್ಟಿಯಿಂದ 'ಮೈತ್ರಿಯೋಗ' ಮತ್ತು 'ಆತ್ಮಯೋಗ' ಇವೆರಡನ್ನೂ ಒತ್ತುಕೊಟ್ಟು ಪ್ರತಿಪಾದಿಸುವ ಈ ಎರಡೂ ಕವಿತೆಗಳು ಒಂದು ದೃಷ್ಟಿಯಿಂದ ಮಧುರಚೆನ್ನರ ಕಾವ್ಯನಾಣ್ಯದ ಎರಡು ಮುಖಗಳಾಗಿವೆ; ಅನಿವಾರ್ಯಸ್ಥಿತಿಗಳಾಗಿವೆ. ಏಕೆಂದರೆ, ಸತ್ಸಂಗವೇ ನಿಸ್ಸಂಗತ್ವದ ಮೊದಲ ಸೋಪಾನ. ಎಲ್ಲವನ್ನೂ ಒಳಗೊಳ್ಳುವ ಸಾಧ್ಯತೆಯುಳ್ಳವನು ಮಾತ್ರ ಎಲ್ಲದರಿಂದ ದೂರವಿರುವ ಸಾಮರ್ಥ್ಯ ಪಡೆಯುತ್ತಾನೆ. ತೊಡಗಿ ಪಡೆದುಕೊಳ್ಳುವ ಲೌಕಿಕದ ಮುಖಾಂತರವೇ ತ್ಯಜಿಸಿ ದೊರಕಿಸುವ ಅಲೌಕಿಕವನ್ನು ಮನುಷ್ಯ ಅನುಭವಿಸುತ್ತಾನೆ. ಆದರೆ, ಈ ಎರಡೂ ಅನುಭವಗಳ ಆಳದಲ್ಲೇ ತನ್ನ ಆಧ್ಯಾತ್ಮಿಕ ಅವಸ್ಥೆಗಳನ್ನೂ ಕಾಣುತ್ತಾನೆ ಸಾಧಕ. ಆತ ಏರಿದ 'ಅವಸ್ಥೆ'ಗನುಗುಣವಾಗಿ ತಕ್ಕಷ್ಟು, ಬೆಳಕು ಪ್ರಕಾಶಿಸುತ್ತದೆಂದು ಬೇರೆ ಹೇಳಬೇಕಾಗಿಲ್ಲ. ಇಂಥ ಸಾಧಕನ ಎರಡೂ ಅನುಭವಗಳನ್ನು ಪ್ರಬುದ್ಧವಾಗಿ ದಾಖಲಿಸುವ ಎರಡು ಯಶಸ್ವಿ ಪ್ರಯತ್ನಗಳು; 'ನನ್ನ ನಲ್ಲ' ಮತ್ತು 'ಮಧುರಗೀತ'.

ಆದರೆ 'ದೇವತಾ ಪೃಥಿವೀ' ಮಾತ್ರ ಮಧುರಚೆನ್ನರ ಅತ್ಯುತ್ತಮವೆನ್ನಬಹುದಾದ ಕವಿತೆ ಎಂಬುದು ನಿರ್ವಿವಾದ. ಲೌಕಿಕದ ಎಲ್ಲ ವ್ಯಾಪ್ತಿ-ಗಳನ್ನು ಮಿಕ್ಕಿ ಅಲೌಕಿಕದತ್ತ ಅರಳಿಕೊಳ್ಳಬಯಸುವ ಸಾಧಕನೊಬ್ಬನ ಮೊರೆ ಮಗುವಾತಾಗಿ ಇಲ್ಲಿ ಮೂಡಿ ಬಂದಿದೆ. ಪೃಥ್ವಿ ಎಷ್ಟು ಮಟ್ಟಿಗೆ ಮಾತೃತ್ವದ ಸಂಕೇತವೋ ಅಷ್ಟೇ ಮಟ್ಟಿಗೆ ದೇವತ್ವದ ಸಂಕೇತವೂ ಹೌದು. ಆದ್ದರಿಂದ ಇದು ಎಷ್ಟು ಮಟ್ಟಿಗೆ ಅಲೌಕಿಕದ ತಾಣವೋ ಅಷ್ಟೇ ಮಟ್ಟಿಗೆ ಅಲೌಕಿಕದ ಸೋಪಾನವೂ ಹೌದು. ಎಂತಲೇ, ಲೌಕಿಕದ ಎಲ್ಲ ಸೌಭಾಗ್ಯಗಳನ್ನುಂಡಿದ್ದರೂ, ಅಲೌಕಿಕದ ಆದಮ್ಯತೆಯತ್ತ ಹಾತೊರೆಯುವ ಸಾಧಕನ ಎಲ್ಲ ಉತ್ಕಟತೆಗಳು, ಆಶೆ ಅಭೀಪ್ಸೆಗಳು ತುಳುಕಿಬಿಡುವಷ್ಟು ತುಂಬಿದ ಧ್ವನಿಯಲ್ಲಿ ಇಲ್ಲಿ ತೊಡೆದು ನಿಂತಿವೆ. ಕನ್ನಡದ ಕೆಲವೇ ಶ್ರೇಷ್ಠ ಕವಿತೆಗಳಿಗಿರಬಹುದಾದ ಅನೇಕ ಪಲುಕುಗಳನ್ನಿತ್ತ ಮಧುರಚೆನ್ನರು ಈ ಕವಿತೆಯ ಮುಖಾಂತರ ಸಹಜವಾಗಿಯೇ ನಮ್ಮ ಅನಿವಾರ್ಯ ಮಹತ್ವದ ಆಧ್ಯಾತ್ಮಿಕ ಕವಿಗಳಾಗುತ್ತಾರೆ.

"ಲೇಸನ್ನು ಕಂಡು ಲೇಸಾಗಿ ಕೀರ್ತಿಸಲಾಗದ ಹೃದಯದೌರ್ಬಲ್ಯವು ಹೀನವಾದುದು" ಎಂದು ಮಧುರಚೆನ್ನರ ಕಾವ್ಯವನ್ನು ಮೌಲ್ಯಾತ್ಮಕವಾಗಿ ವಿವೇಚಿಸುತ್ತ, "ಇಂಥವರಿಂದ ಇದಕ್ಕೂ ಉತ್ತಮ ಕಾವ್ಯವನ್ನು ಅಪೇಕ್ಷಿಸಿದರೆ ತಪ್ಪಾಗದು" ಎಂದು ಮುನ್ನುಡಿಸಿದ (೫-೫-೩೩) ಬೇಂದ್ರೆಯವರ ಅಪೇಕ್ಷೆಯನ್ನು ಆಚೆಗಿರಿಸಿ, ಇನ್ನಷ್ಟು ಎತ್ತರದ ಇನ್ನೊಂದು ಸಂಗ್ರಹವನ್ನು ನೀಡುವ ಮೊದಲೇ ಈ ಕವಿ ಕಾಣದಾಚೆಗೆ ನಡೆದುಹೋದದ್ದು ಕನ್ನಡಿ

ಗರ ದುರ್ದೈವ. ಹಾಗಿದ್ದೂ, ಒಂದು ಮೊದಲ ಸಂಗ್ರಹ ಮಾತ್ರದಿಂದಲೇ ಕಾವ್ಯಪ್ರೇಮಿಗಳ ಎದೆಯಲ್ಲಿ ಎಲ್ಲೆ ಪಡೆದ 'ನನ್ನ ನಲ್ಲ'ದ ಸಾಧನೆ ಚಿಕ್ಕದೇನಲ್ಲ.

೨೫

# ಗಂಗಾಧರ ಚಿತ್ತಾಲ/ಹರಿವ ನೀರಿದು

**ಇಂಥ ಹಾಡನ್ನು ಹಾಡಬೇಕಲ್ಲ ಅದ ಕೇಳಿ**
**ದಂಥ ಜಗ ತಿವಿದಂತೆ ಎದ್ದು ಕುಳ್ಳಿರಬೇಕು**
**ಮತ್ತು ಕೇಳಿರಬೇಕು.**
**'ಇದು ಎಂಥ ಹಾಡು?'**

ಎಂದು, ಒಂದು ಹಾಡಿನ ವ್ಯೋಮವ್ಯಾಪಕ ಧ್ವನಿಶಕ್ತಿಯ ಅಪಾರತೆಯನ್ನು, ಅಗತ್ಯತೆಯನ್ನು ಅದಮ್ಯವಾಗಿ ಪ್ರತಿಪಾದಿಸಿದ ಕವಿ ಗಂಗಾಧರ ಚಿತ್ತಾಲರು.

'ಕಾಲದ ಕರೆ'ಗೆ ಓಗೊಟ್ಟು ತಮ್ಮ ಕಾವ್ಯೋದ್ಯೋಗವನ್ನು ಆರಂಭಿಸಿದ ಕವಿ ಗಂಗಾಧರ ಚಿತ್ತಾಲ. ಆ ಸಂಗ್ರಹದಲ್ಲಿ ನೀಡಿದ್ದ ಬೆಳವಣಿಗೆಯ ಸೂಚನೆಗೆ ಇನ್ನೂ ಎತ್ತರದ ಸಾಧನೆಗೈದು, ನಂತರ 'ಮನುಕುಲದ ಹಾಡ'ನ್ನು ನೀಡಿದರು. ಒತ್ತು ಕೊಟ್ಟು ಹೇಳುವ ಅಂಶವೆಂದರೆ ಈ ಸಂಗ್ರಹದಲ್ಲಿ ಬಂದ 'ದುಃಖ ಗೀತ'ದಂತಹ ವಸ್ತು, ವ್ಯಾಪ್ತಿ ಮತ್ತು ಸಮರ್ಥ ನಿರ್ವಹಣೆಯ ಇನ್ನೊಂದು ಕವಿತೆ ಇನ್ನೂ ಬರಬೇಕಾಗಿದೆ. ಅವರ ಪ್ರಸ್ತುತ ಸಂಗ್ರಹವಾದ 'ಹರಿವ ನೀರಿದು' ಸಂಕಲನದಲ್ಲಿ ಕೂಡ ಆ ಬೀಸಿನ (ಎಂದರೆ ಆ ವಸ್ತುಗೆ ಸಂಬಂಧಿಸಿದಂತೆ) ಒಂದಾದರೂ ಪದ್ಯಗಳಿಲ್ಲ. ಹಾಗಿದ್ದೂ, ಉಳಿದ ಕಾವ್ಯಗಳಿಗೆ ಸಂಬಂಧಿಸಿದಂತೆ, ಪ್ರಬುದ್ಧ ಕಾವ್ಯವೊಂದರ ಬಹಳಷ್ಟು ಗುಣಗಳನ್ನು ಚಿತ್ತಾಲರು ಎತ್ತಿ ತೋರಿಸಿದ್ದು ಈ ಸಂಗ್ರಹದಲ್ಲಿಯೇ ಎಂಬ ಕಾರಣಕ್ಕಾಗಿ ಇದನ್ನು (ಹರಿವ ನೀರಿದು) ಆಯ್ಕೆ ಮಾಡಿಕೊಂಡಿದ್ದೇನೆ. (ಸ್ವತಃ 'ಪಾರ್ಕಿನ್‌ಸನ್' ವ್ಯಾಧಿಯಿಂದ ಬಳಲುತ್ತಿದ್ದರೂ, ಚಿತ್ತಾಲರು, ಕನ್ನಡ ಕಾವ್ಯಕ್ಕೆ ಒಂದು ಹೊಸ ಬಗೆಯ 'ಆಕ್ಸಿಜನ್' ನೀಡಿದ್ದು ಈ ಸಂಗ್ರಹದಲ್ಲಿಯೇ ಎಂದು ನಾನು ನಂಬಿದ್ದೇನೆ.)

ಸರ್ವೋದಯದ ಮಾರ್ದವತೆ, ಸಪುರು ಮತ್ತು ಭಾವತೀವ್ರತೆಗಳೊಂದಿಗೆ ಸಪ್ಪದ ಮೈಕಟ್ಟು, ಲಯ ಮತ್ತು ಪ್ರಬಂಧ ಗುಣಗಳನ್ನು ಅಳವಡಿಸಿಕೊಂಡ ಚಿತ್ತಾಲರ ಕಾವ್ಯದ ಹಿರಿಮೆ ಇನ್ನೂ ಹೆಚ್ಚಾಗುವುದು, ಅದು, ತಾನು ನಿಂತ ನೆಲದ ಗಟ್ಟಿತನದಿಂದಾಗಿ, ವಾಸ್ತವದ ನಿಶಿತತೆಯಿಂದಾಗಿ ಮತ್ತು ಮುಖ್ಯವಾಗಿ, ಬದುಕಿನಲ್ಲಿಯ ಗಾಢ ವಿಶ್ವಾಸದಿಂದಾಗಿ.

ಮನುಷ್ಯನ ಮರ್ತ್ಯತೆ, ಜೀವದ ವಿಸ್ತಾರ, ಗೈಯಬೇಕಾದ ಕರ್ತವ್ಯ, ಬಾಚಬೇಕಾದ ಬದುಕು, ಕಾಲನ ಬಂಧತೆ, ಮರಣದ ಅನಿವಾರ್ಯ, ಬದುಕಿನ ಆಕಸ್ಮಿಕ, ಉಕ್ಕುವ ಉತ್ಸಾಹ, ಜೀವದ ಅನಂತತೆ, ಹೀಗೆ ಸಾವಿರ ಮುಖಗಳಲ್ಲಿ ಕುಡಿಯೊಡೆಯುವ, ಕವಲೊಡೆಯುವ ನಿರಂತರ ಪ್ರವಹಿಸುತ್ತಲೇ ಇರುವ ಬದುಕನ್ನು ಅಕ್ಷರಗಳಲ್ಲಿ ಕಟ್ಟಿ ನಿಲ್ಲಿಸಿದ ಒಂದು ಕಾವ್ಯಕೌಶಲವೇ 'ಹರಿವ ನೀರಿದು' (ಎಂಬ ಮುಖ್ಯ ಕವನ.)

ಬದುಕಿನ "ಈ ಜೀವ ಕ್ಷೇತ್ರದಲ್ಲಿ ಹೊಡೆ ತುಂಬಿ ನಿಂತಷ್ಟೆ/ ಉಡಿ ತುಂಬಿ ಬಂದಷ್ಟೆ ದಾರಿಯ ಫಲ" ಎಂಬುದು ನಿಜ. ಹಾಗಿದ್ದೂ, ಬದುಕಿನ ಶ್ರದ್ಧೆಯ ಹಿನ್ನೆಲೆಯಲ್ಲಿ ಕವಿ ಈಯುವ ಕರ್ತವ್ಯದ ಕರೆ, "ಗೈ, ಅಗು, ಆಕಾರ ತಾಳು, ಪದ ಪಡೆದು ಬಾ."

ಎಲ್ಲ ಸೀಮಿತತೆಗಳ ಮಧ್ಯ, ಎಲ್ಲ ಮರಣಗಳ ಮಧ್ಯ, ನಿರುತ್ಸಾಹ ನಿರ್ವೀರ್ಯತೆಗಳಿಂದ ಜೀವ, ತಿಂದು ಹಾಕುವ ಆವರಣಗಳ ಮಧ್ಯ ಅನುರಣಿತ ಉತ್ಪಾತಗಳ ಮಧ್ಯವೂ ತಾವು ಯೋಚಿಸಬೇಕಾದದ್ದು ಬದುಕಿನ ಭವ್ಯತೆಯ ಬಗ್ಗೆ. ಈ ಎಲ್ಲವುಗಳ ಮಧ್ಯದಲ್ಲೂ ಅದು ನೀಡಿದ 'ಎಚ್ಚರ' ಗುಣದ ಬಗ್ಗೆ.

"ಈ ಮಹಾಸ್ವಪ್ನ ತಪಿ ಉದ್ಭವಿಸಿ ಬಂದಿದೆವಲ್ಲ/ ಅದೇ ಒಂದು ಹಿಗ್ಗು. ಪಕ್ಷಿತ್ತು ಸಿಂದಿದೆವಲ್ಲ/ ಅದೇ ಒಂದು ನೆತ್ತರಲಿ ದಿನ ರಾತ್ರಿ ಹರಿವ ಸುಖ" 'ಹರಿವ ನೀರಿದು' ಹೊರೆವ ಅನವರತ ಸಂದೇಶ ವಿದು.

ಮನುಷ್ಯ, ಸಮೂಹ ಮತ್ತು ಬದುಕು ಇವು ಗಳ ಪರಸ್ಪರ ಸಂಬಂಧಗಳನ್ನೂ, ಆಶಯ ಗಳನ್ನೂ, ಗೂಢಗಳನ್ನೂ ಕೊಡುಕೊಳ್ಳುವ ವ್ಯವಹಾರಗಳನ್ನೂ, ಕಟ್ಟಿಕೊಳ್ಳುವ ಗಳಿಗೆ ಗಳನ್ನೂ, ಕಳಚಿಕೊಳ್ಳುವ ಬಿಂದುಗಳನ್ನೂ, ಬದುಕಿನ ಉತ್ಕಟಗಳನ್ನೂ, ಉತ್ಕರ್ಷದ ಉತ್ತುಂಗಗಳನ್ನೂ, ಹೀಗೆ ಬದುಕಿನ ಅನೇಕ ಹಂತಗಳನ್ನೂ, ಅವುಗಳಿಗೆ ಸಂಬಂಧಿಸಿದ ಜೀವದ ಪಲುಕುಗಳನ್ನೂ,— ಪರಿಚಯ ಮತ್ತು ಮೌಲ್ಯ ವಿವೇಚನೆ ಸಹಿತವಾಗಿ— ಪ್ರಸ್ತುತಪಡಿಸಲು ಪ್ರಯತ್ನಿಸುವ ಚಿತ್ತಾಲರ ಪ್ರಯತ್ನ, ನಮ ಮಧ್ಯದಲ್ಲಿ ಸದ್ದಿಲ್ಲದೆ ನಡೆಯುತ್ತಿರುವ ಒಂದು ಕೌತುಕ.

ಮನುಷ್ಯನ ಪರಸ್ಪರ ಸಂಬಂಧಗಳು (ಒಂದು ಉತ್ತುಂಗದಲ್ಲಿ) ಅವಚಿಕೊಳ್ಳುವ, ಅರಳಿ ಕೊಳ್ಳುವ, ತಲೆ ಬುಡದವರೆಗೂ ಜುಮ್ಮೆನ್ನಿಸುವ ಗಳಿಗೆಗಳು, ಮುಖ್ಯವಾಗಿ ಎರಡು: ಒಂದು, ಕಾಮ ಇನ್ನೊಂದು ಸಾವು, ಒಂದು, ಆಗಮನದ ವಿಜೃಂಭಣೆಯ ಕ್ಷಣವಾದರೆ, ಇನ್ನೊಂದು, ನಿರ್ಗಮನದ ವಿಷಣ್ಣತೆಯ ಕ್ಷಣ. ಒಂದು, ತೆಕ್ಕೆಯ ಮೂಲಕ ವ್ಯಕ್ತಿತ್ವವೆ ಅರಳಿಕೊಳ್ಳ ಬೇಕಾದಗಳಿಗೆಯಾದರೆ, ಇನ್ನೊಂದು ವ್ಯಕ್ತಿತ್ವದ ತೆಕ್ಕೆಯೆ ಕಳಚಿ ಕುಸಿದು ಬೀಳುವ ಗಳಿಗೆ ಈ ಎರಡೂ ಬಗೆಯ ಕ್ಷಣಗಳನ್ನು— ತುರ್ತು ತೀವ್ರ ಗಳನ್ನೂ— ಎರಡು ಅತ್ಯುತ್ತಮ ಕವಿತೆಗಳಲ್ಲಿ ಹಿಡಿದಿಟ್ಟದ್ದಾರೆ ಚಿತ್ತಾಲರು. ಒಂದು; 'ಕಾಮ ಸೂತ್ರ,' ಇನ್ನೊಂದು; 'ಅಣ್ಣ'.

'ಕಾಮಸೂತ್ರ' ಕವಿತೆಯ ಒಂದು ಹಂತದ ಕೆಲವು ಸಾಲುಗಳು; "ಆ ಒಂದು ಗಳಿಗೆಯಲ್ಲಿ ಏನು ಗೈದರು ಮಾಫಿ/ ಕಾಡಿದರು ಬೇಡಿದರು ಹಿಡಿಹಿಡಿದು ಆಡಿದರು ಮಾಫಿ/ ಸಂದಿಯಲ್ಲಿ ಮೂಲೆಯಲ್ಲಿ ಕೈ ಹಾಕಿ ಬೆದಕಿದರು, ಯಾವ ಗುಟ್ಟನು ಕೆದಕಿದರು ಮಾಫಿ."

'ಅಣ್ಣ' ಪದ್ಯದ, ಒಂದು ಘಟ್ಟದ ಕೆಲವು ಸಾಲುಗಳು; "ಮತ್ತೆ ಗಾಳಿಗೆ ಗಾಳಿ ಬಯಲಿಗೆ ಬಯಲು/ ಆದ ಮೇಲೂ/ ನಾಲಗೆಯ ಮೇಲೆಲ್ಲ ಇವನದೇ ಹೆಸರು, ಎದೆಯಲ್ಲೆಲ್ಲ/ ಇವ ಬಿಟ್ಟು ಹೋದ ಅಕ್ಕರೆಯ ಸವಿ."

ಈ ಎರಡು ಕವಿತೆಗಳಿಂದ ಆಯ್ದ ಈ ಸಾಲು ಗಳೇ, ವಿಸ್ಮಯಕರ ವೈಷಮ್ಯ ಮತ್ತು ಸಾದೃಶ್ಯ ಗಳ ಬದುಕಿನ ವಿಚಿತ್ರ ರಹಸ್ಯಗಳತ್ತ ಬೆಳಕು



ಓಡಿಯುತ್ತವೆ. ತೆಕ್ಕೆಯು ಒಳಾಂಗಣದಲ್ಲೇ ನಡೆಯುವ ಆಟಗಳೇ ಎರಡು. ಆದರೂ ಎಂಥ ಭಯಂಕರ ವಿಪರ್ಯಾಸ! ಬಹುಶಃ ಬದುಕೇ ಹೀಗೇನೊ? ಏಕೆಂದರೆ 'ಸೃಷ್ಟಿ'ಯಂತೆಯೇ 'ಲಯ' ಕೂಡ ಬದುಕಿನ ಇನ್ನೊಂದು ಪಾರ್ಶ್ವ, (ಅನಿವಾರ್ಯ ಪಾರ್ಶ್ವ. ಆದರೆ 'ಲಯ' ಎಂದರೆ 'ಇನ್ನು ಇಲ್ಲ' ಎಂದೇನೂ ಅಲ್ಲ. ಚಿತ್ತಾಲರ ಪ್ರಕಾರ ಒಮ್ಮೆ 'ಇತ್ತು' ಎನ್ನುವದು ಎಂದಿಗೂ 'ಇಲ್ಲ' ಎಂದಾಗುವದೇ ಇಲ್ಲ, ತಮ್ಮ 'ತಾಯಿ' ಕವನದ ಕೊನೆಗೆ ಅವರು ಹೇಳುತ್ತಾರೆ!

"ಇಂದಿಗೂ ಅದೇ ಕಣ್ಣ ಕಾವಲ ನೆನಪು, ಅದೇ ನೀರುಂಡ ಮಣ್ಣ ತಂಪು/ ಊಡುತಿದೆ ತಾಯಿಬೇರು/ ಹೇಗೆ ಒಪ್ಪಲಿ ಈಗ ಏನೂ ಉಳಿದಿಲ್ಲವೆಂಬ ದೂರು?"

ಆರಂಭದಲ್ಲಿ ಪ್ರಸ್ತಾಪಿಸಿದಂತಹ 'ಇಂಥ ಹಾಡು' ಎಂಬುದು ಚಿತ್ತಾಲರ ಇನ್ನೊಂದು ಮಹತ್ವದ ಕವನ. ಆಶಯಗಳನ್ನು ಮತ್ತು ಸಾಮರ್ಥ್ಯಗಳನ್ನು ಮರೆತು ಕೇವಲ ಆಶೆ ಮತ್ತು ಸ್ವಾರ್ಥಗಳ ಹಿನ್ನೆಲೆಯಲ್ಲಿ, ಕುಬ್ಜ ಮಿತಿ, ನಿಲುವು, ಪ್ರಣಾಲಿಕೆಗಳ ಹಿನ್ನೆಲೆಯಲ್ಲಿ ಆಕರ್ಷಣೆಗಳ ಆಸರೆ ಯಲ್ಲಿ. ಸಂವಾದಕರ ಸಾಧ್ಯತೆಗಳೆಲ್ಲ ಸಂತೆಯಾಗು ತ್ತಿರುವ. ಕಿರಿಚಾಟಗಳಾಗುತ್ತಿರುವ, ಕೀಸರು ಬಾಸರಿನ ಸರ್ಕಸ್ಸುಗಳಾಗುತ್ತಿರುವ ಪ್ರಸ್ತುತ ಸಂದರ್ಭವನ್ನು ವಿವರಿಸುತ್ತಾರೆ ಕವಿ. ('I felt a cry in the whole universe'—Nietzsche.)

ಜೀವನವಿಡುವದು ಅದನ್ನು ಕಟ್ಟುವದಕ್ಕೆ; ಅದನ್ನು ಪ್ರಪಾತದೆಡೆಗೆ ತಳ್ಳುವದಕ್ಕಲ್ಲ. ಈ ನಿಲುವನ್ನು ಮಾತ್ರವೇ ಎಲ್ಲರಿಗೂ ತಗಲುವಂತೆ, ತಿಪಿಯುವಂತೆ, ಎಂದರೆ ಎಚ್ಚರಿಸುವಂತೆ ಪ್ರತಿ ಪಾದಿಸುವ ಅಗತ್ಯ ಮಾತ್ರವೇ ಈಗಿದೆ ಎನ್ನುವ ಚಿತ್ತಾಲರು, ಈ ಕವಿತೆಯ ಮುಖಾಂತರ ಬದುಕಿ ನಲ್ಲಿ. ಎಚ್ಚರದ ಕರ್ತವ್ಯದ ಜೀವನದ ಉತ್ಕಟ ತೆಯ ಅಗತ್ಯ ಅರುಹುತ್ತಾರೆ; ಆಗ್ರಹಿಸುತ್ತಾರೆ.

ಬದುಕನ್ನು ಕುರಿತಾದ ಉಚ್ಚ ಮಟ್ಟದ ತಾತ್ರಿಕ ಪ್ರತಿಪಾದನೆಗಳ ಪಕ್ಕದಲ್ಲೂ ಕವಿ ಚಿತ್ತಾ ಲರು ಸಾಧಿಸಿರುವ ಕಾವ್ಯದಲ್ಲಿಯ ಚಿತ್ರಕ ಶಕ್ತಿಯ ಬಗ್ಗೆ ಕೂಡ ನಾನು ಒತ್ತಿಹೇಳಬೇಕು. ಏಕೆಂದರೆ ತಾತ್ವಿಕ ಪ್ರತಿಪಾದನೆ, ವಿವರಣೆ, ವಿಶ್ಲೇಷಣೆ ಇತ್ಯಾದಿಗಳಿಗೆ ತೊಡಗಿದಂತೆ, ಕ್ರಮೇಣವಾಗಿ ಕವಿ ತನ್ನ ನಾಟಕೀಯ ಶಕ್ತಿ ಯನ್ನು, ದೃಶ್ಯಚಿತ್ರಕ ಶಕ್ತಿಯನ್ನು ಕಳೆದುಕೊ ಳ್ಳುತ್ತ ಹೋಗುತ್ತಾನೆ. ಆದರೆ ಚಿತ್ತಾಲರಲ್ಲಿ ಹಾಗಾಗದಿರುವದು ಒಂದು ಸಂತೋಷದ ವಿಷಯ. ಅವರ 'ತಾಯಿ' ಮತ್ತು 'ಅಣ್ಣ' ಈ ಎರಡೂ ಕವಿತೆಗಳಲ್ಲಿ ಪ್ರಕಟವಾಗುವ ಕೆಲವು ದೃಶ್ಯ ಚಿತ್ರಣಗಳು ತುಂಬ ಸೊಗಸಾಗಿ ಮೂಡಿ ಬಂದಿವೆ. ಮರಣೋನ್ಮುಖನಾದ 'ಅಣ್ಣ' ಕಂಡು ಬಂದ ರೀತಿ ಇದು.

"ಅಂಗಾತ ಬಿದ್ದಿತ್ತು ದೇಹ ಗೊರಗೊರಿ ಸುತ್ತ/ನೋಟವಿಲ್ಲದ ಗಾಜುಗಣ್ಣು, ಬಿಸಿ ಕಳ ಕೊಂಡು/ಊದಿ ನೆಟ್ಟಗೆ ಸೆಟೆದ ಕೈಕಾಲು, ಉಸಿರ ತಿದಿ ಮಾತ್ರ/ಅತಂತ್ರ ಒತ್ತುತ್ತಿತ್ತು. ಕೊನೆಯ ಉಬ್ಬಸ ಹತ್ತಿ."

ಒಂದು ಮಾತು (ಕೇವಲ ಮಾತು ಮಾತ್ರ-ವಾದ ಮಾತಲ್ಲ, ಕಾವ್ಯವಾಗಬಲ್ಲ ಮಾತು) ಕೂಡ ಕಾವ್ಯವಾಗಲು ಕಾಯಬೇಕಾದ, ಕಾವು ಕೂಡಬೇಕಾದ ಅಗತ್ಯವನ್ನು, ಅನಿವಾರ್ಯವನ್ನು ತಮ್ಮ 'ಕವನ' ಎಂಬ ಪದ್ಯದಲ್ಲಿ ವಿವರಿಸುತ್ತ, ಕೊನೆಗೆ, ತುಂಬ ಸುಂದರವಾದ ಒಂದು ಮಾತನ್ನು ಹೇಳುತ್ತಾರೆ: ಈ ಮುಖೋದ್ಗತ ನಿನ್ನ ಹೃದ್ಗತವೆ ಆದ ದಿನ/ಸುದಿನ/ಅವರೆಗು ಇದು/ತಕ್ಕ ಮಣ್ಣಿನ ತೇವಕಾಗಿ ಕಾದೇ ಇರುವ/ ಬೀಜ."

ಚಿತ್ತಾಲರ ಪ್ರಸ್ತುತ ಸಂಗ್ರಹಲ್ಲಂತೂ ಸರಿಯೇ: ತಕ್ಕದನ್ನು ಪಡೆದುಕೊಂಡು ಫಲವ ತ್ತಾಗಿಯೇ ಬೆಳೆಯಾಗಿ ಬೆಳೆದಿವೆ ಬೀಜಗಳೆಲ್ಲ. ಆದರೆ, ಹಾಗೆಯೇ, ಕನ್ನಡ ಕಾವ್ಯ ಪರಿಸರದಲ್ಲಿ, ತಕ್ಕ ಮಣ್ಣಿನ ತೇವಕಾಗಿ ಕಾದೇ ಇರುವ ಇನ್ನಿ ತರ ಅಸಂಖ್ಯ ಬೀಜಗಳಿಗೆ, ಇಗೋ, ರೇವ ವನ್ನೂ ತೇವವನ್ನೂ ಒಟ್ಟಿಗೇ ಒದಗಿಸಬಲ್ಲ, ಚಿತ್ತಾಲರ, 'ಹರಿವ ನೀರಿದು.' ✡



# ಅವಾಬಾಯಿ ವಾಡಿಯಾ

**ಕುಸುಮ ದೇಶಪಾಂಡೆ**

ಪಂಡಿತರ ಅಭಿಪ್ರಾಯದ ಪ್ರಕಾರ ಪ್ರಪಂಚದ ಜನಸಂಖ್ಯೆ ೨೦೦೦ ವರ್ಷಗಳ ಹಿಂದೆ ಕೇವಲ ೨೭ ಕೋಟಿ ಇದ್ದಿತು. ನಾವು ಕ್ರಿಸ್ತಶಕ ೨೦೦೦ ಮುಟ್ಟುವಷ್ಟರಲ್ಲಿ ಈ ಸಂಖ್ಯೆ ೬೦೦ ಕೋಟಿಯನ್ನು ಮುಟ್ಟಿ, ಈ ಪೃಥ್ವಿಯ ಮೇಲೆ ನಮಗೆ ಕಾಲೂರಿ ನಿಲ್ಲುವುದಕ್ಕೆ ಸ್ಥಳ ಕೂಡ ಸಿಗದಂತಾಗುವ ಭಯವಿದೆ.

ಕವಿವರ್ಯ ಬೇಂದ್ರೆಯವರು ೧೯೩೩ರ ಅಂಚಿನಲ್ಲಿ ರಚಿಸಿ ಪ್ರಕಟಿಸಿದ 'ಮೂವತ್ತು ಮೂರು ಕೋಟಿ' ಕವನವನ್ನು ನಾವು ಮರೆಯಬಾರದು. ಈ ಮೂವತ್ತು ಮೂರು ಕೋಟಿ ಜನ ಭಾರತೀಯರ ಜೀವನದ ಮಟ್ಟ ಎಂಥದಿತ್ತು? ಬೇಂದ್ರೆ ಹೇಳುತ್ತಾರೆ:

**ಹಲ ಕೆಲವು ಹುಳುಗಳಿನ್ನಿ; ಹಲ ಕೆಲವು**
**ಕುರುಡು ಕುನ್ನಿ;**
**ಕೆಲ ಕೆಲವು ಹುಚ್ಚು ಕುರಿ; ಕೆಲವು ಹೊಸ**
**ಹೊಚ್ಚ ಮರಿ;**
**ಗಂಡುತನಕೇಸೋ ಸೊನ್ನಿ;**
**ಲೆಕ್ಕಕ್ಕೆ ಮೂವತ್ತು ಮೂರು ಕೋಟಿ!!**

ಬೇಂದ್ರೆಯವರು ಹೀಗೆ ಹಾಡಿ ಐದು ದಶಕಗಳಲ್ಲಿ ಪಾಕಿಸ್ತಾನ-ಬಂಗ್ಲಾದೇಶಗಳೂ ಸೇರಿದಂತೆ ನಮ್ಮ ಉಪಖಂಡದ ಜನಸಂಖ್ಯೆ ೧೦೦ ಕೋಟಿಯ ಅಂಚನ್ನು ತಲಪುತ್ತಿದೆ. ಜನರ ಜೀವನ ಮಟ್ಟ ಇನ್ನಷ್ಟು ಕ್ಷೀಣಿಸಿದೆ. ಈ ಜನಸಂಖ್ಯಾ ಸ್ಫೋಟದಿಂದಾಗಿ ಕೊರತೆಗಳು ಗುಂಪಾಗಿ ಗುಳೆ ಎತ್ತಿ ಬಂದು ದಾರಿದ್ರ್ಯ ನಮ್ಮೆದುರು ತಾಂಡವವಾಡುತ್ತಿದೆ. ಆಹಾರ, ನೀರು, ಉರುವಲು, ಮನೆಗಳು, ಶಾಲೆ ಕಾಲೇಜುಗಳು, ಸಂಪರ್ಕ ಸಾಧನಗಳು, ಇತರೇ ಜೀವನಾವಶ್ಯಕ ಸಾಮಗ್ರಿ—ಎಲ್ಲದಕ್ಕೂ ಕೊರತೆ. ನಮ್ಮ ದೇಶದ ದೃಷ್ಟಾರರೂ ಮುತ್ಸದ್ದಿಗಳೂ ಪರಿಣಿತರೂ ಸೇರಿ ಬಹು ಪರಿಶ್ರಮದಿಂದ ರೂಪಿಸಿ ಕೃತಿಗಿಳಿಸಿದ ಪಂಚವಾರ್ಷಿಕ ಯೋಜನೆಗಳು ಕೂಡ ಈ ಜನಸಂಖ್ಯಾ ಸ್ಫೋಟದಿಂದಾಗಿಯೇ ನಿಷ್ಪ್ರಯೋಜಕವಾಗುವಂತಾಗಿದೆ.

ಜನಸಂಖ್ಯಾ ಸ್ಫೋಟದ ಭೂತ ಬಡಿಸಿಕೊಂಡ ನಾವು ನಿಸರ್ಗದ ಮೇಲೆ ನಿರಂತರವಾಗಿ ದಾಳಿ ಮಾಡುವಂತಾಗಿದೆ. ಇದಕ್ಕೊಂದು ಉದಾಹರಣೆ

ಧಾರವಾಡ. ನಿವಾಂತ ರಮಣೀಯವಾದ ನಿಸರ್ಗದ ಮಡಿಲಲ್ಲಿ ಮಲಗಿದ್ದ ಧಾರವಾಡ ಇಂದು ಬಟಾಬಯಲಾಗಿದೆ. ಅಸಂಖ್ಯ ಮಾವಿನ ತೋಪುಗಳು, ಪೇರಳೆ ತೋಟಗಳು ಮಾಯವಾಗಿ ಸಿಮೆಂಟ್ ಕಾಂಕ್ರೀಟಿನ ಕಟ್ಟಡಗಳು ತಲೆ ಎತ್ತಿ ಮೆರೆಯುತ್ತಿವೆ. ಜೊತೆಗೆ ಪಕ್ಷಿ ಸಂಕುಲದ ಮಂಜುಳ ಗಾನವೂ ಮಾಯವಾಗಿದೆ.

ಕಹಿ ಫಲಗಳನ್ನು ತಂದೊಡ್ಡಿದ ಜನಸಂಖ್ಯಾ ಸ್ಫೋಟದ ನಿಯಂತ್ರಣದಲ್ಲಿ ಹೆಣ್ಣು ಮಕ್ಕಳ ಪಾತ್ರ ಹಿರಿದು. ಸೀಮಿತ ಹಾಗೂ ಆರೋಗ್ಯ-ಯುತ ಕುಟುಂಬವಿಲ್ಲದಿದ್ದರೆ ಸ್ತ್ರೀಗೆ ಬಾಣಂತಿಯ ಕೋಣೆ, ಅಡಿಗೆ ಮನೆ, ಔಷಧಾಲಯಗಳೆಂಬ ಕಾರಾಗೃಹದ ವಾಸ ತಪ್ಪಿದ್ದಲ್ಲ. ಈ ಅನಿಷ್ಟ ವನ್ನು ತಪ್ಪಿಸಿ ಮಹಿಳೆಯರು ಹೆಚ್ಚು ಅರ್ಥ ಪೂರ್ಣವಾಗಿ, ಆರೋಗ್ಯವಂತರಾಗಿ, ಉಪ-ಯುಕ್ತವಾಗಿ ಜೀವನವನ್ನು ನಡೆಸಿಕೊಂಡು ಹೋಗುವಲ್ಲಿ ಶ್ರೀಮತಿ ಅವಾಬಾಯಿ ವಾಡಿಯಾ ಅವರು ಮಾಡಿದ, ಮಾಡುತ್ತಿರುವ ಧೀಮಂತ ಪ್ರಯತ್ನಗಳನ್ನು ಯಾರೂ ಅಲಕ್ಷಿಸುವಂತಿಲ್ಲ.

ಶ್ರೀಮತಿ ವಾಡಿಯಾ ಕಳೆದ ಐದು ದಶಕ-ಗಳಿಂದ ಮಹಿಳೆಯರ ಉನ್ನತಿಗಾಗಿ, ಶ್ರೇಯೋಭಿವೃದ್ಧಿಗಾಗಿ ದುಡಿಯುತ್ತಿದ್ದು, ಮೂವತ್ತು ವರ್ಷಗಳಿಂದ ಕುಟುಂಬ ಕಲ್ಯಾಣ ಕಾರ್ಯ ಗಳಿಗಾಗಿ ತನುಮನಧನಗಳನ್ನರ್ಪಿಸಿದ್ದಾರೆ.

ಸ್ಥಿತಿವಂತ ಮನೆತನದಲ್ಲಿ ಜನಿಸಿ, ಬುದ್ಧಿ-ವಂತ ವಿದ್ಯಾರ್ಥಿನಿಯಾಗಿ ಬೆಳೆದು ಇಂಗ್ಲಂಡಿನಲ್ಲಿ ಬಾರ್ ಎಟ್ ಲಾ ಪದವಿ ಪಡೆದು ಶ್ರೀಮಂತ ಮನೆತನದ ಸೊಸೆಯಾಗಿ, ಯಶಸ್ವಿ ನ್ಯಾಯ-ವಾದಿಯಾಗಿ ಖ್ಯಾತಿವೆತ್ತ ಅವಾಬಾಯಿ ವಾಡಿಯಾ ಸಫಲ ಸಾಹಸ ಜೀವನ ನಡೆಸಿಕೊಂಡು ಬಂದಿದ್ದಾರೆ.

೧೯೩೦ ರ ದಶಕದಲ್ಲಿ ಇನ್ನೂ ಹರೆಯದ ಬಾಲೆಯಾಗಿದ್ದ ಅವಾಬಾಯಿ ಅಖಿಲ ಭಾರತ ಮಹಿಳಾ ಒಕ್ಕೂಟದ ಸಕ್ರಿಯ ಸದಸ್ಯೆಯಾದರು. ಭಾರತದ ಮಹಿಳೆಯರ ಜೀವನದ ರೀತಿಗೆ ಅವರ ಮನ ಮಿಡಿಯುತ್ತಿತ್ತು. ಭಾರತ ಸ್ವತಂತ್ರ ದೇಶ ವಾಗಿ ಅರಳಿದ ಹೊಸತಿನಲ್ಲಿ ದಿನೇ ದಿನೇ ಹೆಚ್ಚು ತ್ತಿದ್ದ ಜನಸಂಖ್ಯೆಯಿಂದ ದೇಶದ ಹಿತಾಸಕ್ತಿಗ ಳಿಗೆ ಬೀಳುವ ಪೆಟ್ಟು ಭಯಂಕರವಾಗಿತ್ತು. ಜನ ಸಂಖ್ಯೆಯನ್ನು ನಿಯಂತ್ರಿಸುವ ಉದ್ದೇಶದಿಂದ ಮಹಿಳೆಯರ ಉದ್ಧಾರಕ್ಕಾಗಿ ಶ್ರಮಿಸುತ್ತಿದ್ದ ಶ್ರೀಮತಿ ಧನವಂತಿ ರಾಮರಾವ್, ಶ್ರೀಮತಿ ವೆಂಬು ಮುಂತಾದ ಮಹಿಳೆಯರೊಂದಿಗೆ ಶ್ರೀಮತಿ ವಾಡಿಯಾ ಕೈ ಕೂಡಿಸಿದರು. ಇವರೆ-ಲ್ಲರ ಯತ್ನದಿಂದಾಗಿ ೧೯೪೯ ರ ಪೂರ್ವದಲ್ಲಿಯೇ ಕುಟುಂಬ ಯೋಜನಾ ಸಮಿತಿಯೊಂದು ಮುಂಬಯಿಯಲ್ಲಿ ಸ್ಥಾಪನೆಯಾಯಿತು. ೧೯೫೦ ರಲ್ಲಿ ಈ ಸಮಿತಿ 'ಭಾರತೀಯ ಕುಟುಂಬ ಯೋಜನಾ ಸಂಘ'ವಾಯಿತು. ಅಂದಿನಿಂದ ಇಂದಿನವರೆಗೆ ಈ ಸಂಸ್ಥೆಯ ಬೆನ್ನೆಲುಬಾಗಿ ಕಾರ್ಯಗೈಯುತ್ತಿದ್ದಾರೆ ಶ್ರೀಮತಿ ಅವಾ ಬಾಯಿ. ಸಂಘ ಸ್ಥಾಪನೆಯಾದ ಮರು ವರು ಷವೇ ಭಾರತ ಸರಕಾರ ಮೊದಲ ಪಂಚವಾರ್ಷಿಕ ಯೋಜನೆಯ ರೂಪರೇಷೆಗಳನ್ನು ತಯಾರಿಸು ವಲ್ಲಿ ಮಗ್ನವಾಗಿತ್ತು. ಇದನ್ನು ಗಮನಿಸಿದ ಸಂಘ, ಯೋಜನಾ ಆಯೋಗಕ್ಕೆ ಮೊದಲ ಪಂಚ ವಾರ್ಷಿಕ ಯೋಜನೆಯಲ್ಲಿಯೇ ಕುಟುಂಬ ಯೋಜನೆಗೆ ಪ್ರಾಶಸ್ತ್ಯ ನೀಡಲು ಆಗ್ರಹಿಸಿ ಒಂದು ಮನವಿ ಸಲ್ಲಿಸಿತು. ಅದನ್ನು ಒಪ್ಪಿಕೊಂಡ ಯೋಜನಾ ಆಯೋಗ ಲೇಡಿ ಧನವಂತಿಯವ ರನ್ನು ತನ್ನ ಆರೋಗ್ಯ ಸಲಹಾ ಸಮಿತಿಯ ಸದಸ್ಯೆಯೆಂದೂ ಶ್ರೀಮತಿ ಅವಾಬಾಯಿಯವ ರನ್ನು ಸಾಮಾಜಿಕ ಯೋಗಕ್ಷೇಮದ ಸಮಿತಿಯ ಸದಸ್ಯೆಯಾಗಿಯೂ ನೇಮಿಸಿತು. ಇವರಿಬ್ಬರ ಪರಿಶ್ರಮದಿಂದ ಮೊದಲ ಯೋಜನೆಯಲ್ಲಿ ಕುಟುಂಬ ಯೋಜನೆಗೆಂದು ೬೫ ಲಕ್ಷ ರೂಪಾಯಿ ಗಳನ್ನು ಸರಕಾರ ಮಂಜೂರು ಮಾಡಿತು. ಹೀಗಾಗಿ ಹುಟ್ಟಿದ ಒಂದೇ ಒಂದು ವರ್ಷದಲ್ಲಿ ಭಾರತ ಸರಕಾರದ ಮೇಲೆ ಪ್ರಭಾವ ಬೀರಿದ ಸಂಘ ತನ್ನ ಕಾರ್ಯವ್ಯಾಪ್ತಿಯನ್ನು ದೇಶದಾ-

ದ್ಯಂತ ಹರಡಿಕೊಂಡಿತು.

೧೯೫೨ ರಲ್ಲಿ ಭಾರತದಲ್ಲಿ ಸ್ಥಾಪನೆಗೊಂಡ 'ಅಂತಾರಾಷ್ಟ್ರೀಯ ಕುಟುಂಬ ಯೋಜನಾ ಸಂಘಗಳ ಒಕ್ಕೂಟ'ವೂ ಶ್ರೀಮತಿ ಧನವಂತಿ ಹಾಗೂ ಶ್ರೀಮತಿ ಅವಾಬಾಯಿಯವರ ಪರಿಶ್ರಮದ ಫಲವೆ. ಮುಂದೆ ಕೆಲ ದಿನಗಳಲ್ಲಿ ಒಕ್ಕೂಟದ ಪ್ರಧಾನ ಕಚೇರಿಯನ್ನು ಲಂಡನ್ನಿಗೆ ವರ್ಗಾಯಿಸಲಾಯಿತು. ಶ್ರೀಮತಿ ಅವಾಬಾಯಿಯವರೀಗ ಈ ಸಂಸ್ಥೆಯ ಕರ್ಣಧಾರತ್ವವನ್ನು ವಹಿಸಿದ್ದಾರೆ.

೧೯೬೩ ಭಾರತೀಯ ಕುಟುಂಬ ಯೋಜನಾ ಸಂಘದ ಇತಿಹಾಸದಲ್ಲಿ ಮಹತ್ವದ ವರ್ಷ. ಆ ವರ್ಷ ಸಂಘದ ಅಧ್ಯಕ್ಷೆಯಾಗಿ ಅವಾಬಾಯಿ ಸರ್ವಾನುಮತದಿಂದ ಆಯ್ಕೆಯಾದರು. ಅಂದಿನಿಂದ ಸಂಘದ ಉತ್ಕರ್ಷೆಯ ದಿನಗಳು ಪ್ರಾರಂಭವಾದವು. ಅಲ್ಲಿಯವರೆಗೆ ಕೇವಲ ಏಳೆಂಟು ಶಾಖೆಗಳ ಮೂಲಕ ತನ್ನ ಕಾರ್ಯ ನಿರ್ವಹಿಸುತ್ತಿದ್ದ ಸಂಘ, ಶ್ರೀಮತಿ ಅವಾಬಾಯಿಯವರ ಅವಿಶ್ರಾಂತ ಪರಿಶ್ರಮದ ಫಲವಾಗಿ ಈಗ ದೇಶದಾದ್ಯಂತ ೪೨ ಶಾಖೆಗಳನ್ನು ಸ್ಥಾಪಿಸಿದೆ. ಈ ಶಾಖೆಗಳ ಮೂಲಕ ಲೈಂಗಿಕ ಶಿಕ್ಷಣ, ಜನಸಂಖ್ಯಾ ಶಿಕ್ಷಣ, ಮಕ್ಕಳ ಹಾಗೂ ಮಹಿಳೆಯರ ಆರೋಗ್ಯ, ಕುಟುಂಬ ಯೋಜನೆಯ ಸಲಹೆ-ಸೇವೆ ಹಾಗೂ ಸಾಧನೆಗಳನ್ನು ಒದಗಿಸುವಿಕೆ, ಇತ್ಯಾದಿ ಕಾರ್ಯಕ್ರಮಗಳನ್ನು ವ್ಯಾಪಕವಾಗಿ ಹಮ್ಮಿಕೊಳ್ಳಲಾಗಿದೆ. ಇವಲ್ಲದೆ ಮಕ್ಕಳಿಲ್ಲದ ದಂಪತಿಗಳಿಗೆ ವೈದ್ಯಕೀಯ ನೆರವು, ಸಲಹೆ ಕೊಡುವ ಮಹತ್ವದ ಕಾರ್ಯಕ್ರಮವನ್ನು ಅಳವಡಿಸಿಕೊಳ್ಳಲಾಗಿದೆ.

ಕುಟುಂಬ ಯೋಜನೆಯ ಕಾರ್ಯಕ್ರಮವನ್ನು ಇನ್ನಷ್ಟು ಪರಿಣಾಮಕಾರಿಯಾಗಿ ಪ್ರತಿಯೊಂದು ಕುಟುಂಬವೂ ಅದನ್ನು ತನ್ನದಾಗಿ ಮಾಡಿಕೊಳ್ಳುವಂತೆ ಮಾಡಲು, ಮತ್ತು ಕುಟುಂಬ ಯೋಜನೆಯನ್ನು ಗ್ರಾಮೀಣ ಅಭಿವೃದ್ಧಿಯ ಒಂದು ಪ್ರಮುಖ ಅಂಗವನ್ನಾಗಿ ಮಾಡುವ ಉದ್ದೇಶದಿಂದ ಶ್ರೀಮತಿ ವಾಡಿಯಾ ಗ್ರಾಮೀಣ ಯೋಜನೆಗಳನ್ನು ಸಂಘಟಿಸಿ ಕೃತಿಗಿಳಿಸಿದರು. ಇವುಗಳಲ್ಲಿ ಮೊಟ್ಟ ಮೊದಲನೆಯದು ಕರ್ನಾಟಕ ಯೋಜನೆ. ೧೯೭೦ರಲ್ಲಿ ಮೈದಳೆದ ಇದು ಫಲಪ್ರದವಾಯಿತು. ಈ ಅನುಭವದ ಆಧಾರದ ಮೇಲೆ ಇಂಥ ಇನ್ನೂ ೨೧ ಯೋಜನೆಗಳನ್ನು ರೂಪಿಸಿಕೊಂಡು ದೇಶದ ಒಟ್ಟು ೨೦೦೦ ಹಳ್ಳಿಗಳಲ್ಲಿ ಕಾರ್ಯನಿರ್ವಹಿಸಲಾಗುತ್ತಿದೆ. ಈ ಯೋಜನೆಗಳ ಮೂಲಕ ೩೫,೦೦೦ ಜನರ ಸದಸ್ಯತ್ವವನ್ನು ಹೊಂದಿದ ೧೧೦೦ ಮಹಿಳಾ ಮಂಡಲಗಳನ್ನು, ಯುವಕ ಹಾಗೂ ಯುವತಿ ಮಂಡಲಗಳನ್ನು, ರೈತರ, ಹಿರಿಯರ ಕೂಟಗಳನ್ನು ಸ್ಥಾಪಿಸಿ ಅಥವಾ ಸಚೇತನಗೊಳಿಸಿದುದಲ್ಲದೆ ಗ್ರಾಮೀಣ ಗ್ರಂಥಾಲಯಗಳು, ವಯಸ್ಕರ ಶಿಕ್ಷಣ ಶಿಬಿರಗಳು ಸಾಂಸ್ಕೃತಿಕ ಮೇಳಗಳು, ಅಭಿವೃದ್ಧಿಯೋಜನೆಗಳು, ಬಾಲವಾಡಿಗಳು ಮತ್ತು ಕುಟುಂಬ ಕಲ್ಯಾಣ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ.

ಪಟ್ಟಣಗಳ ಕೊಳಚೆ ಪ್ರದೇಶ ಮುಂತಾದವುಗಳಲ್ಲಿ ಪರಿವಾರ ಪ್ರಗತಿ ಮಂಡಳಗಳ ಸ್ಥಾಪನೆಯ ಮೂಲಕ ಆ ಪ್ರದೇಶಗಳ ಜನರ ಜೀವನ ಮಟ್ಟವನ್ನು ಎತ್ತರಿಸುವ ಪ್ರಯತ್ನಗಳೂ ನಡೆದಿವೆ. 'ಪರಿವಾರ ಪ್ರಗತಿ ಮಂಡಲ' ಯೋಜನೆ ಶ್ರೀಮತಿ ವಾಡಿಯಾರ ಯೋಚನೆಯ ಫಲ.

೧೯೮೨ರಲ್ಲಿ ಸಂಘ ಸುಮಾರು ೬೬,೦೦೦ಕ್ಕೂ ಮಿಕ್ಕಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಕುಟುಂಬ ಯೋಜನೆಯತ್ತ ಜನರ ಮನವೊಲಿಸಲು ಯತ್ನಿಸಲಾಯಿತು. ಈ ಕಾರ್ಯಕ್ರಮಗಳಲ್ಲಿಗಳಲ್ಲಿ ಸುಮಾರು ೫೩ ಲಕ್ಷ ಜನರು ಪಾಲ್ಗೊಂಡಿದ್ದರು. ಸಂಘ ೬೦೦ ಸಭೆ, ಸಮ್ಮೇಳನ, ಕಮ್ಮಟ, ಇತ್ಯಾದಿಗಳನ್ನು ಈ ವರ್ಷದಲ್ಲಿ ಏರ್ಪಡಿಸಿತು. ಅದೇ ವರ್ಷ ಸಂಘದ ಪರಿಶ್ರಮದ ಫಲವಾಗಿ ಒಂದು ಲಕ್ಷಕ್ಕೂ ಮಿಕ್ಕಿ ಸ್ತ್ರೀ—ಪುರುಷರು ಹೊಸದಾಗಿ ಕುಟುಂಬ ಯೋಜನಾ ವಿಧಾನಗಳನ್ನು ಅಳವಡಿಸಿಕೊಂಡರು. ಸುಮಾರು ನಾಲ್ಕು ಲಕ್ಷ ಮಕ್ಕಳು, ಮಹಿಳೆಯರು ವೈದ್ಯ

ಕೀಯ ಸಲಹೆ ಮತ್ತು ನೆರವು ಪಡೆದರು. ಜನ ಸಂಖ್ಯಾ ಶಿಕ್ಷಣದ ಶಿಬಿರಗಳಲ್ಲಿ ೩ ಲಕ್ಷ ೬೪ ಸಾವಿರಕ್ಕೂ ಹೆಚ್ಚು ವಿದ್ಯಾರ್ಥಿಗಳು, ೬೫ ಸಾವಿರಕ್ಕೂ ಹೆಚ್ಚು ಶಿಕ್ಷಕರು ಪಾಲ್ಗೊಂಡಿದ್ದರು. ಶಾಲೆ ಬಿಟ್ಟ ಎಂಟು ಲಕ್ಷಕ್ಕೂ ಹೆಚ್ಚು ಯುವಕ ಯುವತಿಯರಿಗಾಗಿ ಇಂಥ ಪ್ರತ್ಯೇಕ ಶಿಬಿರಗಳನ್ನು ಏರ್ಪಡಿಸಲಾಗಿತ್ತು.

ಹೀಗೆ ನಾನಾ ಮುಖವಾಗಿ ಭಾರತೀಯ ಕುಟುಂಬ ಯೋಜನಾ ಸಂಘ ಶ್ರೀಮತಿ ವಾಡಿಯಾ ಅವರ ಧುರೀಣತ್ವದಲ್ಲಿ ಜನರಿಗೆ ತನ್ಮೂಲಕ, ದೇಶಕ್ಕೆ ನೆರವು ನೀಡುತ್ತಾ ಬಂದಿದೆ. ಅವರ ಈ ಅಮೋಘ ಸೇವೆಯನ್ನು ಗುರುತಿಸಿ, ಭಾರತ ಸರಕಾರ ಅವರಿಗೆ ೧೯೭೧ ರಲ್ಲಿ ಪದ್ಮಶ್ರೀ ಪ್ರಶಸ್ತಿಯನ್ನೂ ೧೯೮೧ರಲ್ಲಿ ಪದ್ಮಭೂಷಣ ಗೌರವವನ್ನೂ ದಯಪಾಲಿಸಿ ಗೌರವಿಸಿತು. ೧೯೮೫ರ ಸಂಯುಕ್ತ ರಾಷ್ಟ್ರ ಸಂಸ್ಥೆಯ ಗೌರವಾನ್ವಿತ ಜನಸಂಖ್ಯಾ ಪ್ರಶಸ್ತಿಯನ್ನು 'ಅಂತಾರಾಷ್ಟ್ರಿಯ ಯೋಜಿತ ಪಾಲಕತ್ವದ ಒಕ್ಕೂಟ'ದ ಅಧ್ಯಕ್ಷೆಯಾಗಿ ಅವರು ಸ್ವೀಕರಿಸಿದರು.

ಶ್ರೀಮತಿ ವಾಡಿಯಾ ಕುಟುಂಬ ಯೋಜನೆಯನ್ನು, ಜನ ಆತ್ಮಸಂತೋಷದಿಂದ ಒಪ್ಪಿಕೊಂಡು ಕಾರ್ಯಗತ ಮಾಡಿಕೊಳ್ಳಬೇಕೆನ್ನುತ್ತಾರೆ. ಈ ಕಾರ್ಯಕ್ರಮದಲ್ಲಿ ಎಳ್ಳಷ್ಟೂ ಒತ್ತಾಯ ಸಲ್ಲದೆಂಬುದು ಅವರ ವಾದ. "ಭಾವನಾತ್ಮಕವಾದ, ವೈಯಕ್ತಿಕವಾದ ಈ ವಿಷಯದಲ್ಲಿ ಒತ್ತಾಯ ದುಷ್ಪರಿಣಾಮಕ್ಕೆ ದಾರಿ ಮಾಡಿಕೊಡುತ್ತದೆ" ಎನ್ನುತ್ತಾರೆ ಅವರು. ಕೆಲವು ವರ್ಷಗಳ ಹಿಂದೆ ಮಹಾರಾಷ್ಟ್ರ ಸರಕಾರ, ಕುಟುಂಬ ಯೋಜನೆಯನ್ನು ಕಡ್ಡಾಯ ಮಾಡುವ ಮಸೂದೆಯೊಂದನ್ನು ವಿಧಾನ ಸಭೆ ಹಾಗೂ ಪರಿಷತ್ತಿನಲ್ಲಿ ಪಾಸು ಮಾಡಿಕೊಂಡಿತಾದರೂ, ಶ್ರೀಮತಿ ವಾಡಿಯಾರ ತರ್ಕಬದ್ಧ ವಾದಕ್ಕೆ ಶರಣು ಹೋಗಿ ಅದನ್ನು ಕಾರ್ಯಗತಗೊಳಿಸಲಿಲ್ಲ.

ಎಪ್ಪತ್ತರ ಹರೆಯದ ಶ್ರೀಮತಿ ಅವಾಬಾಯಿ ವಾಡಿಯಾ ಇಂದು ಭಾರತೀಯ ಕುಟುಂಬ ಯೋಜನಾ ಸಂಘ ಮತ್ತು 'ಅಂತಾರಾಷ್ಟ್ರೀಯ ಕುಟುಂಬ ಯೋಜನಾ ಸಂಘಗಳ ಒಕ್ಕೂಟ'ಗಳೆರಡರ ಅಧ್ಯಕ್ಷೆ. ಇಂಥ ಗುರುತರ ಜವಾಬ್ದಾರಿಯನ್ನು ಹೊತ್ತು ಹಗಲಿರುಳೆನ್ನದೆ ದುಡಿಯುತ್ತ, ದೇಶ ವಿದೇಶಗಳಲ್ಲಿ ಪ್ರವಾಸ ಮಾಡಿ ಬರುವ ವಾಡಿಯಾ ಸದಾ ಹಸನ್ಮುಖಿ. ಸ್ವಯಂಸೇವೆ ಮಾಡುವ ಅವರು ಮುಂಬಯಿಯ ಕಚೇರಿಯಲ್ಲಿ ಬೇರೆ ಯಾವುದೇ ಕಾರ್ಯಕರ್ತರು ವೇತನಕ್ಕಾಗಿ ಮಾಡುವ ಕೆಲಸಕ್ಕಿಂತ ಹೆಚ್ಚು ಕೆಲಸ ಮಾಡುತ್ತಾರೆ. ಪೂರ್ಣಾವಧಿ ಸಿಬ್ಬಂದಿಯಂತೆ ಕಚೇರಿ ತೆರೆಯುವ ವೇಳೆಗೆ ಬಂದು ಸಂಜೆಯತನಕ ದುಡಿಯುವ ಈ ವ್ಯಕ್ತಿಯಲ್ಲಡಗಿರುವ ಶಕ್ತಿ ಯಾರನ್ನಾದರೂ ಅಚ್ಚರಿಗೊಳಿಸುತ್ತದೆ. ದಿನಕ್ಕೊಂದು ಬಾರಿಯಾದರೂ ಕಚೇರಿಯಲ್ಲಿ ಅಡ್ಡಾಡಿ ಎಲ್ಲಾ ಕಾರ್ಯಕರ್ತರ ಯೋಗಕ್ಷೇಮವನ್ನು ವಿಚಾರಿಸುತ್ತಾರೆ. ಮುಂಬಯಿಯ ಕಚೇರಿ ಒಂದು ದೊಡ್ಡ ಕುಟುಂಬವಿದ್ದಂತೆ. ಶ್ರೀಮತಿ ವಾಡಿಯಾ ಈ ಕುಟುಂಬದ ಮಹಾಮಾತೆ. ಅವರ ನೇತೃತ್ವದಲ್ಲಿ ಕೆಲಸ ಮಾಡುವುದು ಒಂದು ಅಪೂರ್ವ ಅನುಭವ.

ವೈಯಕ್ತಿಕ ಜೀವನದಲ್ಲಿ, ಶ್ರೀಮತಿ ವಾಡಿಯಾರಿಗೆ ಕೊರತೆಗಳಿಲ್ಲವೆಂದಲ್ಲ. ಅವರಿಗೆ ಸಂತಾನವಿಲ್ಲ. ಕೆಲವೇ ವರ್ಷಗಳ ಹಿಂದೆ ಪತಿ ವಿಯೋಗಕ್ಕೊಳಗಾದ ಅವರು ಆ ಆಘಾತದಿಂದ ಬಹು ಬೇಗನೆ ಚೇತರಿಸಿಕೊಂಡರು.

ಶ್ರೀಮತಿ ವಾಡಿಯಾ ಸರಳ ಜೀವಿ. ಶುದ್ಧ ಶಾಕಾಹಾರಿ. ವನ್ಯ ಸಂಪತ್ತಿನ ರಕ್ಷಣೆ, ಹೂದೋಟ ಇವು ಅವರ ಹವ್ಯಾಸಗಳು. 'ಭಾರತೀಯ ಕುಟುಂಬ ಯೋಜನಾ ಸಂಘ' ವೆಂಬ ಹೂದೋಟವನ್ನು ರಾಷ್ಟ್ರಾದ್ಯಂತ ಹಬ್ಬಿಸುವಲ್ಲಿ ಅವರು ಯಶಸ್ವಿಯಾಗಿದ್ದಾರೆ. ✡



# ಭವಿಷ್ಯವಾಣಿ ನಿಜವಾಯಿತು

ಕೆ. ಶಾಂತಾಮಣಿ

ಮಾನವ ಇಂದು ಚಂದ್ರ ಗ್ರಹಕ್ಕೆ ಪ್ರಯಾಣಿಸಿ, ಅದರ ಲಕ್ಷಣಗಳು, ಅಲ್ಲಿನ ಪರಿಸರವನ್ನು ಪರಿಶೀಲಿಸಿದ್ದಾನೆ. ಆದರೆ ವೈಜ್ಞಾನಿಕ ಲೇಖಕರು ಒಂದು ಸಾವಿರ ವರ್ಷಗಳಷ್ಟು ಹಿಂದೆಯೇ ಅಂತರಿಕ್ಷ ಯಾತ್ರೆಯನ್ನು ಕಲ್ಪಿಸಿಕೊಂಡಿದ್ದರು. ಈ ಕಲ್ಪನೆಯ ಕುದುರೆಯನ್ನೇರಿ ವೈಜ್ಞಾನಿಕ ಕಥೆಗಳನ್ನು ಬರೆದರು. ಅವರು ಮೊದಲು ಬರೆದದ್ದು 'ಚಂದ್ರಲೋಕ ಯಾತ್ರೆ'ಯ ಕಥೆಗಳನ್ನೇ.

ಕ್ರಿಸ್ತಶಕ ೯೬೦ರಲ್ಲಿ ಯುರೋಪಿನಲ್ಲಿದ್ದ ಸಿರಿಯಾ ನಿವಾಸಿ ಲೂಸಿಯನ್ನನು 'ಸತ್ಯ ಇತಿಹಾಸ' ಎಂಬ ಶಿರೋನಾಮೆಯುಳ್ಳ ಪುಸ್ತಕವನ್ನು ಬರೆದ. 'ಚಂದ್ರ ಯಾತ್ರೆ'ಗೆ ಸಂಬಂಧಿಸಿದಂತೆ ಇದು ಮೊದಲ ಪುಸ್ತಕ. ಪುಸ್ತಕದ ನಾಯಕ ಒಬ್ಬ ಯುನಾನಿ. ಸಮುದ್ರದ ಮೇಲೆ ಯಾತ್ರೆ ಮಾಡುತ್ತಿದ್ದಾಗ ಇದ್ದಕ್ಕಿದ್ದಂತೆಯೇ ಭಯಂಕರವಾದ ಬಿರುಗಾಳಿ ಬೀಸಿ, ಅವನ ದೋಣಿ ಗಾಳಿಯಲ್ಲಿ ಹಕ್ಕಿಯಂತೆ ಹಾರಾಡತೊಡಗಿತು. ಏಳು ದಿನ, ಏಳು ರಾತ್ರಿ ನಿರಂತರವಾಗಿ ಹಾರಾಡಿದ ನಂತರ ಹೊಳೆಯುತ್ತಿರುವ ಆಕಾಶ ದೀಪದಲ್ಲಿ ಇಳಿಯಿತು. ಈ ಆಕಾಶ ದೀಪವೇ 'ಚಂದ್ರ.'

ಇದಾದ ನಂತರ ಇಂತಹ ಇನ್ನೂ ಅನೇಕ ಕಥೆಗಳೂ, ಪುಸ್ತಕಗಳೂ ಪ್ರಕಟವಾದವು. ಅವುಗಳಲ್ಲಿ ಚಂದ್ರ ಗ್ರಹದ ಬಗ್ಗೆ ಕಾಲ್ಪನಿಕ ವಿವರಗಳನ್ನು ನೀಡಲಾಗಿತ್ತು. ನಂತರ ೧೬೦೯ರಲ್ಲಿ ವಿಜ್ಞಾನಿ ಗೆಲಿಲಿಯೋ (೧೫೬೪-೧೬೪೨) ಒಂದು ಶಕ್ತಿಶಾಲಿ ದೂರದರ್ಶಕವನ್ನು ತಯಾರಿಸಿ ಅದರ ಸಹಾಯದಿಂದ ಆಕಾಶದಲ್ಲಿ ಇಣುಕಿ ನೋಡಿದ. ಆದರೆ ಅವನು ನೋಡಿದ್ದೇನು! ಗೆಲಿಲಿಯೋಗೆ ತನ್ನ ಕಣ್ಣುಗಳ ಮೇಲೆ ನಂಬಿಕೆ ಬರಲಿಲ್ಲ. ತನ್ನ ಕಣ್ಣೇ ಮೋಸ ಮಾಡುತ್ತಿದೆ ಎಂದುಕೊಂಡ. ಏಕೆಂದರೆ ಅವನು ನೋಡಿದ ಚಂದ್ರನ ರೂಪ, ಕಥೆಗಳಲ್ಲಿ ವರ್ಣಿಸಿದ್ದ ಚಂದ್ರನ ರೂಪಕ್ಕಿಂತ ಸಂಪೂರ್ಣ ಭಿನ್ನವಾಗಿತ್ತು. ಚಂದ್ರನ ಮೇಲೆ ಉಬ್ಬು-ತಗ್ಗುಗಳಿದ್ದವು. ಪರ್ವತಗಳಿದ್ದವು. ಬಂಡೆಗಳಿದ್ದವು. ತರಕಲು ಮೇಲ್ಮೈ ಇತ್ತು. ಇದನ್ನು ಅವನು ಜನರಿಗೆ ತಿಳಿಸಬಯಸಿದ. ಆದರೆ ಅವನ ಮಾತಿಗೆ ಯಾರೂ ಗಮನ ಕೊಡಲಿಲ್ಲ.

ಏತನ್ಮಧ್ಯೆ ಖಗೋಳ ಶಾಸ್ತ್ರಜ್ಞ ಜೋಹಾನ್ಸ್ ಕೆಪ್ಲರ್ (೧೫೭೧-೧೬೩೦)ನು ಚಂದ್ರಲೋಕ ಯಾತ್ರೆಗೆ ಸಂಬಂಧಿಸಿದಂತೆ ಎರಡು ಪುಸ್ತಕಗಳನ್ನು ಬರೆದ. ಮೊದಲ ಪುಸ್ತಕದಲ್ಲಿ ವಿಭಿನ್ನ ಗ್ರಹಗಳ ಪರಿಚಲನೆಯನ್ನು ನಿರ್ದೇಶಿಸುವ ನಿಯಮಗಳನ್ನು ಪ್ರತಿಪಾದಿಸಿದ. ಮತ್ತೊಂದು ಪುಸ್ತಕ 'ಸೋಮ ನಿಯಮ,' ವೈಜ್ಞಾನಿಕ ಕಾದಂಬರಿಯಾಗಿದ್ದು ಅದರಲ್ಲಿ ದೂರದರ್ಶಕದಿಂದ ಪ್ರಾಪ್ತವಾದ ವಿಷಯಗಳ ಉಲ್ಲೇಖವಿತ್ತು.

೧೬೩೮ರಲ್ಲಿ ಇಂಗ್ಲೆಂಡಿನ ಪಾದ್ರಿ ವಿಲ್ಕಿನ್-

ಸನ್ ಚಂದ್ರನ ಬಗೆಗೆ ಒಂದು ಪುಸ್ತಕವನ್ನು ಬರೆದು ಅದರಲ್ಲಿ ಚಂದ್ರನನ್ನು ತಲಪುವ ನಾಲ್ಕು ಉಪಾಯಗಳನ್ನು ತಿಳಿಸಿದ್ದ.

೧. ದಿವ್ಯ ಆತ್ಮಗಳು ಮನುಷ್ಯನನ್ನು ಭೂಮಿಯಿಂದ ಚಂದ್ರನ ವರೆಗೂ ತೆಗೆದು ಕೊಂಡು ಹೋಗುವುದು.

೨. ಮನುಷ್ಯ ಪಕ್ಷಿಗಳ ಸಹಾಯದಿಂದ ಚಂದ್ರ ಲೋಕ ತಲಪುವುದು.

೩. ಮನುಷ್ಯ ದೊಡ್ಡ ದೊಡ್ಡ ಪಕ್ಷಿಗಳ ರೆಕ್ಕೆ ಗಳನ್ನು ಕಟ್ಟಿಕೊಂಡು ಹಾರಾಡುತ್ತಾ ಚಂದ್ರ ಲೋಕವನ್ನು ತಲಪುವುದು.

೪. ಸಮಯವಿದ್ದವರು ದೊಡ್ಡ ಯಂತ್ರ-ವನ್ನು ತಯಾರಿಸಿ ಅದರ ಸಹಾಯದಿಂದ ಚಂದ್ರ ಲೋಕ ತಲಪುವುದು.

ಕೊನೆಗೆ ಮನುಷ್ಯ ದೊಡ್ಡ ಯಂತ್ರದ ಸಹಾಯದಿಂದಲೇ ಚಂದ್ರನನ್ನು ತಲಪಬಲ್ಲವ ನಾದ.

೧೬೩೮ರಲ್ಲಿಯೇ ಬಿಶಪ್ ಗಾಡ್‌ವಿನ್ನನು ಚಂದ್ರಲೋಕ ಯಾತ್ರೆಯ ಬಗೆಗೆ 'ಚಂದ್ರನಲ್ಲಿ ಮನುಷ್ಯ' ಎಂದು ಕತೆಯನ್ನು ಬರೆದ. ಈ ಪುಸ್ತಕದಲ್ಲಿ ಮೊಟ್ಟ ಮೊದಲನೆಯದಾಗಿ ಭೂಮಿ ಯನ್ನು ಬಿಟ್ಟ ಮೇಲೆ ಮನುಷ್ಯ ಭಾರವಿಲ್ಲದವ (ಗುರುತ್ವಾಕರ್ಷಣವಿಹೀನ)ನಾಗುತ್ತಾನೆ, ಚಂದ್ರ ನಲ್ಲಿ ಗುರುತ್ವಾಕರ್ಷಣೆ ಶಕ್ತಿ ಭೂಮಿಗಿಂತ ಕಡಿಮೆ, ಎಂಬುದಾಗಿ ಬರೆಯಲ್ಪಟ್ಟಿತು.

೧೬೫೬ರಲ್ಲಿ ಫ್ರಾನ್ಸಿನ ಪ್ರಸಿದ್ಧ ದ್ವಂದ್ವ ಯೋಧ ಸಯುರೇನೋ ದ ವರ್ಜೆರಾಕ್‌ನು 'ಚಂದ್ರನ ಯಾತ್ರೆ' ಎಂಬ ಒಂದು ಕಾದಂಬರಿ-ಯನ್ನು ಬರೆದ. ಇದರಲ್ಲಿ ಅವನು ಮೊಟ್ಟ ಮೊದಲಿಗೆ 'ರಾಕೆಟ್ ಮೂಲಕ ಚಂದ್ರ ಯಾತ್ರೆ' ಯನ್ನು ವರ್ಣಿಸಿದ. ಮುಂದೆ ಅದು ನಿಜವೇ ಆಯಿತು.

೧೮೬೫ರಲ್ಲಿ ಪ್ರಸಿದ್ಧ ವೈಜ್ಞಾನಿಕ ಕತೆಗಾರ ಫ್ರಾನ್ಸಿನ ಜೂಲ್ಸ್ ವರ್ನ್ (೧೮೨೮–೧೯೦೫)ನ 'ಭೂಮಿಯಿಂದ ಚಂದ್ರನ ಕಡೆಗೆ ಎಂಬ ಕಾದಂಬರಿ ಪ್ರಕಟವಾಯಿತು. ಈ ಕಾದಂಬರಿ ಆಗ ಸಾಕಷ್ಟು ಚರ್ಚೆಗೆ ಒಳ-ಗಾಯಿತು.

ಮುಂದೆ ೨೧ನೇ ಡಿಸೆಂಬರ್ ೧೯೬೮ರಲ್ಲಿ ಅಮೇರಿಕದ ಅಂತರಿಕ್ಷ ಯಾನ ಅಪೋಲೋ-೮ ತನ್ನ ಅಂತರಿಕ್ಷಯಾನವನ್ನು ಆರಂಭಿಸಿತು. ೧೪೮ ಗಂಟೆಗಳ ವರೆಗೆ ಹಾರಾಡಿದ ನಂತರ ೧೯೬೮ರಲ್ಲಿ ಭೂಮಿಗೆ ಬಂತು. ಜೂಲ್ಸ್ ವರ್ನ್‌ನ ಕಾದಂಬರಿಯ ಅನೇಕ ವಿಷಯಗಳು ಅಪೋಲೋ-೮ರ ವಿವರಗಳಿಗೆ ಸರಿಹೊಂದು-ತ್ತವೆ.

ಅಮೇರಿಕದ ಫ್ಲೋರಿಡಾ ನಗರದಲ್ಲಿರುವ ದೊಡ್ಡ ತೋಪಿನಲ್ಲಿ ಮದ್ದು ತುಂಬಿ ರಾಕೆಟ್ಟನ್ನು ಹಾರಿಸಬಹುದು ಎಂದು ಜೂಲ್ಸ್‌ವರ್ನನು ಬರೆದಿದ್ದಾನೆ. ಅಪೋಲೋ—೮ನ್ನು ಫ್ಲೋರಿಡಾ ದಿಂದ ಕೇವಲ ೬೦ ಮೈಲಿ ದೂರದಲ್ಲಿನ ಕೇಪ್ ಕೆನಡಿಯಿಂದ ಹಾರಿಬಿಡಲಾಗಿತ್ತು ಎಂಬುದಕ್ಕೆ ಇತಿಹಾಸ ಸಾಕ್ಷಿಯಾಗಿದೆ.

ಜೂಲ್ಸ್ ವರ್ನನು ಭೂಮಿಯಿಂದ ಚಂದ್ರ ಲೋಕ ೨,೩೮,೮೩೩ ಮೈಲಿ ದೂರವಿದೆಯೆಂದು ಹೇಳಿದ್ದಾನೆ. ಅಪೋಲೋ—೮ರ ಯಾತ್ರೆಯ ಪ್ರಕಾರ ಅದು ೨,೨೫,೦೦೦ ಮೈಲು ಎಂದಾ ಗಿದೆ.

ಜೂಲ್ಸ್ ವರ್ನನ ರಾಕೆಟ್ ೧೨ ಅಡಿ ಎತ್ತರ ವಾಗಿತ್ತು. ಅಪೋಲೋ—೮ರ ಎತ್ತರವೂ ೧೨ ಅಡಿಯೇ ಆಗಿತ್ತು. ಅಪೋಲೋ—೮ರ ಒಳಗೆ ಅಲ್ಯೂಮಿನಿಯಂನ ಪದರವಿದ್ದಂತೆಯೇ ಜೂಲ್ಸ್ ವರ್ನನ ರಾಕೆಟ್ಟಿನಲ್ಲೂ ಇದೆ. ಅವನ ರಾಕೆಟ್‌ನ ಭಾರವು ೧೨,೨೩೦ ಪೌಂಡಾಗಿತ್ತು. ಅಪೋಲೋ-೮ರ ಭಾರ ೧೨,೯೨ ಪೌಂಡ್ ಆಗಿತ್ತು.

ಜೂಲ್ಸ್ ವರ್ನನ ಈ ಕಲ್ಪನೆ ಅವನನ್ನು ಕಾದಂಬರಿಕಾರನ ಸ್ಥಾನದಿಂದ ಒಬ್ಬ ವೈಜ್ಞಾನಿಕ ಭವಿಷ್ಯವಾದಿಯ ಸ್ಥಾನಕ್ಕೆ ತೆಗೆದುಕೊಂಡು 'ಹೋಗುತ್ತದೆ.

ಚಂದ್ರನ ಮೇಲ್ಮೈ ಬಂಡೆಗಳಿಂದ ಕೂಡಿದೆ. ಅದರ ಸುತ್ತಲೂ ಭಿನ್ನ-ಭಿನ್ನ ಆಕಾರದ ಚಿಕ್ಕ-ದೊಡ್ಡ ಗುಂಡಿಗಳಿವೆ. ಗಾಳಿಯಿಲ್ಲ, ಜೀವಿಯಿಲ್ಲ, ಎಂದು ಅವನು ಬರೆದಿದ್ದಾನೆ.

ಇಂದು ಈ ಮಾತು ಅಕ್ಷರಶಃ ಸತ್ಯ ಎಂಬುದು ನಮಗೆ ತಿಳಿದಿದೆ. ಎಚ್. ಜಿ. ವೆಲ್ಸ್‌ನು (೧೮೬೬-೧೯೪೬) ೧೯೦೧ ರಲ್ಲಿ 'ಚಂದ್ರನ ಮೇಲೆ ಪ್ರಥಮ ಮಾನವ' ಎಂಬ ಕಥೆ ಬರೆದ. ಭೂಮಿಯ ವಾಯು ಮಂಡಲದಲ್ಲಿ ಗುರುತ್ವಾಕರ್ಷಣ ಶಕ್ತಿ ಇದೆ, ಇದೇ ಕಾರಣದಿಂದಾಗಿ ನಾವು ಭೂಮಿಗೆ ಅಂಟಿಕೊಂಡು ಇರುತ್ತೇವೆ. ಈ ಪಾಶವನ್ನು ಹರಿದುಕೊಂಡು ನಾವು ಅಂತರಿಕ್ಷದಲ್ಲಿ ಹೋಗಬಹುದು. ಆದ್ದರಿಂದ ವೆಲ್ಸ್‌ನು ತನ್ನ ಯಾತ್ರಿಕರನ್ನು ಚಂದ್ರನಲ್ಲಿಗೆ ತಲಪಿಸಲು ಮೊದಲ ಬಾರಿಗೆ 'ಕೇವೋರಾಯಿಟ್' ಎಂಬ ರಾಕೆಟ್ಟಿನ ಕಲ್ಪನೆ ಮಾಡಿದ. ಈ ರಾಕೆಟ್ ಗುರುತ್ವಾಕರ್ಷಣದ ಪಾಶವನ್ನು ಕತ್ತರಿಸುವ ಸಾಮರ್ಥ್ಯವನ್ನು ಹೊಂದಿತ್ತು.

ಕೊನೆಗೆ ಚಂದ್ರನ ಮೇಲೆ ಜೀವಿಸುವ ಸಂಭವ ಇಲ್ಲವೆಂದ ಮೇಲೆ ವಿಜ್ಞಾನಿಗಳು ಅನ್ಯ ಗ್ರಹಗಳಿಗೂ ಯಾನ ಕಳಿಸಿದರು. ಇಂದು ವಿಜ್ಞಾನ ಕತೆಯ ಲೇಖಕರು ಅನ್ಯ ಗ್ರಹಗಳಲ್ಲಿ ಜೀವಿ ಇರಬಹುದೆಂದು ಊಹಿಸುತ್ತಿದ್ದಾರೆ.

೧೭ ಜುಲೈ ೧೯೭೫ ರಂದು ಅಮೆರಿಕವು ಬಿಟ್ಟ 'ಅಪೋಲೋ' ಮತ್ತು ರಶಿಯ ಬಿಟ್ಟ 'ಸೋಯೂಜ್-೧೯'ನ್ನು ಅಂತರಿಕ್ಷದಲ್ಲಿ ಒಂದಕ್ಕೊಂದು ಸೇರಿಸಲಾಯಿತು. ಮತ್ತು ಆ ಎರಡು ರಾಕೆಟ್‌ಗಳ ವಿಜ್ಞಾನಿಗಳು ಒಂದು ರಾಕೆಟ್‌ದಿಂದ ಮತ್ತೊಂದು ರಾಕೆಟ್ಟಿಗೆ ಹೋಗಿ ಕೆಲ ಸಾಮೂಹಿಕ, ಕೆಲ ಬೇರೆ-ಬೇರೆ ಪ್ರಯೋಗಗಳನ್ನು ನಡೆಸಿದರು. ಇದನ್ನು "ಅಪೋಲೋ-ಸೋಯೂಜ್-ಮಿಷನ್" ಎಂದು ಕರೆಯಲಾಯಿತು. ಎರಡು ರಾಷ್ಟ್ರಗಳ ಮಧ್ಯ ಮೈತ್ರಿ, ಸಹಯೋಗ ಮತ್ತು ಸದ್ಭಾವನೆಯ ಪ್ರತೀಕವೆಂದು ವಿಜ್ಞಾನಿಗಳು ಇದನ್ನು ಸ್ವಾಗತಿಸಿದರು. ಈ ರೋಮಾಂಚಕಾರಿ ಘಟನೆಯು ನೂರಕ್ಕೆ ನೂರರಷ್ಟು ಸಫಲವಾಯಿತು. ಈ ವೈಜ್ಞಾನಿಕ ಪ್ರಯೋಗಕ್ಕೆ ಕಾರಣ ನಾದವ ಒಬ್ಬ ಲೇಖಕ ಎಂದರೆ ಆಶ್ಚರ್ಯವಾಗುತ್ತದೆ.

ವೈಜ್ಞಾನಿಕ ಲೇಖನ ಮತ್ತು ರೋಮಾಂಚಕಾರಿ ಕತೆಯ ಲೇಖಕ ಮಾರ್ಟಿನ್ ಕೇಡಿನ್ನನು ೧೯೬೮ ರಲ್ಲಿ ಅಂತರಿಕ್ಷಕ್ಕೆ ಸಂಬಂಧಿಸಿದಂತೆ 'ಮೈರುಂಡ' ಎಂಬ ಒಂದು ಕಾದಂಬರಿಯನ್ನು ಬರೆದಿದ್ದು ಅದರಲ್ಲಿ ಅಂತರಿಕ್ಷದಲ್ಲಿ ಸಿಕ್ಕಿ ಹಾಕಿಕೊಂಡಿದ್ದ ಅಮೆರಿಕದ ಅಂತರಿಕ್ಷ ಯಾತ್ರಿಗಳನ್ನು ರಶಿಯ ಅಂತರಿಕ್ಷ ಯಾತ್ರಿಗಳು ಹೇಗೆ ಉಳಿಸಿದರೆಂಬುದರ ಬಗ್ಗೆ ಕಲ್ಪಿಸಿ ರೋಚಕವಾಗಿ ಬರೆಯಲಾಗಿತ್ತು.

ಇದೇ ಕಾದಂಬರಿಯನ್ನು ಆಧರಿಸಿ ೧೯೭೦ ರಲ್ಲಿ 'ಮೈರುಂಡ' ಚಲನ ಚಿತ್ರವನ್ನು ವಾಷಿಂಗ್‌ಟನ್ನಿನಲ್ಲಿ ಪ್ರದರ್ಶಿಸಲಾಗಿತ್ತು. ಅಮೆರಿಕದ ವಿಜ್ಞಾನ ಅಕಾಡೆಮಿಯ ಅಧ್ಯಕ್ಷ ಫಿಲಿಪ್ ಹೈಂಡಲರ್ ಈ ಚಿತ್ರವನ್ನು ನೋಡಿ ಎಷ್ಟು ಪ್ರಭಾವಿತರಾದರೆಂದರೆ ಅವರು ಮಾಸ್ಕೋಗೆ ಹೋದಾಗ ಅಲ್ಲಿಯ ವಿಜ್ಞಾನಿಗಳಿಗೆ ಚಿತ್ರದ ಪೂರ್ಣಕಥೆಯನ್ನು ವಿವರಿಸಿದರು. ರಶಿಯದ ವಿಜ್ಞಾನಿಗಳಿಗೆ, ಅಮೆರಿಕದ ಚಿತ್ರವೊಂದರಲ್ಲಿ ರಶಿಯದ ವಿಜ್ಞಾನಿಯನ್ನು ನಾಯಕನನ್ನಾಗಿ ತೋರಿಸಿದ್ದು ಕೇಳಿ ತುಂಬ ಸಂತೋಷವಾಯಿತು. ಈ ಚಿತ್ರದ ವಿಷಯ ಅವರ ತಲೆ ಹೊಕ್ಕಿತು. ಆ ಎರಡು ದೇಶಗಳ ನಡುವೆ ಮಾತುಕತೆ ನಡೆಯಿತು. ಸಮ್ಮಿಲನ ರೂಪದಲ್ಲಿ, ವಿಭಿನ್ನ ಕ್ಷೇತ್ರಗಳಲ್ಲಿ ವೈಜ್ಞಾನಿಕ ಪ್ರಯೋಗ ನಡೆಸುವ ಸಲುವಾಗಿ ಎರಡು ರಾಷ್ಟ್ರಗಳ ನಡುವೆ ೨೪ ಮೇ ೧೯೭೨ರಲ್ಲಿ ಒಂದು ಒಪ್ಪಂದವಾಯಿತು, ಅದರ ಫಲವೇ 'ಅಪೋಲೋ ಸೋಯೂಜ್ ಮಿಷನ್.'

ವಾಸ್ತವದಲ್ಲಿ ವೈಜ್ಞಾನಿಕ ಕಥಾ ಲೇಖಕರು ಕಲ್ಪನೆಯ ಹಾರಾಟವನ್ನು ನಡೆಸುತ್ತಾರೆ. ವಿಜ್ಞಾನಿಗಳು ತಮ್ಮ ಮೇಧಾಶಕ್ತಿ-ಬುದ್ಧಿಶಕ್ತಿಯಿಂದ ಅದಕ್ಕೆ ಮೂರ್ತರೂಪ ಕೊಡುತ್ತಾರೆ. ✡

# ಸುವಾಸಿತ ಹಾಗೂ ಸ್ವಾದಿಷ್ಟ ಮುಖಶುದ್ಧಿಗಾಗಿ




ಚಮನ್ ಇದು ಅತ್ಯಂತ ಸ್ವಾದಿಷ್ಟ ಹಾಗೂ ರುಚಿಕರವಾದ ಚೂರ್ಣವಾಗಿದೆ. ಇದನ್ನು ಸೇವಿಸುವದರಿಂದ ಬಾಯಿಯು ಸುವಾಸಿತವಾಗುತ್ತದೆ.

## ಚಮನದಲ್ಲಿ ಏನೆಲ್ಲ ಇದೆ?



ಈ ಚಮನದಲ್ಲಿ ಜೇಷ್ಠಮಧು, ಕೇಶರ, ಏಲಕ್ಕಿ. ಲವಂಗ, ಪತ್ರಿ, ಜಾಜಿಕಾಯಿ, ಬದೆಸೋಪ್, ದುಂಥಾಲ್‌ಗಳಂಥ ಅನೇಕ ಬಗೆಯ ಸುಗಂಧಿತ ಹಾಗೂ ರುಚಿಕರ ವಸ್ತುಗಳು ಒಳಗೊಂಡಿರುವವು. ಅದಕ್ಕೆಂದೇ ಇದು ಚಿಕ್ಕಮಕ್ಕಳಿಂದ ವೃದ್ಧರವರಿಗೆ ಎಲ್ಲರಿಗೂ ಅಚ್ಚುಮೆಚ್ಚು.

**ಸ್ಟಾರ್ ಕಂಪನಿ, ಬೆಳಗಾಂವ್**

M. K. Publicity

# ಯತ್ರಾ ಜನ್ನಾಃ ತತ್ರಾ ಹೋಟೇಲ್

ಜಿ. ಟಿ. ನಾರಾಯಣರಾವ್

ಬ್ರಾಹ್ಮಣ ವಟುಗಳಿಗೆ ಹೊಟೇಲ್ ಪ್ರವೇಶ ಮಾತ್ರವಲ್ಲ ದರ್ಶನವೂ ಅತಿ ನಿಷಿದ್ಧ-ವಾಗಿದ್ದ ಕಾಲ. ಹೊಟೇಲ್ ಎಂದರೆ ಮುಸುರೆ, ತಂಗಳು, ಮಡಿ, ಮೈಲಿಗೆ ವ್ಯತ್ಯಾಸವಿಲ್ಲದ ಕೊಳಚೆಗುಂಡಿ, ಸಕಲ ಲಾಲಾರಸಗಳ ಸಂಗಮ ಸ್ಥಾನ, ಬ್ರಾಹ್ಮಣ–ಶೂದ್ರ ಎಂಬ ಭೇದವಿಲ್ಲದ ನರಕ ಕೂಪ ಎಂಬುದು ಕರ್ಮಠ ಬ್ರಾಹ್ಮಣರಲ್ಲಿ ಪ್ರಚಲಿತವಾಗಿದ್ದ ಭಾವನೆ. ಅನ್ನದಾನ ಸರಿ. ಅನ್ನ ವಿಕ್ರಯ? ಎಲ್ಲಾದರೂ ಉಂಟೇ? ಶಾಂತಂ ಪಾಪಂ.

ಆಗ ನಾನು ಮಡಿಕೇರಿಯಲ್ಲಿ ಶಾಲಾ ವಿದ್ಯಾರ್ಥಿ, ೧೯೩೧–೪೨. ಅಲ್ಲಿದ್ದುದು ಬೆರಳೆಣಿಕೆಯ ಕೆಲವೇ ಹೊಟೇಲುಗಳು. ಹೆಚ್ಚಿನವು ಮಲಯಾಳೀ ಕಾಕಂದಿರ ಮಿಲಿಟರಿ ಮಾದರಿ-ಯವು. ಇವುಗಳಿಂದ ಮಂದವಾಗಿ ಒಸರುತ್ತಿದ್ದ ಕೊಳಕು ಗಲೀಜು ಮತ್ತು ದಟ್ಟವಾಗಿ ಸೂಸು-ತ್ತಿದ್ದ ಕಮಟು ವಾಸನೆ ಏಲಕ್ಕಿ, ಲವಂಗ, ಪಚ್ಚೆ ಕರ್ಪೂರ, ಕುಂಕುಮ ಕೇಸರಿ, ತುಪ್ಪ ಮುಂತಾದ ಜಿಹ್ವಾರಸಾಯನಗಳಿಂದ ರುಚಿ ಸೂಕ್ಷ್ಮತೆ ಗಳಿಸಿಕೊಂಡಿದ್ದ ನನ್ನಂಥ ಅಪ್ಪಟ ಪುಳಿಚಾರಿಗಳಿಗೆ ತೀರ ಅಸಹನೀಯವಾಗಿದ್ದು ಆ ಕಡೆ ತಲೆ ಹಾಕಿಯೂ ಮಲಗದಂತೆ ಮಾಡಿದ್ದವು.

ಉಳಿದವೆಲ್ಲವೂ ಮತ್ಸ್ಯ ಬ್ರಾಹ್ಮಣರ ಹೊಟೇಲುಗಳು. ಎಂದೇ ಇವು ಶುದ್ಧ ಬ್ರಾಹ್ಮಣರಿಗೆ ಅಪ್ರವೇಶ್ಯ — out of bounds! ಇವುಗಳಲ್ಲಿ ಲಕಲಕಿಸುತ್ತ ಘಮ ಘಮಿಸುತ್ತಿದ್ದ ಕಲ್ಯಾಣಿ ಶೇವು, ದವ್ರೋಟು, ಚಿಗಳಿ, ಬೂಂದಿ, ಮೈಸೂರು ಪಾಕ ಮುಂತಾದ ಭಕ್ಷ್ಯ ವಿಶೇಷಗಳೂ ಇಡ್ಲಿ ಸಾಂಬಾರ್, ಮಸಾಲೆ ದೋಸೆ, ಬೋಂಡ ಚಟ್ನಿ, ಮಿರ್ಚಿ ಉಪ್ಪಿಟ್ಟು ಮುಂತಾದ ಭೋಜ್ಯ ವೈಶಿಷ್ಟ್ಯಗಳೂ ಸ್ವರ್ಗದಲ್ಲಿ ಕೂಡ ಅಲಭ್ಯವೆಂಬುದು ನನ್ನ ಭಾವನೆ. ಹುರಿದ ನೀರುಳ್ಳಿಯ ಮೋದಕರ ಸುವಾಸನೆ, ಸುಟ್ಟ ಎಣ್ಣೆ –ಇಂಗು ಮಿಶ್ರಣದ ಮತ್ತುಕಾರಕ ಘಾಟು, ಸಂಬಾರ ಜಿನಸುಗಳ ಸಮಗ್ರ ಪಾಕ ಬೀರುತ್ತಿದ್ದ ನವುರು ಅಮಲು ಮುಂತಾದವು ಎಣ್ಣೆ ಕನರು, ಸೆಗಣಿ ವಾಸನೆ, ಗಂಜಲದ ಮೂರಿ ಮತ್ತು ಜಿರಲೆ ಥೋಂಕ್ರು ತಿವಿಯುತ್ತಿದ್ದ ನಮ್ಮ ಅಡುಗೇ

ಮನೆಗಳಲ್ಲಿ ಸರ್ವಥಾ ಶೂನ್ಯವಾಗಿದ್ದುವು. ಆದ್ದರಿಂದ ಆ ಕೊಂಕಣಿ ಹೊಟೇಲುಗಳು ನನ್ನ ವಿಶೇಷ ಗೌರವ, ಆದರ ಮತ್ತು ಒಂದು ಬಗೆಯ ಅಸೂಯೆಗೆ ಕೂಡ ಪಾತ್ರವಾಗಿದ್ದವು.

ನಮ್ಮ ಬಯಕೆಯ ವಸ್ತು ಕೈದೂರದಲ್ಲಿದ್ದೂ ಭೋಗ್ಯಕ್ಕೆ ಎಟುಕದಾಗ ಅದರ ಬಗೆಗಿನ ಬೇಡಿಕೆ ಕಡಿದಾಗಿ ಏರುವುದು ಸಹಜ. ಇನ್ನು ಆ ಬೇಡಿಕೆಯ ಪೂರೈಕೆಗಾಗಿ ವ್ಯಕ್ತಿ ಅನುಸರಿಸಬಹುದಾದ ನೇರ ಹಾದಿ ಅಷ್ಟೇನೂ ಗೌರವಾನ್ವಿತವಾದುದಲ್ಲವೆಂದು ಸಮಾಜ ಪರಿಗಣಿಸಿದಾಗ ಆತ ವಾಮ ಮಾರ್ಗಗಾಮಿಯಾಗುವುದು ಕೂಡ ಅಷ್ಟೇ ಸಹಜ ಈ ಅನಿವಾರ್ಯತೆಯ ಚಬಕಿನಿಂದ ಚುರುಕಿಸಲ್ಪಟ್ಟ ನಾನೊಮ್ಮೆ ಕೊಂಕಣಿ ಹೊಟೇಲಿಗೆ ಹೋಗುವ ಸಾಹಸ ಪ್ರದರ್ಶಿಸಿದೆ.

ಇದು ಖಂಡಿತ ಪಾಪಕಾರ್ಯವಲ್ಲವೆಂಬುದು ನನ್ನ ದೃಢ ವಿಶ್ವಾಸ. ಏಕೆಂದರೆ ನನಗೆ ಉಪನಯನ ಮಾಡಿಸಿದ್ದ ಕುಲಪುರೋಹಿತರು ಅನೇಕ ಸಲ ಅದೇ ಹೊಟೇಲಿನೊಳಗಿನಿಂದ ಪ್ರಸಾದಸ್ವೀಕಾರಸಂತುಷ್ಟರಾಗಿ ನಿಷ್ಕ್ರಮಿಸುತ್ತಿದ್ದುದನ್ನು ಕಂಡು ಕರುಬಿದ್ದೇನೆ; ನನ್ನ ತಂದೆಯವರ ಕಚೇರಿಯಲ್ಲಿ ಒಮ್ಮೆ ನಡೆದ ಬೀಳ್ಕೊಡುಗೆ ಸಮಾರಂಭದಲ್ಲಿ ಸಾಕ್ಷಾತ್ ಅವರೇ ಹೊಟೇಲ್ ತಿಂಡಿ ತೀರ್ಥ ತಿಂದು ಕುಡಿದು ತೇಗಿದುದನ್ನೂ ತದನಂತರ ಮನೆಯಲ್ಲಿ ಗೋಮೂತ್ರ ತುಳಸೀ ತೀರ್ಥ ಸೇವನೆಯಿಂದ ದೇಹ ಶುದ್ಧೀಕರಣ ಮಾಡಿಕೊಂಡುದನ್ನೂ ಕಂಡು ಸಮಸ್ಯಾಬಾಧಿತನಾಗಿದ್ದೇನೆ.

ನನ್ನ ಈ 'ಆಪರೇಶನ್ ಕಲ್ಯಾಣಿ ಶೇವು' ಸಾಹಸಕ್ಕೆ ಹಣ ಒದಗಿಸುವುದು ಹೇಗೆ? ಭೂರಿ ಭೋಜನಗಳಲ್ಲಿ ಬ್ರಾಹ್ಮಣ ವಟುಗಳಿಗೆ ಅನಾಯಾಸವಾಗಿ ದೊರೆಯುತ್ತಿದ್ದ ದಕ್ಷಿಣೆ ಹಣ ನನ್ನಲ್ಲಿ ಹಿರಿಮೊತ್ತವಾಗಿ ಸಂಗ್ರಹವಾಗಿತ್ತು. ಇದು ನನ್ನ ಖಾಸಗಿ ಆಸ್ತಿ, ಸ್ವಂತ ಸಂಪಾದನೆ. ಮೂರು ಪೂರಕ ಬಲಗಳು ಇಲ್ಲಿ ಸಂಗಮಿಸಿದುವು : ಹೊಟೇಲಿನಲ್ಲಿ ಆಕರ್ಷಣೆ, ಸಂಚಿಯಲ್ಲಿ ದುಡ್ಡು, ನಡುವೆ ಬಯಕೆ. ನಾನು ಮಾಡಬಾರದ್ದನ್ನು ಮಾಡಿಯೇ ಬಿಟ್ಟೆ – ಕೊಂಕಣಿ ಹೊಟೇಲಿಗೆ ಹೋಗಿ ತಿಂಡಿ ತಿಂದೆ, ನಳಪಾಕದ ಪೂರ್ಣಾರ್ಥಪರಿತು ಕೃತಾರ್ಥನಾದೆ. ಅವರೆ ಜಾತಿಭ್ರಷ್ಟನಾದೆ! ಏಕೆಂದರೆ ಈ ಜಿಹ್ವಾನಂದ ಕ್ಷಣಿಕವಾಗಿತ್ತು. ಅದೇ ಪುರೋಹಿತಹೀಡೆ ನನ್ನ ಅಪ್ಪನಿಗೆ ದೂರು ಒಯ್ದಿದ್ದ. ಇವರೋ ಉಗ್ರನರಸಿಂಹನಾಗಿ ಕಂಬವಸ್ನಲ್ಲ ನಡುಹಗಲಲ್ಲೇ ಸೀಳಿ ಮನೆಗೆ ಧಾವಿಸಿ ನನಗೆ ಮುಸಲ ಸೇವೆ, ಅವಾಚ್ಯನಿಂದೆ, ಭವಿಷ್ಯದ ಬಗೆಗೆ ಭಯಕಾರಕ ಎಚ್ಚರಿಕೆ ಮುಂತಾದವನ್ನು ಸಮೃದ್ಧವಾಗಿ ಊಡಿದರು. ಮುಂದೆ ತೀರ್ಥೋದಕ ಸ್ನಾನ, ಪಂಚಗವ್ಯ ಸೇವನೆ, ನೂತನ ಯಜ್ಞೋಪವೀತ ಧಾರಣೆ, ಗಾಯತ್ರೀ ಮಂತ್ರ ಪಠನ ಮುಂತಾದ ಸಂಸ್ಕಾರ ನೀಡಿ ಬ್ರಾಹ್ಮಣ್ಯವನ್ನು ರಕ್ಷಿಸಿದರು. ಆದರೆ ಮಾನ?

ಈಗ ಅರ್ಧ ಶತಮಾನಾನಂತರ ಈ ಘಟನೆಯನ್ನು ಮೆಲುಕು ಹಾಕುವಾಗ ಎರಡು ಭಾವನೆಗಳು ಸ್ಫುರಿಸುತ್ತವೆ.

ಒಂದು, ಅಂದಿನ ಪರಿಸರವೇ ಹಾಗೆ. ಆ ಚೌಕಟ್ಟಿನಲ್ಲಿ ನನ್ನ ತಂದೆಯವರಾಗಲೀ ನಾನಾಗಲೀ ಬೇರೆ ರೀತಿ ವರ್ತಿಸಿರಲು ಸಾಧ್ಯವೇ ಇರಲಿಲ್ಲ. ಸ್ಥಗಿತ ಪರಂಪರೆಯ ಪ್ರತೀಕ ಅವರಾಗಿದ್ದರು. ನಾನೋ? ಬಂಡಾಯದ ಕುಡಿ ಆಗಿದ್ದೆ. (ನಾಲ್ಕು ದಶಕಗಳ ಅನಂತರ ನನ್ನ ಮಗ ಬೇರೆ ಒಂದು ಸಂದರ್ಭದಲ್ಲಿ ಇದೇ ಅಭಿಪ್ರಾಯವನ್ನು ನನ್ನ ಬಗ್ಗೆ ವ್ಯಕ್ತಪಡಿಸಿದ್ದ! ಇತಿಹಾಸ ಪುನರಾವರ್ತಿಸುತ್ತದೆ?) ಪುರೋಹಿತ? ಇತರ ಎಲ್ಲ ವೃತ್ತಿಗಳಂತೆ ಇಲ್ಲಿಯೂ ಮೊದಲ ಬಲಿ ಈತ ವೃತ್ತಿಯಿಂದ ಎತ್ತಿ ಹಿಡಿದಿದ್ದ ಮೌಲ್ಯ! ವಿದ್ಯಾ ಇಲಾಖೆಯಲ್ಲಿ ಜ್ಞಾನ, ಆರಕ್ಷಕ ಇಲಾಖೆಯಲ್ಲಿ ಮಾನ, ವೈದ್ಯ ಇಲಾಖೆಯಲ್ಲಿ ಆರೋಗ್ಯ, ಕಾಮಗಾರಿ ಇಲಾಖೆಯಲ್ಲಿ ಕಟ್ಟಡ, ಇತ್ಯಾದಿ, ಮೊದಲ ಬಲಿಯಾಗುವುದು ನಿಯಮವಾಗಿರುವಂತೆ.

ಎರಡು, ಗತಿಶೀಲ ಸಮಾಜದಲ್ಲಿ ಎದ್ದು ಕಾಣುವ ನಿರಂತರ ಬದಲಾವಣೆ. ಬದುಕನ್ನು ಹಿಮ್ಮುಖವಾಗಿ ತೆವಳುವಂತೆ ಮಾಡುವ ಸಮಸ್ತ ವಿಪರ್ಯಯ ಬಲಗಳನ್ನೂ ಅದು ಹೇಗೆ ಸಾಮಾಜಿಕವಾಗಿ ನಿಧಾನ ನಿಧಾನವಾಗಿಯಾದರೂ ಪ್ರಗತಿಗಾಮಿಯಾಗಿಯೇ ಚಲಿಸುವುದೆಂಬುದನ್ನು ಕಂಡು ವಿಸ್ಮಿತನಾಗಿದ್ದೇನೆ. ಜಾತಿಯ ಅಳಿವು ಉಳಿವು ಇಂದು ಹೊಟೇಲಿಗೆ ಹೋಗುವ ಅಥವಾ ಹೋಗದಿರುವಂಥ ಕ್ಷುದ್ರ ಘಟನೆಗಳನ್ನು ಅವಲಂಬಿಸಿಲ್ಲ. ಜೀವನದಂತೆ ಇವು ಕೂಡ ಅಧಿಕ ಸಂಕೀರ್ಣವಾಗಿವೆ. ಇಂದು ಕಾಕನ ಚಾ ದುಕಾನಾದಲ್ಲಿಯೇ (ಇದರ ವರ್ತಮಾನ ಪವಿತ್ರ ನಾಮಧೇಯ ಭವ್ಯ ಪಂಚತಾರಾ ಉಪಾಹಾರ ಮಂದಿರ) ಕುಳಿತು ಜಾತಿಭೇದ ತೊರೆದು, ವರ್ಣಮಯ ಚೀನೀ ಖಾದ್ಯ ಮತ್ತು ವಿಲಾಸಮಯ ಫ್ರೆಂಚ್ ಪೇಯ ಸೇವಿಸಿಯೂ ಖಾಸಗಿ ಹಾಗೂ ಸಾರ್ವಜನಿಕ ರಂಗದಲ್ಲಿ ಅತ್ಯಂತ ಹೇಯ ಜಾತೀಯ ವಿಷವನ್ನು ಧಾರಾಳವಾಗಿ ಧಾರೆ ಎರೆಯುತ್ತಿದ್ದೇವೆ.

ಆದ್ದರಿಂದ ನಾನು ಹೇಳುವುದಿದು: ಯಥಾ ಜನಾಸ್ತಥಾ ಹೊಟೇಲ್ !

ಹೊಟೇಲ್ ಉದ್ಯಮ ಸಮಾಜದ ಒಂದು ಅವಿಭಾಜ್ಯ ಅಂಗ; ಸರಕು ಹಾಗೂ ಸೇವೆ ಪೂರೈಸುವ ಬಹುಜನಾವಲಂಬಿ ಕಾರ್ಖಾನೆ; ಜನರ ಮೂರು ಪ್ರಮುಖಾವಶ್ಯಕತೆಗಳ ಪೈಕಿ — ಅಶನ, ವಸನ, ವಸತಿ — ಮೊದಲನೆಯದನ್ನೂ ಕೊನೆಯದನ್ನೂ ಒದಗಿಸುವ ತಂತ್ರ ಸೌಕರ್ಯ; ಹಸಿದು ಕನಲಿ ಬರುವ ದೂರ್ವಾಸನಿಗೂ ಅವನ ಶಿಷ್ಯ ಕೋಟಿಗೂ ದಿಢೀರನೆ ಮೃಷ್ಟಾನ್ನಭೋಜನ ಬಡಿಸುವ ಅಕ್ಷಯ ಪಾತ್ರೆ.

ಧರ್ಮಾರ್ಥ ಅನ್ನ ಸಂತರ್ಪಣೆ ಮಾಡಿದಾಗಲೂ ಜನರ ನಿಂದೆ ತಪ್ಪಿದ್ದಲ್ಲ. ಇನ್ನು ಅನ್ನ ಮಾರಿ ಯಾರಾದರೂ ಎಂದಾದರೂ ಒಳ್ಳೆಯ ಮಾತು ಕೇಳಿದ್ದಾರೇ? ಸುತರಾಂ ಇಲ್ಲ. ಅನ್ನವನ್ನು ಹಳಿಯಬೇಡ ಎಂಬುದು ಹಳೆಯ ಮಾತು. ಅನ್ನದಾತಾರಃ ಸುಖೀಭವ ಒಂದು ಆಶೀರ್ವಚನ. ಆದರೆ ಜನ ಹೊಟೇಲ್ ಅನ್ನವನ್ನು ತೆಗಳುವುದೇ ವಾಡಿಕೆ, ಹೊಟೇಲಿಗನಿಗೆ ಶಾಪ ಹಾಕುವುದೇ ಸಂಪ್ರದಾಯ.' ಇದೇಕೆ ಹೀಗೆ?

ವ್ಯಕ್ತಿ–ವ್ಯಕ್ತಿ ನಡುವಿನ ನಿಜ ಸಂಪರ್ಕ ಮೈದಳೆಯುವುದು ಮಾತಿನ ಮೂಲಕ ಅಲ್ಲ, ಹೊಟ್ಟೆಯ ಮೂಲಕ. ಎಷ್ಟು ಹೊಟ್ಟೆಗಳೋ ಅಷ್ಟು ರುಚಿಗಳು ಮತ್ತು ಅಷ್ಟು ಬಯಕೆಗಳು. ಇವನ್ನು ಪೂರೈಸುವುದು ಬ್ರಹ್ಮನಿಗೂ ಅಸಾಧ್ಯ. ಅತೃಪ್ತಿಯ ಮೂಲವೇ ಇದು. ಆದ್ದರಿಂದ ಹೊಟೇಲ್ ಉದ್ಯಮದ ಅನಿವಾರ್ಯ ಸಹಯಾತ್ರಿಯಾಗಿ ಅಥವಾ ಉಪೋತ್ಪನ್ನವಾಗಿ ರೂಪುಗೊಂಡಿರುವ ಗ್ರಾಹಕ ಅಸಂತೃಪ್ತಿಯನ್ನು ಮೊದಲು ಒಪ್ಪಿಕೊಂಡು ಮುಂದಿನ ವಿಚಾರಕ್ಕೆ ಹೋಗೋಣ.

ರಾಷ್ಟ್ರೀಯ ಏಕತೆ ಎಂಬುದು ಇಂದಿನ ಕ್ಲೀಷೆ ಬೀಜ ಮಂತ್ರ. ಇದನ್ನು ತಮ್ಮ ವೃತ್ತಿಯ ಒಂದು ಅವಶ್ಯಕ ಘಟಕವಾಗಿ ಅನುಷ್ಠಾನಿಸುವಲ್ಲಿ ಹೊಟೇಲಿಗರು ಸದ್ದು ಗದ್ದಲವಿಲ್ಲದೆ ನಿರ್ವಹಿಸುತ್ತಿರುವ ಪಾತ್ರ ಗಣನೀಯವಾದದ್ದು. ಇದೇನೆಂಬುದನ್ನು ಮುಂದಿನ ನಾಲ್ಕು ಪರಿಚ್ಛೇದಗಳಲ್ಲಿ ಗುರುತಿಸಿದ್ದೇನೆ:

* ಹೊಟೇಲುಗಳು ಆಯಾ ಊರಿನ ಸಾಂಸ್ಕೃತಿಕ ವೈಶಿಷ್ಟ್ಯವನ್ನು ದೇಶ ವಿದೇಶಗಳ ಪ್ರಯಾಣಿಕರಿಗೂ ಪ್ರವಾಸಿಗರಿಗೂ ಪರಿಚಯಿಸಿ ಕೊಡುವ ಜೀವಂತ ರಾಯಭಾರಿಗಳು. ದೇಶದ ಕೆಲವೊಂದು ಮುಖ್ಯ ನಗರಗಳಿಗೆ ಹೋಗಿ ಅಲ್ಲಿಯ ಮಧ್ಯಮ ವರ್ಗದ ಹೊಟೇಲುಗಳಲ್ಲಿ ಹಲವು ದಿನ ತಂಗಿದ್ದು ಹಿಂತಿರುಗಿದಾಗ ಈ ಹೇಳಿಕೆಯ ಯಾಥಾರ್ಥ ಅರಿವಾಗುವುದು.

* ಹೊಟೇಲುಗಳು ಜನರ ಉದರಗಳಿಗೆ ಗ್ರಾಸ

ಒದಗಿಸುವ ಆಹಾರ ಕಾರ್ಖಾನೆಗಳು. ಇವುಗಳ ಅನ್ವಯಕ್ಷೇತ್ರ ನಿಜಕ್ಕೂ ಜಾತ್ಯತೀತ, ಭಾಷಾತೀತ, ಮತ್ತು ಗಡಿ ಅತೀತ. ಪಟ್ಟಾಲವ್ ಹೊಟ್ಟೆ ಮೇಲೆ ನಡೆಯುತ್ತದೆ ಎಂಬ ನಿಂದಾತ್ಮಕ ನುಡಿಯನ್ನು ಒಬ್ಬ ಜನರಲ್ ಹೇಳಿದ ನಂತೆ. ಅಂತಿಮವಾಗಿ ಜನ ದೇಶಪ್ರೇಮಕ್ಕಾಗಿ ಅಲ್ಲ ಉದರಂಭರಣಕ್ಕಾಗಿ ಮಾತ್ರ ಸೈನ್ಯ ಸೇರುತ್ತಾರೆ ಎಂಬುದು ಇಲ್ಲಿಯ ವ್ಯಂಗ್ಯ. ಪ್ರತಿಯೊಂದು ವೃತ್ತಿ ಕುರಿತು ಕೂಡ ಇದು ನಿಜವೇ ಸರಿ. ಮಂತ್ರಿ ಮಹೋದಯರಿಂದ ತೊಡಗಿ ಸರಕಾರೀ ಅಧಿಕಾರಿಗಳ ಮೂಲಕ ಕಾರ್ಮಿಕ ರೈತ ಕೂಲಿಯ ವರೆಗೆ 'ಎಲ್ಲಾರು ಮಾಡುವುದು ಹೊಟ್ಟೆಗಾಗಿ.'

* ಹೋಟೇಲುಗಳು ದೇಶಸಂಚಾರಿಗಳಿಗೆ ಮೊದಲ ತಂಗುದಾಣಗಳು. ಎಂದೇ ಇವು ಕಲಾವಿದ, ಸಾಹಿತಿ, ಉದ್ಯಮಿ, ಪ್ರವಾಸಿ ಪ್ರತಿಯೊಬ್ಬನಿಗೂ ಪ್ರಿಯ ಸಂಗಾತಿಗಳು. ಒಂದು ಪಕ್ಷ ಹೋಟೇಲುಗಳು ಇಲ್ಲವಾಗಿದ್ದರೆ ಜನರ ಸ್ಥಿತಿ ಏನಾಗಿರುತ್ತಿತ್ತು? ಆಗ ಪ್ರತಿಯೊಬ್ಬನೂ ತನ್ನ ಪಾಥೇಯವನ್ನು ತಾನೇ ಹೊತ್ತು ಹೋಗಬೇಕಾಗುತ್ತಿತ್ತು, ತಾನು ತಂಗಿದಲ್ಲಿ ಅಡುಗೆಗಾಗಿ ಅಪಾರ ಕಾಲ ವ್ಯಯ ಮಾಡಬೇಕಾಗುತ್ತಿತ್ತು, ಅಥವಾ ಆಹಾರಕ್ಕಾಗಿ ಸ್ಥಳೀಯ ಕುಟುಂಬಗಳನ್ನು ಆಶ್ರಯಿಸಬೇಕಾಗುತ್ತಿತ್ತು. ಈ ನಿರ್ಬಂಧಗಳು ಆತನ ಜ್ಞಾನ ಹಾಗೂ ಸಂಚಾರ ಪರಿಧಿಯನ್ನು ಕೆಲವೇ ಕಿಲೊಮೀಟರುಗಳಿಗಿಂತ ಆಚೆಗೆ ವ್ಯಾಪಿಸಲು ಬಿಡುತ್ತಿರಲಿಲ್ಲ.

* ಈಚಿನ ವರ್ಷಗಳಲ್ಲಿ ಸರಕಾರದ ಕಬಂಧ ಬಾಹು ಹೋಟೇಲ್ ಉದ್ಯಮವನ್ನು ಕೂಡ ಸೆರೆಹಿಡಿದಿದೆ. ಇಲ್ಲಿ ಸರಕಾರ ಎಂದರೆ ಆಳುವ ಪಕ್ಷ ಮತ್ತು ಆಡಳಿತಶಾಹಿ. ಜನರ ಆರೋಗ್ಯ ಪೋಷಣೆ ಮತ್ತು ಕಾರ್ಮಿಕರ ಹಿತರಕ್ಷಣೆ ಎಂಬ ಆಕರ್ಷಕ ಘೋಷಣೆಗಳ ನೆರಳಿನಲ್ಲಿ ಇವು ವ್ಯವಸ್ಥಿತ ಹಗಲು ದರೋಡೆಗೆ ಮುಂದಾಗಿವೆ. ಇತ್ತ ಹೋಟೇಲಿಗನೇನೂ ಧರ್ಮರಾಯನಲ್ಲ. ಅವನು ಈ ದರೋಡೆಯ ಪಾಲುಗಳನ್ನು ಪ್ರಚ್ಛನ್ನವಾಗಿ ಗ್ರಾಹಕರಿಗೂ ಕಾರ್ಮಿಕರಿಗೂ ವರ್ಗಾಯಿಸಿ ತನ್ನ ಲಾಭ ಗಿಟ್ಟಿಸಲು ಹೆಣಗುತ್ತಾನೆ. ಕಾರ್ಮಿಕರು? ಇವರು ಸುಸಂಘಟಿತರಾಗಿ ದಲಿತ ಇಲ್ಲವೇ ಶೋಷಿತ ಎಂಬ ಛಾಪು ಲೇಪಿಸಿಕೊಂಡು ತಮ್ಮ ಅಶಿಸ್ತನ್ನೂ ಮೈಗಳ್ಳತನವನ್ನೂ ಮರೆಮಾಡಲು ಯತ್ನಿಸುತ್ತಾರೆ. ವಾಸ್ತವವಾಗಿ ಇಲ್ಲಿಯ ನಿಜವಾದ ಶೋಷಿತನೆಂದರೆ ಗಿರಾಕಿ. ಎಂದೂ ಸಂಘಟಿತರಾಗದ, ಸಂಘಟಿತರಾಗಲು ಅವಕಾಶವೇ ಇರದ, ಗಿರಾಕಿಗಳೇ ಈ ತ್ರಿಕೋಣವ್ಯವಸ್ಥೆಯ (ಹೋಟೇಲಿಗ-ಕಾರ್ಮಿಕ-ಗಿರಾಕಿ) ಸಮಸ್ತ ಭಾರವನ್ನೂ ಧರಿಸಿರುವ ಕೂರ್ಮ. ಸರಕಾರ ನಿಜವಾಗಿಯೂ ಜನಹಿತವನ್ನು—ಪಕ್ಷಹಿತವನ್ನು ಅಲ್ಲ— ಪುರಸ್ಕರಿಸಿದರೆ ಮತ್ತು ಆಡಳಿತಶಾಹಿ ನಿಜವಾಗಿಯೂ ವಿಧಿನಿಯಮ ಬದ್ಧ ಆಡಳಿತ ನಡೆಸಿದರೆ ಆಗ ಹೋಟೇಲಿಗ-ಕಾರ್ಮಿಕ-ಗಿರಾಕಿ ತ್ರಿಭುಜ ಒಂದು ಸುಂದರ ಸಹಕಾರ ರಂಗವಾಗಿ ಅಲ್ಲಿ ಜನಹಿತ ಸದಾಕಾಲ ನಳನಳಿಸುತ್ತಿರುತ್ತದೆ.

ನಾನೆಂದೂ ಹೋಟೇಲ್ ವಿಹಾರಿ ಪಕ್ಷಿಯಲ್ಲ, ಹೋಟೇಲ್ ದೂಷಕ ಕೀಟವೂ ಅಲ್ಲ. ಹೋಟೇಲಿಗ ನನ್ನಂತೆಯೇ ಒಂದು ವೃತ್ತಿ ಅವಲಂಬಿಸಿದ್ದಾನೆ ಹೊಟ್ಟೆಪಾಡಿಗೆ ಎಂಬುದು ನನಗೆ ಗೊತ್ತಿದೆ. ಇದನ್ನು ಆತ ಸಾಮಾಜಿಕೋಪಯುಕ್ತತೆಯ ದೃಷ್ಟಿಯಿಂದ ನಿರ್ವಹಿಸಿದರೆ ಆತನ ಉತ್ಕರ್ಷೆ ಆಗುತ್ತದೆ, ವೃತ್ತಿಗೌರವ ಉಜ್ವಲಿಸುತ್ತದೆ, ಮತ್ತು ಆತ ನಮ್ಮ ಕೃತಜ್ಞತೆಗೆ ಪಾತ್ರನಾಗುತ್ತಾನೆ. ಹೀಗಲ್ಲದೇ ಆತ ಸ್ವಾರ್ಥಪ್ರೇರಿತನಾಗಿ ವಾಮಮಾರ್ಗ ಕ್ರಮಿಸಿದರೆ ಆತನಲ್ಲಿ ಅತಿ ಶೀಘ್ರವಾಗಿ ಅಪಾರ ಧನಸಂಚಯವಾಗಬಹುದು, ಈ ಕಾರಣದಿಂದ ಆತನಿಗೆ ಸಮಾಜದಲ್ಲಿ ಗಣ್ಯಸ್ಥಾನ ಪ್ರಾಪ್ತವಾಗಬಹುದು, ಮತ್ತು ಆತ ಗೌರವಾನ್ವಿತರ ಜೊತೆ ಸಮಾನಸ್ಕಂಧನಾಗಿ ಮೆರೆಯಲೂ

ಬಹುದು. ಆದರೆ ಇದೊಂದು ಟೊಳ್ಳು ಬಾಳು, ಅಂತಿಮವಾಗಿ ಸ್ವಯಂವಿನಾಶಕರ ಭಸ್ಮಾಸುರ ಮಾರ್ಗ.

ನಾನು ಸದಾ ಗೃಹವಾಸಿ ಸಾಧು ಜಂತು. ಆಹಾರ ಕುರಿತು ಅತಿ ನಿಷ್ಠುರಮರ್ಜಿ. ಪ್ರತಿಯೊಂದು ಹೊಟೇಲೂ ದುಂದುವೆಚ್ಚದ ಮೂಲ, ಕೃತಕತೆಯ ಸಾಕ್ಷಾತ್ಕಾರ, ರೋಗರುಜಿನಗಳ ಕೂಪ ಎಂಬ ಭಾವನೆ ನನ್ನದು. ಹೀಗಾಗಿ ಅನ್ಯಥಾ ಅನಿವಾರ್ಯವಾದಾಗ ಮಾತ್ರ ಹೊಟೇಲ್ ಆಶ್ರಯಿಯಾಗುತ್ತೇನೆ ಅಷ್ಟೆ. ಇಂಥ ಕಡ್ಡಾಯದ ಅನುಭವಗಳಿಂದ ಒಂದು ತಥ್ಯ ಕಂಡುಕೊಂಡಿದ್ದೇನೆ: ಗೃಹಪಾಕದ ನಿಜಮೌಲ್ಯದ ಅರಿವಾಗಲು ಹೊಟೇಲಿಗೆ ಹೋಗು. ಪ್ರತಿಸಲ ಪರ ಊರಿಗೆ ಕರ್ತವ್ಯ ನಿಮಿತ್ತ ಹೋಗಿ ಹೊಟೇಲ್‌ವಾಸಿಯಾಗಿ ಮರಳಿದಾಗ ಮನೆ ಅಡುಗೆಯ ಹಿರಿಮೆಯನ್ನು ಇನ್ನಷ್ಟು ಚೆನ್ನಾಗಿ ಅರಿಯುತ್ತೇನೆ: ಅಲ್ಲಿಯ ಕೃತಕತೆಯ ಮುನ್ನೆಲೆಯಲ್ಲಿ ಇಲ್ಲಿಯ ಸ್ವಾಭಾವಿಕತೆ ಅಧಿಕ ಉಜ್ವಲತೆಯಿಂದ ವಿಜೃಂಭಿಸುತ್ತದೆ.

ಇದೇಕೆ ಹೀಗೆ? ಛದ್ಮ ವೇಷದಲ್ಲಿದ್ದ ಟಿಪ್ಪು ಸುಲ್ತಾನನಿಗೆ ರಾಗಿಮುದ್ದೆ ಮತ್ತು ಸೊಪ್ಪಿನ ಸಾರನ್ನು ಪ್ರೀತಿಯಿಂದ ಅಭ್ಯಾಗತನ ಬಗೆಗಿನ ಸಹಜ ಗೌರವದಿಂದ — ಉಣಬಡಿಸಿದ ಹಳ್ಳಿಯ ಮಾತಾಯಿಯ ನೆನಪಾಗುತ್ತದೆ. ಅರಮನೆಯ ಪಾಕಶಾಲೆಯಲ್ಲಿ ದೊರೆಯದ ರುಚಿಯ ಅನುಭವ ಅವನಿಗಿಲ್ಲಿ ಆಯಿತು. ಇದರಿಂದ ಅತಿಶಯವಾಗಿ ಮನಕರಗಿದ ಸುಲ್ತಾನ ತನ್ನ ಬಾಣಸಿಗರಿಂದ ಅದೇ ಪಾಕ ತಯಾರಿಸಿ ಉಂಡ. ಆದರೆ ತೃಪ್ತಿ ಮೂಡಲಿಲ್ಲ. ಕಾರಣವೇನು? ಪುರಂದರದಾಸರ ಮಾತುಗಳಲ್ಲಿ

ಕೇಳನೋ ಹರಿ ತಾಳನೊ
ತಾಳ ಮೇಳಗಳಿದ್ದು ಪ್ರೇಮವಿಲ್ಲದ ಗಾನ
ತಂಬೂರಿ ಮೊದಲಾದ ಅಖಿಳ ವಾದ್ಯಗಳಿದ್ದು
ಕೊಂಬು ಕೊಳಲು ಧ್ವನಿ ಸ್ವರಗಳಿದ್ದು
ತುಂಬುರು ನಾರದರ ಗಾನ ಕೇಳುವ ಹರಿ
ನಂಬಲಾರ ಈ ಡಂಭಕದ ಕೂಗಾಟ



ಇಂಗ್ಲಿಷಿನಲ್ಲಿ ಈ ಭಾವಕ್ಕೆ ಸಂವಾದಿಯಾದ ಒಂದು ಹೇಳಿಕೆ ಇದೆ: If there is no love in the kitchen there is no taste on the table. ಭಗವದ್ಗೀತೆಯ ಈ ಮುಂದಿನ ಶ್ಲೋಕ ಇದೇ ಅರ್ಥ ಸೂಚಿಸುತ್ತದೆ:

ಅಶ್ರದ್ಧಯಾ ಹುತಂ ದತ್ತಂ
ತಪಸ್ತಪ್ತಂ ಕೃತಂಚಯತ್
ಅಸದಿತ್ಯುಚ್ಯತೇ ಪಾರ್ಥ
ನಚ ತತ್ಪ್ರೇತ್ಯನೋ ಇಹ

"ಅರ್ಜುನ! ಶ್ರದ್ಧೆ ಇಲ್ಲದೆ ಮಾಡಿದ ಹೋಮ, ದಾನ, ತಪಸ್ಸು ಮತ್ತು ಎಲ್ಲವೂ ಅಸತ್ (ಅಯೋಗ್ಯ) ಎನ್ನಿಸುವುವು. ಅಂಥ ಕರ್ಮ ಸತ್ತ ಮೇಲಿನ ಫಲವನ್ನು ಕೊಡುವುದಿಲ್ಲ, ಈಗಿನ ಫಲವನ್ನೂ ಕೊಡುವುದಿಲ್ಲ."

ಹೊಟೇಲಿನ ಪಾಕಶಾಲೆ ಪ್ರೇಮರಹಿತವಾಗಿದ್ದು ಭೋಜನಮಂದಿರ ರುಚಿ ಶೂನ್ಯವಾಗಿರುವುದೇಕೆ? ಪ್ರತಿಯೊಬ್ಬ ಹೊಟೇಲಿಗನೂ ಆರಂಭದಲ್ಲಿ ಗ್ರಾಹಕಪ್ರೇಮವನ್ನೇ ಬಂಡವಾಳವಾಗಿಟ್ಟುಕೊಂಡು ತನ್ನ ಉದ್ಯಮದಲ್ಲಿ ತೊಡಗುತ್ತಾನೆ. ಆದರೆ ಇದರ ವ್ಯವಸ್ಥಾಪನೆಯಲ್ಲಿ, ಇತರ ಯಾವುದೇ ಉದ್ಯಮದಂತೆ, ಪ್ರೇಮರಾಹಿತ್ಯ ಅಂತಸ್ಥವಾಗಿರುತ್ತದೆ. ಹೀಗಾಗಿ ದೈನಂದಿನ ಕಾರ್ಯಕಲಾಪಗಳು ಯಾಂತ್ರಿಕತೆಯ ನೀರಸ ಏಕತಾನತೆಗೆ ಕೆಡೆಯುತ್ತವೆ. ಯಾಂತ್ರಿಕತೆ ಇದ್ದಲ್ಲಿ ಪ್ರೇಮ ಗೈರುಹಾಜರು. ಪ್ರೇಮದ ಅಭಾವದಲ್ಲಿ ರುಚಿ ಶೂನ್ಯ. ಆದ್ದರಿಂದ ಹೊಟೇಲಿಗ ಗ್ರಾಹಕ ಪ್ರೇಮವನ್ನು— ಕಾಂಚನ ಪ್ರೇಮವನ್ನಲ್ಲ— ಮುಂಚೂಣಿಯಲ್ಲಿಟ್ಟು ದುಡಿಯುತ್ತಿರುವ ತನಕ ಆತನ ಅನ್ನಮಂದಿರ ಗೃಹದ ವಿಸ್ತರಣೆ ಆಗಿರುತ್ತದೆ; ಈ ಆದರ್ಶ ತಿರುಗಾಮುರುಗಾ ಆದಾಗ ಆ ಹೊಟೇಲ್ ಮಾಲಿಕನಿಗೆ ಹಣವನ್ನೂ ಗ್ರಾಹಕನಿಗೆ ಅತೃಪ್ತಿಯನ್ನೂ ನೀಡುವ ನಿರ್ಜೀವ ಯಂತ್ರದ ಮಟ್ಟಕ್ಕೆ ಕುಸಿಯುತ್ತದೆ.

ಕೊನೆಯದಾಗಿ ಗ್ರಾಹಕರ ಬಗ್ಗೆ ಎರಡು ಮಾತು. ತಾವು ದುಡ್ಡು ಕೊಡುವವರಾದ್ದರಿಂದ ಏನು ಮಾಡಿದರೂ ಸಲ್ಲುತ್ತದೆ, ಹೊಟೇಲಿಗರೆಲ್ಲರೂ ಕೆಲಸಗಾರರ ಮತ್ತು ಗ್ರಾಹಕರ ನೆತ್ತರು ಹೀರುವ ಜಿಗಣೆಗಳು, ದುಡ್ಡಿನ ಮೂಟೆಯ ಮೇಲೆ ಆಸೀನರಾಗಿರುವ ಶೋಷಕರು ಇವೇ ಮುಂತಾದ ಅಸಭ್ಯ ಮತ್ತು ಅವೈಜ್ಞಾನಿಕ ಅಭಿಪ್ರಾಯಗಳನ್ನು ಗ್ರಾಹಕರು ಮೊದಲು ತೊರೆಯಬೇಕು. ತಮ್ಮ ಪ್ರಜ್ಞಾಪೂರ್ವಕ ಸಹಕಾರ ಹಾಗೂ ಪ್ರೋತ್ಸಾಹವಿರದಿದ್ದರೆ ಹೊಟೇಲ್ ಉದ್ಯಮ ವರ್ಧಿಸದು ಎಂದು ಇವರು ಅರಿತಿರುವುದು ಅಗತ್ಯ. ಹೊಟೇಲಿಗ – ಗ್ರಾಹಕ ಸಹಕಾರವೇ ಹೊಟೇಲ್ ಉದ್ಯಮದ ಯಶಸ್ಸಿನ ರಹಸ್ಯ. ಆದ್ದರಿಂದ ಸರಕಾರದಲ್ಲಿ ಹೇಗೊ ಹೊಟೇಲಿನಲ್ಲೂ ಹಾಗೆ ಜನರ ಯೋಗ್ಯತಾನುಸಾರವಾದ ಹೊಟೇಲ್ ಅವರಿಗೆ ದೊರೆಯುತ್ತದೆ. ಈ ಉದ್ಯಮದಲ್ಲಿ ಆಸಕ್ತರಾದ ಸರ್ವರೂ ಸದಾಕಾಲ ನೆನಪಿನಲ್ಲಿಡಬೇಕಾದ ಒಂದು ಸೂಕ್ತಿ ಇದೆ:

ಅನ್ನದೇವರಿಗಿಂತ ಇನ್ನು ದೇವರು ಇಲ್ಲ
ಅನ್ನಕ್ಕೆ ಮೇಲು ಹಿರಿದಿಲ್ಲ ಲೋಕಕ್ಕೆ
ಅನ್ನವೇ ಪ್ರಾಣ ಸರ್ವಜ್ಞ

❀



"ನಲ್ಲಿಯಲ್ಲಿ ನೀರಿಲ್ಲ, ವಿದ್ಯುದ್ದೀಪವಂತೂ ಬೆಳಗುವುದೇ ಇಲ್ಲ. ಫೋನುಗಳು ನಿರ್ಜೀವ. ಛೇ ನಗರ ಪ್ರದೇಶಗಳನ್ನೂ ಇನ್ನು ಗ್ರಾಮಸುಧಾರಣೆಯ ಯೋಜನೆಗಳಡಿಯಲ್ಲಿ ತರಬೇಕು, ಅಷ್ಟೆ" – ಆಕೆ ಈಕೆಗೆ ಹೇಳುತ್ತಿದ್ದಳು.

'ವೈರಸ', ಶಿರಾಲಿ

ಹೌದು, ಜೀವನದ
ಮೂಸೆಯಿಂದಲೆ
ಚುಟುಕುಗಳು
ಹೊರಬರಬೇಕು

# 'ವಿಡಂಬಾರಿ'

ಚುಟುಕು ಸಾಹಿತ್ಯದಲ್ಲಿ ಉತ್ತರ ಕನ್ನಡಕ್ಕೆ ಒಂದು ಪ್ರಮುಖ ಸ್ಥಾನವಿದೆ. ಇದು ಹುಟ್ಟಿದ್ದು ಇದೇ ಜಿಲ್ಲೆಯಲ್ಲಿ ಎನ್ನಬಹುದು. ದಿವಂಗತ ಡಾ. ದಿನಕರ ದೇಸಾಯಿಯವರೇ ಚುಟುಕು ಸಾಹಿತ್ಯದ ಬ್ರಹ್ಮರು. ಅವರ ನಂತರ ಅಷ್ಟೇ ಯೋಗ್ಯತೆಯಿಂದ ಕೆಲಸ ನಿರ್ವಹಿಸುತ್ತಿರುವ 'ವಿಡಂಬಾರಿ' ಇಡಗುಂಜಿಯವರು ವಿದ್ವತ್ ಪೂರ್ಣ, ಹರಿತವಾದ ಚುಟುಕುಗಳನ್ನು ಬರೆಯುವುದರಲ್ಲಿ ಧಿಟ್ಟರಾದದ್ದು ಆಶ್ಚರ್ಯವೆ.

ಇವರ ಬಾಲ್ಯಜೀವನ ಒಂದು ಮಹಾ ಭಾರತವೇ. ದೇವರ ಹೆಸರಿನಲ್ಲಿ ನಿಷ್ಪಾಪಿ ಹೆಣ್ಣಿಗೆ ಗೆಜ್ಜೆ ಕಟ್ಟಿ ಸೂಳೆಯನ್ನಾಗಿ ಮಾಡುವುದು ಕೆಲ ದೇವಸ್ಥಾನಗಳ ಬಹಳ ಹಿಂದಿನಿಂದ ನಡೆದು ಬಂದ ಪದ್ಧತಿ. ವಿಡಂಬಾರಿಯವರ ತಾಯಿ ಇಂತಹ ಹೇಯ ಪದ್ಧತಿಗೆ ಬಲಿಯಾದವರಲ್ಲಿ ಒಬ್ಬಳು. ಅವಳ ಮೂರನೆಯ ಮಗನಾಗಿ ೧೯೨೮ರಲ್ಲಿ ಜನಿಸಿದ ವಿಡಂಬಾರಿಯವರಿಗೆ ತಾಯಿಯೇ ತಂದೆ ಕೂಡ ಹೌದು. ತಾಯಿಯ ಹೆಸರು ಗಣಪಿ ಎಂದಿದ್ದುದರಿಂದ ಇವರ ಪೂರ್ಣ ಹೆಸರು ವಿಷ್ಣು ಗಣಪಿ ಭಂಡಾರಿ ಎಂದಾಯಿತು.

ಗಣಪಿಯ ತಂಗಿಯೊಬ್ಬಳು ವಿಷ್ಣುವಿನ ಹುಟ್ಟಿದೂರಾದ ಇಡಗುಂಜಿಯಲ್ಲೇ ಇದ್ದಳು. ಇವಳ ಪತಿ ಅಗರ್ಭ ಶ್ರೀಮಂತ. ಆದರೆ ಅವರಿಗೆ ಮಕ್ಕಳಿರಲಿಲ್ಲ. ಆದ್ದರಿಂದ ಅವರು ವಿಷ್ಣು ಹದಿನೈದು ದಿನದ ಮಗುವಾಗಿದ್ದಾಗಲೇ ಅವನನ್ನು



ದತ್ತು ತೆಗೆದುಕೊಂಡರು. ಅಲ್ಲಿ ಅವನು ಹನ್ನೆರಡು ವಯಸ್ಸಿನವನಾಗುವವರೆಗೆ ಸುಖ-ದಲ್ಲೇ ಬೆಳೆದ. ಆದರೆ ಅವನ ಸಾಕು ತಾಯಿ ತೀರಿಕೊಂಡ ನಂತರ ಆರು ತಿಂಗಳಲ್ಲಿಯೇ ಸಾಕು ತಂದೆ ಇನ್ನೊಂದು ಮದುವೆಯಾದರು. ಈ ಮದುವೆ ವಿಷ್ಣುವಿನ ಸುಖಕ್ಕೆ ಚರಮ ಗೀತೆಯಾಯಿತು. ವಿಷ್ಣು ಅನಾಥನಾದ. ಮನೆಯಲ್ಲಿ ಮಗನಾಗಿ ಇದ್ದವ ಕೆಲಸದಾಳಿನಂತೆ ನೋಡಲ್ಪಟ್ಟ. ಮೂರನೇ ಈಯತ್ತೆಯಲ್ಲಿ ಉತ್ತೀರ್ಣನಾದ ನಂತರ ಅವನನ್ನು ಶಾಲೆಯಿಂದ ಬಿಡಿಸಿ ಮನೆಗೆಲಸಕ್ಕೆ ಹಚ್ಚಲಾಯಿತು.

ನಿತ್ಯವೂ ಕಾಡಿಗೆ ಹೋಗಿ ಕಟ್ಟಿಗೆಯನ್ನೋ, ಕೊಟ್ಟಿಗೆಗೆ ಹಾಕಲು ಸೊಪ್ಪನ್ನೊ ತರುವುದು, ದನಗಳಿಗೆ ಹಾಕಲು ಹುಲ್ಲು ಹೊರೆ ಹೊತ್ತು ತರುವುದು, ಅಡಿಕೆ ತೋಟಕ್ಕೆ ನೀರು ಬಿಡುವುದು, ಮನೆಯೊಳಗಿದ್ದ ೫೦-೬೦ ಚೀಲ ಅಡಿಕೆಯನ್ನು ನಿತ್ಯ ಬುಟ್ಟಿಯಲ್ಲಿ ಹೊತ್ತು ಬಿಸಿಲಿಗೆ ಒಣಗಿಸಿ ಸಂಜೆ ಪುನಃ ಮನೆಯೊಳಗೆ ತುಂಬುವುದು, ಸುಲಿದ ಗೋಟು ಅಡಿಕೆಯನ್ನು ಬಿಸಿಲಿನಲ್ಲಿ ಬುಟ್ಟಿಯಲ್ಲಿಟ್ಟು ಅದರ ಮೇಲೆ ನಿಂತು ತುಳಿದು ತುಳಿದು ಅದಕ್ಕೆ ಹೊಳಪು ತರುವುದು, ಮುಂತಾದ ಕೆಲಸಗಳನ್ನು ಈ ಸಣ್ಣ ಬಾಲಕನ ಹೆಗಲಿಗೆ ಹೊರಿಸಲಾಯಿತು.

ಇವರ ಸಾಕು ತಂದೆಗೆ ಹೊಸ ಮದುವೆಯ ನಂತರ ಮಕ್ಕಳೂ ಆದವು. ಇತ್ತ ಜನ್ಮಕೊಟ್ಟ ತಾಯಿಯು ತನ್ನ ಜೀವನದ ದಳ್ಳುರಿಗೆ ಬೆಂದು ಹುಚ್ಚಿಯಾಗಿ ಪರಿತಪಿಸುತ್ತಲೇ ಸತ್ತಳು. ಈ ಬಾಲಕ ಅಲೆಮಾರಿಯಂತೆ ಪರಿಚಯದವರ ಮನೆಯಲ್ಲಿ ಅನ್ನಾಶ್ರಯ ಬೇಡಿ ಜೀವನ ನೂಕಬೇಕಾಯಿತು. ಈ ಬೇಸರದ ದಿನಗಳಲ್ಲೇ, ಗೋಡೆಗೆ ತಲೆ ಹಚ್ಚಿ ಕುಳಿತು ಬಿಡುವಿನ ಸಮಯ ಕಳೆಯುವಾಗ ವಿಡಂಬಾರಿಯವರಿಗೆ ಸಾಹಿತ್ಯದ ಹುಚ್ಚು ಹಿಡಿದದ್ದು. ಆ ದಿನಗಳಲ್ಲಿ ಮಾವಿನಕೆರೆ ಗಜಾನನ ಯಾಜಿಯವರು ಅ. ನ. ಕೃ. ಹಾಗೂ ತ. ರಾ. ಸು. ಬರೆದ ಕಾದಂಬರಿಗಳನ್ನು ಓದಲು ತಂದು ಕೊಟ್ಟು ಇವರಿಗೆ ಸಾಹಿತ್ಯದಲ್ಲಿ ಆಸಕ್ತಿ ಮೂಡಿಸಿದರು. ಕೊಳ್ಳಳ್ಳಿಯ ನಾಗೇಶಭಟ್ಟರ ಮನೆಯಲ್ಲಿ ಗೋಡೆಗೆ ತಲೆ ಹಚ್ಚಿ ಓದಿದಾಗ ನೆತ್ತಿಯ ಎಣ್ಣೆಯಿಂದ ಗೋಡೆಗುಂಟಾದ ಕಲೆ ಇಂದಿಗೂ ಇದೆ. ಇವರ ನೆನಪು ಮಾಸದಿರಲೆಂದು ಉದ್ದೇಶಪೂರ್ವಕವಾಗಿ ಅವರು ಹಾಗೆಯೇ ಇಟ್ಟ ಕಲೆ, ಇಂದು ಕನ್ನಡದ ಪ್ರಖ್ಯಾತ ಚುಟುಕು ಕವಿಯಾದ ವಿಡಂಬಾರಿಯವರು ಹಿಂದೆ ಪಟ್ಟ ನೋವು, ಬೇಸರಗಳಿಗೆ ಸಾಕ್ಷಿಯಾಗಿ ನಿಂತಿದೆ.

೧೯೫೭ರಲ್ಲಿ ಇವರ ಹುಟ್ಟೂರಾದ ಮೇಲಿನ ಇಡಗುಂಜಿಯಲ್ಲಿ ಅಂಚೆ ಕಚೇರಿ ಪ್ರಾರಂಭವಾದಾಗ ಇವರು ಕೇವಲ ಇಪ್ಪತ್ತೈದು ರೂಪಾಯಿ ವೇತನದ ಕೆಲಸಕ್ಕೆ (ಇ. ಡಿ. ಡಿ. ಎ.) ಸೇರಿದರು. ಆಗ ಇವರಿಗೆ ಮನೆಯೇ ಇರಲಿಲ್ಲ. ನೆರೆಮನೆಯ ನಾಗೇಶ ಭಟ್ಟರ ಮನೆಯಲ್ಲಿಯೇ ವಾಸ. ಬೆಳಿಗ್ಗೆ ಚಹಾ ಕುಡಿದು, ಕಾಡಿಗೆ ಹೋಗಿ ಕಟ್ಟಿಗೆ ತಂದುಹಾಕಿ ನಂತರ ನೌಕರಿಗೆ ಹೋಗುತ್ತಿದ್ದರು. ಆಗಲೇ ಪುಸ್ತಕ ಓದುವ ಗೀಳು ಇನ್ನೂ ಹೆಚ್ಚಾಯಿತು.

ಆನಂತರ ೧೯೬೩ ರಲ್ಲಿ ಧಾರವಾಡದಲ್ಲಿ ನಡೆದ ಪ್ಯಾಕರ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ, ಚುಟುಕು ಬ್ರಹ್ಮ ದಿನಕರ ದೇಸಾಯಿಯವರ ಸೇವಾ ಕೇಂದ್ರವಾದ ಅಂಕೋಲಾದಲ್ಲಿ ಪ್ಯಾಕರ್ ಆಗಿ ಕೆಲಸಕ್ಕೆ ಸೇರಿದರು. ಅಲ್ಲಿದ್ದ ಸಮಯದಲ್ಲೇ ದೇಸಾಯಿಯವರ ಚುಟುಕುಗಳ ಪ್ರಭಾವಕ್ಕೆ ಒಳಗಾದದ್ದು. ಗ್ರಾಹಕರನ್ನು ದೋಚುವ ನೀಚ ವ್ಯಾಪಾರಿಗಳನ್ನು, ಮೂಢ ನಂಬಿಕೆಯನ್ನು, ಸಮಾಜದ ನೀಚತನವನ್ನು, ಸರಕಾರದ ಅಸಹಕಾರವನ್ನು, ರಾಜಕಾರಣಿಗಳ ಡೊಂಬರಾಟವನ್ನು ತೀಕ್ಷ್ಣವಾದ ಆದರೆ ಓದುಗರಿಗೆ ಸಂತೋಷ ನೀಡುವ ಜೊತೆಗೆ ಎಚ್ಚರಿಸುವ ದೇಸಾಯಿಯವರ ಚುಟುಕುಗಳನ್ನು ಓದಿದಂತೆ, ತಾನೂ ಯಾಕೆ ಬರೆಯಬಾರದು ಎಂಬ ಬಯಕೆ ವಿಡಂಬಾರಿಯವರಲ್ಲಿ ಮೂಡಿತು.

೧೯೭೦ರಲ್ಲಿ ಇವರು ಮೊದಲು ಬರೆದ

ಚುಟುಕು ಪಿ. ಎಲ್. ಬಂಕಾಪುರರ ಸಂಪಾದಕತ್ವದಲ್ಲಿ ಹುಬ್ಬಳ್ಳಿಯಿಂದ ಹೊರಡುತ್ತಿದ್ದ 'ವಿಶಾಲ ಕರ್ನಾಟಕ' ದಿನ ಪತ್ರಿಕೆಯಲ್ಲಿ ಪ್ರಕಟವಾಯಿತು. ಅಂದಿನಿಂದ ಮೂರು ವರ್ಷಗಳ ಕಾಲ ನಿತ್ಯವೂ ಇವರ ಚುಟುಕುಗಳನ್ನು ಪ್ರಕಟಿಸಿ ಇವರನ್ನು ಬೆಳಕಿಗೆ ತಂದವರೇ ಪಿ. ಎಲ್.-ಬಂಕಾಪುರರು. ನಂತರ ನಾಡಿನ ಅನೇಕ ಖ್ಯಾತ ಪತ್ರಿಕೆಗಳಲ್ಲಿ ಇವರ ಚುಟುಕುಗಳು ಪ್ರಕಟವಾಗ ತೊಡಗಿದವು. ಆಗ ಅನೇಕ ಹಿರಿಯ ಸಾಹಿತಿಗಳು ಪತ್ರ ಬರೆದು ಪ್ರೋತ್ಸಾಹ ನೀಡುತ್ತಿದ್ದರು. ಒಮ್ಮೆ ಇವರು ತಮ್ಮ ಕೆಲವು ಚುಟುಕುಗಳನ್ನು ದಿನಕರ ದೇಸಾಯಿಯವರಿಗೆ ತೋರಿಸಿದಾಗ ಅವರು ಅವುಗಳನ್ನು ಬಹಳ ಮೆಚ್ಚಿಕೊಂಡರು. ಅಲ್ಲದೇ ಇವರ 'ಪೊರಕೆ' ಎಂಬ ಚುಟುಕು ಕೇಳುತ್ತಿದ್ದಂತೆ ಕುರ್ಚಿಯಿಂದ ಎದ್ದು ಬಂದು, "ಹೀಗೆಯೇ ಬರೆಯುತ್ತಿರಿ. ನಿಮ್ಮಲ್ಲಿ ಬರೆಯುವ ಯೋಗ್ಯತೆ ಇದೆ," ಎಂದು ಬೆನ್ನು ತಟ್ಟಿದರು. ಅವರು ತುಂಬು ಹೃದಯದಿಂದ ಹರಸಿದ್ದರಿಂದಲೇ ಇರಬಹುದು, ಅವರ ಅಗಲುವಿಕೆಯಿಂದ ಬಡವಾದ ಚುಟುಕು ಸಾಹಿತ್ಯಕ್ಕೆ ವಿಡಂಬಾರಿಯವರು ಚೇತನ ನೀಡಿದ್ದಾರೆ.

'ಅನೀತಿ ನರಕದಲಿ ಬಿದ್ದು ಒದ್ದಾಡಿ
ಹೇಸಿಗೆಯು ಅನಿಸುತಿದೆ ಜೀವನವು ನೋಡಿ.
ಹೋಗಬೇಕೆಂದರೂ ಇಲ್ಲಿಂದ ದೂರ
ಹಿಂದಕ್ಕೆ ಜಗ್ಗುತಿದೆ ಯಾವುದೋ ದಾರ'

ಎಂಬ ಅವರ ಚುಟುಕು ಅವರು ಸ್ವತಃ ಅನುಭವಿಸುತ್ತಿರುವ ಬಡತನದ ಜೀವನವನ್ನು ಬಿಂಬಿಸುತ್ತದೆ.

'ಪವಿತ್ರವಾದ ಈ ಸಾಹಿತ್ಯ ಲೋಕ
ನೋಡಿರೈ ಇಂದೇಕೊ ಆಗುತಿದೆ ನರಕ.
ಇಲ್ಲಿಯೂ ಇಲ್ಲಯ್ಯ ಸೀಯುತ್ತು ಇಂದು
ರಾಜಕಾರಣದಂತೆ ಇದುಕೂಡ ಒಂದು'

ಎಂಬುದು ಅವರ ಬರವಣಿಗೆಯ ಹರಿತಕ್ಕೆ ಸಾಕ್ಷಿಯಾಗಿದೆ.

ಈ ವರೆಗೂ ಇವರ ಎರಡು ಚುಟುಕು ಸಂಕಲನಗಳು ಪ್ರಕಟವಾಗಿವೆ. ಮೊದಲನೆಯ ಚುಟುಕು ಸಂಕಲನ "ಒಗ್ಗರಣೆ" ಬೆಳಕು ಕಂಡದ್ದು ಐದು ವರ್ಷಗಳ ಹಿಂದೆ. ಈ ಸಂಕಲನ ಬೆಳಕು ಕಾಣಲು ಕಾರಣೀಭೂತರಾದವರೆಂದರೆ ಕನ್ನಡದ ಇನ್ನೊಬ್ಬ ಸುಪ್ರಸಿದ್ಧ ಸಾಹಿತಿ ಯಶವಂತ ಚಿತ್ತಾಲರು. ಈ ಪುಸ್ತಕಕ್ಕೆ ದಿನಕರ ದೇಸಾಯಿಯವರೂ ಸಾಕಷ್ಟು ಸಹಾಯ, ಪ್ರೋತ್ಸಾಹ ಒದಗಿಸಿದ್ದರು. ಈಗ ವಿಡಂಬಾರಿಯವರು ಕೆಲಸ ಮಾಡುತ್ತಿರುವ ಶಿರಾಲಿ ಊರಿನ ಖ್ಯಾತ ಉದ್ಯಮಿಗಳಾದ ಕೆ. ವಿ. ಪ್ರಭು ಮತ್ತು ಚಿತ್ತಾಲರ ಆರ್ಥಿಕ ಸಹಾಯದಿಂದ ಇವರ ಎರಡನೇ ಚುಟುಕು ಸಂಕಲನ 'ಕವಳ' ಪ್ರಕಟಗೊಂಡಿದೆ.

ನೋವನ್ನೇ ಉಣ್ಣುತ್ತ ಬಡತನದಲ್ಲಿಯೇ ಜೀವಿಸುತ್ತಿರುವ ಈ ಕವಿ ಬರೆದ ಚುಟುಕುಗಳೆಲ್ಲವೂ ಬಹಳ ಅರ್ಥಪೂರ್ಣವಾಗಿವೆ. ಸಮಾಜ ಪರಿಸರದ ನಡುವಿನ ತಪ್ಪು ಒಪ್ಪುಗಳು, ರಾಜಕೀಯ, ಶೈಕ್ಷಣಿಕ, ಸಾಹಿತ್ಯ ಲೋಕದ ಅಂಕುಡೊಂಕುಗಳು, ರಾಜಕಾರಣಿಗಳು, ದೇಶದ್ರೋಹಿಗಳು ಎಸಗುತ್ತಿರುವ ಭ್ರಷ್ಟಾಚಾರದ ಬಗ್ಗೆ ಇವರು ಬರೆದ ಚುಟುಕುಗಳು ದಾರಿತಪ್ಪಿದ ಎಂಥವರಿಗೂ ಹರಿತವಾದ ಚೂರಿಯಿಂದ ಕೊಯ್ದಂತೆ. ಉದಾಹರಣೆಗೆ :—

'ಬದುಕಿನುದ್ದಕು ನಾನು ಉಣ್ಣುತಿಹೆ ನೋವು
ಆಗುವದು ನೋಡಯ್ಯ ಚುಟುಕೆಂಬ ಹೂವು
ಏರಿದಂತೆಲ್ಲ ಜೀವನದಿ ಕಾವು
ಆಗುವೆನು ಕುಹಕರಿಗೆ ನಾ ವಿಷದ ಹಾವು.'

ಹೆಚ್ಚಿನ ಚುಟುಕುಗಳು ತೀಕ್ಷ್ಣವಾಗಿದ್ದರೂ ಹಾಸ್ಯವನ್ನು ಹೊರಸೂಸುವ ಚುಟುಕುಗಳನ್ನೂ ಇವರು ಬರೆದಿದ್ದಾರೆ.

'ಚೆಂದುಳ್ಳ ಚೆಂದುವಿಗೆ ಮರುಳಾದ ಮಾದ
ತಾಳಿಯನ್ನು ಕಟ್ಟಿ ತಾ ಘಟ್ಟಕ್ಕೆ ಹೋದ
ಪರೋಪಕಾರಕ್ಕೆ ಹೆಸರಾದ ಭಟ್ಟ
ಇವನ ಕುಟುಂಬಕ್ಕೆ ಸಹಕಾರ ಕೊಟ್ಟ.'

ಹಾಸ್ಯ ತರಿಸುವ ಈ ಚುಟುಕಿನಲ್ಲಿ ಅರ್ಥ ಗರ್ಭಿತವಾಗಿ ಉಪಯೋಗಿಸಿದ ಪದಗಳನ್ನು ನೋಡಿದರೆ ಇವರ ಪದಸಂಗ್ರಹ ಎಷ್ಟು ವಿಶಾಲ ವಾದುದೆಂಬುದರ ಅರಿವಾಗುತ್ತದೆ.

'ಗಂಡೊಂದು ಹುಟ್ಟಿದರೆ ಕುಣಿಯುತ್ತ ನೋಡಿ
ಸಿಹಿಯನ್ನು ಹಂಚುವರು ಹಬ್ಬವನು ಮಾಡಿ
ಹೆಣ್ಣೊಂದು ಹುಟ್ಟಿದರೆ ಹಡೆದವಳು ಕೂಡ
ಕಡುಪಾಪಿ ಅನ್ನುವರು ಅಲ್ಪ ಜನ ಮೂಢ

ಎಂಬುದು ನಮ್ಮ ಇಂದಿನ ಸಮಾಜದಲ್ಲಿನ ಮುಖ್ಯ ನ್ಯೂನತೆಯೊದನ್ನು ಎತ್ತಿತೋರಿಸುತ್ತದೆ.

ತನ್ನ ತಾಯಿ ಹೆಣ್ಣಾಗಿ ಪಟ್ಟ ಕಷ್ಟಗಳ ನೆನಪಿನಿಂದಲೋ ಏನೋ ಇವರ ಲೇಖನಿಯಿಂದ ಸ್ತ್ರೀಯರ ಉದ್ಧಾರದ ಕುರಿತು, ಅವರಿಗೆ ಸಮಾನ ಹಕ್ಕು ತೆಗೆಸಿಕೊಡುವದರತ್ತ ಪ್ರಯತ್ನ ಮಾಡುವ ಚುಟುಕುಗಳೂ ಆಗಾಗ ಹೊರಬೀಳುತ್ತವೆ. ಆದರೂ ಹೆಂಗಸರಲ್ಲಿಯೂ ಕೆಲವರು ದಾರಿತಪ್ಪುವ ಕುರಿತು:

"ಹೆಣ್ಣಿಗೂ ಸಮಾನ ಹಕ್ಕುಂಟು-ನೋಡಿ.
ಹೇಳುವಳು ಹೀಗಾಗಿ ಅಚೀಚೆ ಚಾಡಿ.
ಕ್ಲಬ್ಬಿನಲಿ ಕುಡಿತಿಂದು ಇಸ್ಪೀಟು ಆಡಿ
ಸೇದಿದರೆ ತಪ್ಪೇನು ಸಿಗರೇಟು ಬೀಡಿ?

ಎಂದು ಎಚ್ಚರಿಸಿ ಬರೆದರೂ, 'ಗಂಡಸರೇ ಹಾಗೆ ಮಾಡುವಾಗ ಹೆಂಗಸರು ಮಾಡುವದರಲ್ಲಿ ತಪ್ಪೇನು?' ಎನ್ನುತ್ತ ಹೆಂಗಸರನ್ನು ಸಮರ್ಥಿಸಿಕೊಳ್ಳುತ್ತಾರೆ.

ಕವಿ ಅರವಿಂದ ನಾಡಕರ್ಣಿಯವರೆಂದಂತೆ ಇವರಲ್ಲಿ ನೈಜಭಾವನೆಯ ಬಲ, ಜೊತೆಗೆ ಕಾವ್ಯ ಶಕ್ತಿ ಇದೆ. ಇವರಿಂದ ಇನ್ನೂ ಅದೆಷ್ಟೋ ಚುಟುಕು ಕೃಷಿಯಾಗಬೇಕಿದೆ.

ಸಾಹುಕಾರನ ಹಿಂದೆ ಸಾಹಿತ್ಯ ಬರದು
ಕಹಿ ಬೇವು ತಿಂದವನು ಮುಗಿಸುವನು ಬರೆದು
ಸವಿಜೇನು ಸವಿದವನ ಸಾಹಿತ್ಯ ಕಿರಿದು
ಕಹಿಯುಂಡ ಕವಿ ಬರೆದ ಕಾವ್ಯವೇ ಹಿರಿದು

ಎಂದ ಈ ಕವಿಯ ಹಿರಿದಾದ ಸಾಹಿತ್ಯದಿಂದ ಕನ್ನಡ ಸಾಹಿತ್ಯ ಶ್ರೀಮಂತವಾಗುತ್ತಿದೆ.

'ಇಂದು ನಾ ಕಡುಬಡವ ನಾಳೆ ಹೇಗೆಂದು
ನಿರ್ಧಾರ ಮಾಡುವದು ಶಕ್ಯವೇ ಇಂದು?
ಹೀಗೆಯೇ ಮುದುಮುದುಡಿ ಸತ್ತರೂ ಸತ್ತೆ
ಅರಳಿದರು ಅರಳೀತು ಈ ಬಾಳು ಮತ್ತೆ'

ಎಂದೆಲ್ಲ ಏನೇನೋ ಕನಸು ಕಾಣುವ ಈ ಕವಿಯ ಆ ಕೊನೆಯ ಕನಸನ್ನೆ ನನಸಾಗಿಸಿ ಅವರ ಬಾಳು ಅರಳುವತ್ತ ಸಾಹಿತ್ಯಾಭಿಮಾನಿಗಳು ಲಕ್ಷ್ಯ ಹರಿಸುವುದು ಅಗತ್ಯ.

ಈ ವರ್ಷದ ದಸರಾ ಪ್ರಯುಕ್ತ ಮೈಸೂರಿನ ಕವಿಗೋಷ್ಠಿಗೆ ಆಹ್ವಾನಿತರಾದ ವಿಡಂಬಾರಿ ಇಡಗುಂಜಿಯವರು ಸಾಹಿತ್ಯಲೋಕದಲ್ಲಿ ಸದಾ ಮಿನುಗುತ್ತಿರುವ ಚುಟುಕು ತಾರೆಯಾಗಿದ್ದಾರೆ.

ಗಂಟಲು ನೋವಿಗಾಗಿ ತಮ್ಮ ಬಳಿ ಬಂದ ಆತನನ್ನು ಪರೀಕ್ಷಿಸಿದ ಡಾಕ್ಟರರು, "ನೀವು ಧೂಮಪಾನ ಮಾಡುತ್ತೀರಾ?" ಎಂದು ಕೇಳಿದರು. "ಇಲ್ಲ" ಎಂದ ಆತ. "ಛೇ. ಧೂಮ ಪಾನವನ್ನು ಬಿಡುವುದೊಂದೆ ಇದಕ್ಕೆ ಪರಿಹಾರ. ಏನು ಮಾಡಲಿ?" ಡಾಕ್ಟರರು ಪೇಚಾಡಿದರು.

—ಲಕ್ಷ್ಮಣ

# ನಿಮ್ಮ ಶಬ್ದ ಭಂಡಾರ ಬೆಳೆಯಲಿ

## ಶಬ್ದ ಭಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆ ಮೇಲೆ ಅದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

೧. ರೇಜಿಗೆ
(ಅ) ದಿನಗೂಲಿ (ಆ) ಹೇಸಿಕೆ (ಇ) ರಷ್ಟಾಡಿಸುವುದು (ಈ) ತೇಲಿಹೋಗುವುದು

೨. ಸೇಚನ
(ಅ) ಹೊಟ್ಟೆ ಕೆಡುವುದು (ಆ) ಸತ್ಯವಚನ (ಇ) ಸಿಂಪಡಿಸುವುದು (ಈ) ಚಿಂತೆ

೩. ಸಮಕ್ಷಮ
(ಅ) ಎದುರಿಗೆ (ಆ) ಮಾಫಿ (ಇ) ಎರಡು ಕಣ್ಣು (ಈ) ನೆಮ್ಮದಿ

೪. ಸೊಪ್ಪು ಹಾಕು
(ಅ) ಸೋಲೊಪ್ಪು (ಆ) ಭೂತ ಬಿಡಿಸುವುದು (ಇ) ಅಲಂಕರಿಸು (ಈ) ಒಪ್ಪಿಸು

೫. ಘಟಸರ್ಪ
(ಅ) ನಿರುಪದ್ರವಿ (ಆ) ನಾಗನಕಲ್ಲು (ಇ) ಮೋಸಗಾರ (ಈ) ಭಯಂಕರ ನಾಗರ ಹಾವು

೬. ಕೈವರ್ತ
(ಅ) ಸಹಾಯಕ (ಆ) ದರೋಡೆಕೋರ (ಇ) ಬೆಸ್ತ (ಈ) ಎಣಿಸದ ಲಾಭ

೭. ಕೊಪ್ಪೆ
(ಅ) ಕೊಳೆಗೇರಿ (ಆ) ಕಂಬಳಿ ಕುಂಚಿಕೆ (ಇ) ಅಡವಿ ಬೆಳೆದ ಗುಡ್ಡ (ಈ) ಅಹಂಕಾರ

೮. ಬಚಾವು
(ಅ) ಆಯಾಸ (ಆ) ಘಟಿಂಗತನ (ಇ) ಪಾರಾಗುವುದು (ಈ) ಬಿಡಿಸುವಿಕೆ

೯. ಪೊಗದಿ
(ಅ) ಪ್ರವೇಶ (ಆ) ಪುಕ್ಕಟೆ ಸಿಕ್ಕಿದ್ದು (ಇ) ಖಚಿತ (ಈ) ಕಪ್ಪ

೧೦. ಪೈಮಾಯಿಷಿ
(ಅ) ಭೂಮಿ ಅಳೆಯುವುದು (ಆ) ಪೂರ್ಣ ವಯಸ್ಸು (ಇ) ಕಾಲು ಕಟ್ಟುವುದು (ಈ) ಕವಿತಾ ರಚನೆ

೧೧ ಜಗದಿಂಡೆ
(ಅ) ಬಾಳೆಯ ಕಾಂಡ (ಆ) ಭಾರಿ ಜೋರಿನ ಹೆಣ್ಣು (ಇ) ಬಿದಿರಿನ ಗಳ (ಈ) ಒಂದು ತರದ ಇಡ್ಲಿ

೧೨. ಕವರ್ತೆ
(ಅ) ಮುಚ್ಚುವುದು (ಆ) ಹೊಂಡ (ಇ) ಕಸಿದುಕೊಳ್ಳುವುದು (ಈ) ಹುಳಿತೇಗು



ಗಳಿಗೆ ಹೋಲಿಸಿದರೆ 'ಬೋಳು ತಲೆ' ಸಮಸ್ಯೆ ಗಂಭೀರವಲ್ಲವೆನಿಸಿದರೂ ಕೂದಲುದುರಿ ತಲೆ ಬೋಳಾದಾಗ ಉಂಟಾಗುವ ಚಿಂತೆ, ಕೊರಗು, ಖಿನ್ನತೆ, ಆ ವ್ಯಕ್ತಿ ಪಡುವ ಮಾನಸಿಕ ಯಾತನೆ ಮುಂದೆ ನರದೌರ್ಬಲ್ಯಕ್ಕೆಡೆಮಾಡಿಕೊಡುವ ಸಾಧ್ಯತೆ ಇದೆ ಎಂದು ವಿಜ್ಞಾನಿಗಳು, ವೈದ್ಯರು ಹಾಗೂ ಕಾಂತಿವರ್ಧಕಗಳ ತಜ್ಞರು ಹೇಳುತ್ತಾರೆ.

ಕೂದಲುದುರುವಿಕೆಗೆ ಅನೇಕ ಕಾರಣಗಳುಂಟು. ತಲೆಗೂದಲು ಬಹು ಸೂಕ್ಷ್ಮಗ್ರಾಹಿ. ದೇಹದ ಆಂತರಿಕ ಹಾಗೂ ಬಾಹ್ಯ ಬದಲಾವಣೆಗೆ ತೀವ್ರವಾಗಿಯೂ ತೀಕ್ಷ್ಣವಾಗಿಯೂ ಸ್ಪಂದಿಸುತ್ತವೆ. ದೇಹದ ಕಾರ್ಯಾಚರಣೆಯ ಯಾವುದೇ ವ್ಯವಸ್ಥೆಯಲ್ಲಿ ತುಸುವೆ ವೈಪರೀತ್ಯ ಉಂಟಾದಲ್ಲಿ ಅದರ ಪರಿಣಾಮ ಮೊದಲು ಕೂದಲು ಬೆಳವಣಿಗೆಯ ಮೇಲೆಯೇ ಆಗುತ್ತದೆ. ವ್ಯಕ್ತಿ ಚಿಂತಾಕ್ರಾಂತನಾಗಿದ್ದಲ್ಲಿ ಇಲ್ಲವೆ ಮನಸ್ಸಿಗೆ ಆಘಾತವಾದಲ್ಲಿ ತಲೆಗೂದಲುಗಳು ಹೊಳಪು ಕಳೆದುಕೊಳ್ಳುತ್ತವೆ. ಮಾನಸಿಕ ಆಘಾತದಿಂದ ಗಾಸಿಗೊಂಡ ವ್ಯಕ್ತಿಯ ಕೂದಲು ಬೆಳ್ಳಗಾಗುವದರಲ್ಲ ಪೂರ್ತಿ ಬೆಳ್ಳಗಾದ ಇಲ್ಲವೆ ತಲೆ ಬೋಳಾದ ಸಂದರ್ಭಗಳೂ ಇವೆ. ದೇಹದಲ್ಲಿ ಕಬ್ಬಿಣ, ತಾಮ್ರ, ಗಂಧಕ, ಕ್ಯಾಲ್ಸಿಯಂ ಹಾಗೂ ವಿಟಾಮಿನ್ನುಗಳ ಪ್ರಮಾಣ ಕ್ಷೀಣಿಸುವದರಿಂದಲೂ ಕೂದಲುದುರುತ್ತವೆ. ಕೂದಲು ಉದುರುವಿಕೆಯು ಸಾಮಾನ್ಯವಾಗಿ ಸತತ ಬಾಧಿಸುವ ನೆಗಡಿ, ಸೋಂಕುಪೂರಿತ ರೋಗಗಳು ಪಚನಾಂಗಗಳಿಗೆ ಸಂಬಂಧಿಸಿದ ಬಾಧೆಗಳು ಮುಂತಾದವುಗಳನ್ನು ಅವಲಂಬಿಸಿರುತ್ತದೆ ಎಂದು ಕಂಡು ಬಂದಿದೆ. ತಲೆಯಲ್ಲಿನ ಹೊಟ್ಟು, ಅಪೋಷಣೆಗಳೂ ಕೂದಲುದುರುವಿಕೆಗೆ ಕಾರಣವಾಗುತ್ತವೆ. ಇಂಥದೇ ಕಾರಣದಿಂದ ತಲೆ ಬೋಳಾಗುತ್ತದೆ, ಕೂದಲುದುರುತ್ತವೆ ಎಂದು ಖಚಿತವಾಗಿ ಹೇಳಲೂ ಬರುವಂತಿಲ್ಲ. ಸಂಶೋಧಕರು ಹಾಗೂ ಕಾಂತಿವರ್ಧಕಗಳ ತಜ್ಞರು ಇದನ್ನು "ನರಮಂಡಲ-ನಿರ್ನಾಳ ಗ್ರಂಥಿಗಳಲ್ಲಿಯ ವೈಪರೀತ್ಯ" ಎಂದು ಅಭಿಪ್ರಾಯಪಟ್ಟಿದ್ದಾರೆ. ದೀರ್ಘ ಕಾಲದ ಮಾನಸಿಕ-ಯಾತನೆ, ಚಿಂತೆ, ನಿದ್ದೆಗೆಡುವಿಕೆ, ನರಮಂಡಲದ ಮೇಲಿನ ಒತ್ತಡ ಹಾಗೂ ದೇಹ ಜೀವ ದ್ರವ್ಯ ಕ್ರಿಯೆಯಲ್ಲಿಯ ಬದಲಾವಣೆಗಳು ಆಂತರಿಕ ವೈಪರೀತ್ಯಗಳಿಗೆ ಪೂರಕ. ಈ ಎಲ್ಲ ತೊಂದರೆಗಳು ಸಾಮಾನ್ಯವಾಗಿ ಪ್ರೌಢಾವಸ್ಥೆಯ ಆದಿಯಲ್ಲಿ ಹಾಗೂ ಗರ್ಭಿಣಿಯರಲ್ಲಿ ಕಂಡುಬರುತ್ತವೆ. ಈ ಅವಸ್ಥೆಯಲ್ಲಿ ದೇಹದ ಆಂತರಿಕ ನಿರ್ನಾಳ ಗ್ರಂಥಿಗಳಿಂದ ವಿಶಿಷ್ಟವಾದ ಹಾರ್ಮೋನುಗಳು ಸ್ರವಿಸಲಾರಂಭಿಸುತ್ತವೆ. ಕೆಲವು ಗ್ರಂಥಿಗಳು- ವಿಶೇಷವಾಗಿ ಥೈರಾಯಿಡ್ ಹಾಗೂ ಲೈಂಗಿಕ ವ್ಯವಸ್ಥೆಯನ್ನು ಪ್ರಚೋದಿಸುವ ನಿರ್ನಾಳ ಗ್ರಂಥಿಗಳು- ಹೆಚ್ಚು ವೃದ್ಧಿ ಹೊಂದಿ, ಕ್ರಿಯಾಶೀಲವಾಗಿ ಸ್ರವಿಸುವ ಹಾರ್ಮೋನುಗಳು ದೇಹದ ಒಟ್ಟಾರೆ ವ್ಯವಸ್ಥೆಯನ್ನು ಬದಲಾವಣೆಗೆಡೆಮಾಡುತ್ತವೆ. ಈ ಬದಲಾವಣೆಯಿಂದ ಕೊಬ್ಬು, ಸಸಾರಜನಕ, ಖನಿಜ ವಸ್ತುಗಳ ಜೀವದ್ರವ್ಯಕ್ರಿಯೆ ಬದಲಾಗುವದು. ಇದಲ್ಲದೆ ಅತಿಮುಖ್ಯ ಬದಲಾವಣೆ ಎಂದರೆ ದೇಹದಲ್ಲಿಯ ಆ್ಯಂಡ್ರೋಜನ್ ಹಾಗೂ ಈಸ್ಟ್ರೋಜನ್ ಹಾರ್ಮೋನುಗಳ ತುಲನಾತ್ಮಕ ಪ್ರಮಾಣ ಏರುಪೇರಾಗುತ್ತದೆ. ಈ ಬದಲಾವಣೆ ಕೂದಲುದುರುವಿಕೆಯ ಮುಖ್ಯ ಕಾರಣಗಳಲ್ಲೊಂದು. ಪ್ರತಿ ವ್ಯಕ್ತಿಯಲ್ಲಿ— ಗಂಡಿರಲಿ, ಹೆಣ್ಣಿರಲಿ— ಆ್ಯಂಡ್ರೋಜನ್ ಎಂಬ ಪುರುಷ ಹಾರ್ಮೋನು ಹಾಗೂ ಈಸ್ಟ್ರೋಜನ್ ಎಂಬ ಸ್ತ್ರೀ ಹಾರ್ಮೋನುಗಳೆರಡೂ ಒಂದಕ್ಕೊಂದು ಪೂರಕವಾಗಿ ವಿವಿಧ ಪ್ರಮಾಣದಲ್ಲಿರುತ್ತವೆ. ಈ ಹಾರ್ಮೋನುಗಳ ಪ್ರಮಾಣ— ಯಾವ ಹಾರ್ಮೋನು ಪ್ರಮಾಣಾತ್ಮಕವಾಗಿ ಹೆಚ್ಚಿಗಿರುತ್ತದೋ ಆಯಾ ಹಾರ್ಮೋನಿಗೆ ಅನುಗುಣವಾಗಿ ಆ ವ್ಯಕ್ತಿಯ ಪುರುಷತ್ವ ಇಲ್ಲವೆ ಸ್ತ್ರೀತ್ವವನ್ನು ನಿರ್ಧರಿಸುತ್ತದೆ. ಆ್ಯಂಡ್ರೋಜನ್ನಿನ ಪ್ರಭಾವದಿಂದ ಪುರುಷನಲ್ಲಿ ಪುರುಷತ್ವ, ಗಡ್ಡ, ಮೀಸೆ, ಗಡಸುತನ ಬಂದರೆ, ಈಸ್ಟ್ರೋಜನ್ನಿನಿಂದ ಹೆಂಗಸಿನಲ್ಲಿ

ಸ್ತ್ರೀತ್ವದ ಕಾರಣವಾದ ಮೃದುತ್ವ, ನೀಳ ಕಂಠ ಹಾಗೂ ಕೋಮಲತೆಗಳು ಮೈಗೂಡುತ್ತವೆ. ಈ ಎರಡೂ ಹಾರ್ಮೋನುಗಳ ಪ್ರಮಾಣ ಏರು-ಪೇರಾದಲ್ಲಿ ಲಿಂಗ ಪರಿವರ್ತನೆಯಾಗುತ್ತದೆ. ಪ್ರತಿ ಗಂಡಸಿನಲ್ಲಿ ಸ್ತ್ರೀ ಹಾರ್ಮೋನಾದ ಈಸ್ಟ್ರೋಜನ್ನಿನ ಅಂಶವಿದ್ದರೆ, ಪ್ರತಿ ಹೆಂಗಸಿನಲ್ಲಿ ಆ್ಯಂಡ್ರೋಜನ್ನಿನ ಅಂಶವಿರಲೇಬೇಕು. ಅಂದರೆ ಈ ಎರಡೂ ಹಾರ್ಮೋನುಗಳು ಪ್ರತಿಯೊಬ್ಬರಲ್ಲೂ ಇರುತ್ತಿದ್ದು, ಇವುಗಳ ಪ್ರಮಾಣಾತ್ಮಕ ಅಂಶದಲ್ಲಿ ಯಾವ ಹಾರ್ಮೋನು ಹೆಚ್ಚಿಗಿರುವುದೋ ಅದು ಆ ವ್ಯಕ್ತಿಯ ಲಿಂಗರೀತ್ಯ ದೇಹ ವ್ಯವಸ್ಥೆಯನ್ನು ನಿರ್ಧರಿಸುವದು. ಗಂಡಸು ತನ್ನ ಮೀಸೆ ತಿರುವಿ ಪೌರುಷವನ್ನು ತೋರುವದರಲ್ಲಿ ಅರ್ಥವಿಲ್ಲ. ಏಕೆಂದರೆ ಅವನು ಸಂಪೂರ್ಣ ಗಂಡನಲ್ಲ. ಈಸ್ಟ್ರೋಜನ್ ಇರುವದರಿಂದ ಅವನಲ್ಲಿ ಹೆಣ್ತನವೂ ಇದೆ. ಅದೇ ರೀತಿ ಹೆಂಗಸಿನಲ್ಲಿ ಆ್ಯಂಡ್ರೋಜನ್ನಿನ ಅಂಶವಿರುವದರಿಂದ, ಗಂಡಸಿನ ಪೆಡಸುತನವನ್ನೂ ತೋರಿಸಬಲ್ಲಳಲ್ಲವೇ? ಈ ಹಾರ್ಮೋನುಗಳ ತುಲನಾತ್ಮಕ ಪ್ರಮಾಣದಲ್ಲಿನ ವ್ಯತ್ಯಾಸ ಕೂದಲುದುರುವಿಕೆಗೆ ಕಾರಣವಾಗುತ್ತದಂತೆ. ಹೆಂಗಸಿನಲ್ಲಿ ಈಸ್ಟ್ರೋಜನ್ನಿನ ಪ್ರಮಾಣ ಕ್ಷೀಣಿಸಿದಲ್ಲಿ ಮತ್ತು ಗಂಡಸಿನಲ್ಲಿ ಆ್ಯಂಡ್ರೋಜನ್ನಿನ ಪ್ರಮಾಣಹೆಚ್ಚಿದಲ್ಲಿ ಅತಿಯಾದ ಕೂದಲುದುರುವಿಕೆಯ ಸಂಭವ ಹೆಚ್ಚುತ್ತದೆ. ಆ್ಯಂಡ್ರೋಜನ್ ಪುರುಷ ಹಾರ್ಮೋನು, ಇದರ ಹೆಚ್ಚಿನಂಶದಿಂದ ಕೂದಲು ಉದುರಿ ತಲೆ ಬೋಳು ಆಗುವುದರಿಂದ, ಗಡ್ಡ, ಮೀಸೆಗಳಂತೆ, ಗಂಡಸಿನ ಬೋಳು ತಲೆಯನ್ನು ಸಹ ಪುರುಷ ಲೈಂಗಿಕತೆಯ ದ್ವಿತೀಯ ಲಕ್ಷಣವೆಂದು ಪರಿಗಣಿಸಬಹುದಲ್ಲವೇ? ಅಲ್ಲದೆ ಬೋಳು ತಲೆಯ ಸಂಭವ ಕೇವಲ ಗಂಡಸರಲ್ಲಿ ಹೆಚ್ಚು. ಅಕಾಲಿಕ ತಲೆ ಬೋಳಾಗುವಿಕೆ ಅನುವಂಶೀಯ ಲಕ್ಷಣವೆಂಬ ಅಭಿಪ್ರಾಯವೂ ಇದೆ. ನಿಸ್ಸಂಶಯವಾಗಿ ಬೋಳು ತಲೆ ಅನುವಂಶೀಯತೆಯನ್ನು ಅವಲಂಬಿಸಿದೆ. ಆದರೆ ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ, ತಂದೆ ತಾಯಿಯರಿಂದ ಬೋಳುತಲೆಗೆ ಕಾರಣೀಭೂತವಾದ ಘಟಕ (ಅಂಶ) ಗಳನ್ನು ಅನುವಂಶೀಯವಾಗಿ ಪಡೆಯುವವೆ ಹೊರತು ಬೋಳುತಲೆಯನ್ನಲ್ಲ. ತಲೆಬೋಳು ಯಾಗುವಿಕೆ ಪುರುಷ ಲೈಂಗಿಕ ಅಂಶಗಳಿಗೆ ಅಂಟಿದ ಅನುವಂಶೀಯ ಲಕ್ಷಣ. ಅಂತೂ ಕೂದಲುದುರುವಿಕೆಗೆ ಸಂಬಂಧಿಸಿದ ಕಾರಣಗಳನ್ನೆಲ್ಲಾ ವಿಂಗಡಿಸಿ ವಿಶ್ಲೇಷಿಸುವದು ಕಠಿಣ. ಕೂದಲು ಉದುರಿ ಬೋಳಾಗುವದಕ್ಕೆ ಸಂಬಂಧಿಸಿದ ನ್ಯೂನತೆಗಳೆಲ್ಲಾ ಒಂದನ್ನೊಂದು ಅವಲಂಬಿಸಿದ್ದು, ಈ ಸಮಸ್ಯೆಗೆ ಪರಿಹಾರ ಇನ್ನೂ ಕ್ಲಿಷ್ಟವಾಗಿದೆ.

ಬೋಳು ತಲೆಯ ನಿವಾರಣೆ ಕಠಿಣವಾಗಿರು-ವದರಿಂದ, ಕೂದಲು ಉದುರುವದನ್ನು ತಡೆಗಟ್ಟುವುದೇ ಸೂಕ್ತ ಮುಂಜಾಗ್ರತೆ. ಕೂದಲು ಆರೋಗ್ಯವಾಗಿ ಸಮೃದ್ಧವಾಗಿ ಇರಬೇಕಾದರೆ ಪ್ರತಿ ದಿನ ಶುದ್ಧ ಹವೆ, ಖನಿಜ ಹಾಗೂ ವಿಟಾ-ಮಿನ್ ಯುಕ್ತ ಆಹಾರ ಸೇವನೆ ಹಾಗೂ ವ್ಯಾಯಾಮ ಅವಶ್ಯ. ಧೂಮಪಾನ ಹಿತ ಮಿತವಾಗಿರಬೇಕು. ಮನಃಕ್ಲೇಶ, ದುಗುಡಗಳಿಂದ ದೂರವಿರಿ. ಪ್ರತಿ ವಾರಕ್ಕೊಂದಾವರ್ತಿ ತಲೆಗೆ ನೀರನ್ನು ಹಾಕಿಕೊಳ್ಳಬೇಕು. ದಿನಂಪ್ರತಿ ತಲೆ ತೊಳೆಯುವದನ್ನು ನಿಲ್ಲಿಸಿ. ಶಾಂಪೂ ಹಾಗೂ ಸಾಬೂನುಗಳ ಬಳಕೆಯು ನಿಯಮಿತವಾಗಿರಬೇಕು. ಇವುಗಳ ಅತಿಯಾದ ಬಳಕೆಯಿಂದ ಕೂದಲು ತಿಳುವಾಗಿ ಶುಷ್ಕವಾಗುತ್ತವೆ. ಅತಿ ಕಡಿಮೆ ಕ್ಷಾರಯುಕ್ತ ಸಾಬೂನು ಬಹಳ ಉತ್ತಮ. ತಲೆ ತೊಳೆಯುವ ನೀರು ಮೃದುವಾಗಿರಬೇಕು. ಕೂದಲನ್ನು ಒಣಗಿಸಲು ವಿದ್ಯುತ್ ಯಂತ್ರ (ಹೇರ್‌ಡ್ರೈಯರ್)ವನ್ನು ಉಪಯೋಗಿಸಬೇಡಿ. ಒಣ ಹವೆಗೆ, ಬಿಸಿಲಗೆ ತಂತಾನೆ ಒಣಗಲು ಬಿಡಿ. ಕೂದಲು ಹಸಿ ಇದ್ದಾಗ ತಲೆ ಬಾಚಬೇಡಿ, ಏಕೆಂದರೆ ಕೂದಲು ಹಸಿ ಇರುವಾಗ ಬಾಚಿದರೆ ಕೂದಲು ಬೇರುಗಳು ಸಡಿಲಾಗಿ ಮುಂದೆ ಕೂದಲುದುರುವ ಸಂಭವವುಂಟು. ಚಳಿಗಾಲದಲ್ಲಿ ಒಣ ಗಾಳಿಯಿಂದ, ಬೇಸಿಗೆಯಲ್ಲಿ

ಬಿಸಿಲಿನ ತಾಪದಿಂದ ಕೂದಲಿಗೆ ಬಾಧೆಯಾಗಿ ಕೂದಲು ಅಂದಗೆಡುವ ಸಾಧ್ಯತೆ ಹೆಚ್ಚು. ಆದ್ದರಿಂದ ಋತುಮಾನಕ್ಕನುಸರಿಸಿ ತಲೆಗೆ ಸೂಕ್ತ ಹೊದಿಕೆ ಇರುವದು ಅವಶ್ಯ. ಅಂದರೆ ಕೂದಲಿನ ರಕ್ಷಣೆಯಾಗುತ್ತದೆ. ನಾವೆಲ್ಲ ತಲೆ ತೆರೆದು ಕೊಂಡು ತಿರುಗುವದನ್ನೇ ಅಭ್ಯಾಸ ಮಾಡಿಕೊಂಡು ಬಿಟ್ಟಿದ್ದೇವೆ. ಕೂದಲು ಕಪ್ಪನ್ನು ಬಳಸುವಾಗಲೂ ಸಸ್ಯಜನ್ಯ ಕಪ್ಪನ್ನೇ ಬಳಸುವುದುತ್ತಮ. ಮಾರುಕಟ್ಟೆಯಲ್ಲಿ ಅನೇಕ ಸಂಸ್ಕರಿತ-ಕೃತ್ರಿಮ ಕಪ್ಪು ಬಣ್ಣಗಳು ಗ್ರಾಹಕರನ್ನು ಆಕರ್ಷಿಸುವದುಂಟು. ಕೂದಲು ಬಳಕೆಗೆ ನೈಸರ್ಗಿಕವಾದ ಪಾರಂಪರಿಕ ವಿಧಾನಗಳು, ಕೃತ್ರಿಮ ರಸಾಯನಿಕಗಳಿಂದ ನಿರ್ಮಿತವಾದವುಗಳಿಗಿಂತ ಸೂಕ್ತ, ಏಕೆಂದರೆ ನೈಸರ್ಗಿಕವಾದ ಪರಿಕರಗಳಿಗೆ ಕೂದಲು ಹೆಚ್ಚು ಸ್ಪಂದಿಸುತ್ತವೆ.

ಮುಂಜಾಗ್ರತೆ ವಿಧಿಯಾಗಿ ಕೇಶೋಪಚಾರವೂ ಅತಿ ಮುಖ್ಯ. ಕೇಶ ಕೊಳೆಯಾಗಿ ಅಂದಗೆಟ್ಟು ಉದುರದಂತೆ ಕಾಪಾಡಿಕೊಳ್ಳಲು ಅನೇಕ ವಿಧಾನಗಳು ಬಳಕೆಯಲ್ಲಿವೆ. ತಲೆಯಲ್ಲಿ ವಿಪರೀತ ಹೊಟ್ಟಿನ ಬಾಧೆ ಇದ್ದರೆ, ಕೂದಲು ಉದುರುತ್ತಿದ್ದರೆ ಬಿಸಿ ಎಣ್ಣೆಯನ್ನು ಹಚ್ಚಿ ತಿಕ್ಕಿಕೊಂಡು ವಾರಕ್ಕೆ ಎರಡು ಬಾರಿ ಉಪಚಾರ ಮಾಡಿಕೊಳ್ಳಬೇಕು. ಒಂದು ಚಮಚ ನಿಂಬೆ ರಸಕ್ಕೆ ಎರಡು ಚಮಚ ಕೊಬ್ಬರಿ ಎಣ್ಣೆ ಮಿಶ್ರ ಮಾಡಿ ತಲೆಗೆ ತಿಕ್ಕಿಕೊಂಡು ಒಂದೆರಡು ಗಂಟೆಗಳ ನಂತರ ತಲೆ ತೊಳೆದುಕೊಳ್ಳುವುದರಿಂದ ಹೊಟ್ಟು ನಿವಾರಣೆಯಾಗುವುದು. ಹುಳಿ ಮೊಸರನ್ನು ತಲೆಗೆ ತಿಕ್ಕಿಕೊಂಡು ಒಂದು ತಾಸಿನ ನಂತರ ಕೂದಲು ತೊಳೆದುಕೊಂಡು ಸ್ನಾನ ಮಾಡಿದರೆ ಹೊಟ್ಟು ಹೋಗುತ್ತದೆ. ನಿಂಬೆ ಹಣ್ಣನ್ನು ಕತ್ತರಿಸಿ, ಉಪ್ಪಿನಲ್ಲಿ ಅದ್ದಿ ಆಗಾಗ ತಲೆಗೆ ತಿಕ್ಕಿಕೊಳ್ಳುತ್ತಿದ್ದರೆ ಕೂದಲು ಚೆನ್ನಾಗಿ ಬೆಳೆಯುತ್ತವೆ. ಕೂದಲು ಕಾಂತಿಯುತವಾಗಲು ಹಸಿಗೂದಲಿಗೆ ಒಂದು ಕೋಳಿ ತತ್ತಿಯನ್ನು ಒಡೆದು ಹಚ್ಚಿ ಅರ್ಧ ಗಂಟೆಯ ನಂತರ ಉಗುರು ಬೆಚ್ಚಗಿನ ನೀರಿನಿಂದ ತಲೆ ತೊಳೆದುಕೊಳ್ಳಬೇಕು. ತೆಂಗಿನ ಕಾಯಿ ತುರಿದು ಅದರ ರಸ ತೆಗೆದು ಅದಕ್ಕೆ ಒಂದು ನಿಂಬೆ ಹಣ್ಣಿನ ರಸ ಬೆರೆಸಿ ತಯಾರಿಸಿದ ಮಿಶ್ರಣವನ್ನು ತಲೆಗೆ ಹಚ್ಚಿ ತಿಕ್ಕಿ ೧೦–೨೦ ನಿಮಿಷದ ನಂತರ ತಲೆ ತೊಳೆದುಕೊಳ್ಳುವದರಿಂದ ಕೂದಲು ಉದುರುವದನ್ನು ತಡೆಯಬಹುದು. ಇದರಂತೆಯೆ ಒಂದು ಚಮಚ ಆಲಿವ್ ಎಣ್ಣೆಗೆ, ಒಂದು ತತ್ತಿ ಹಾಗೂ ಒಂದು ಚಮಚ ಗ್ಲಿಸರಿನ್ ಮತ್ತು ವಿನೆಗಾರ ಬೆರೆಸಿ ತಯಾರಿಸಿದ ಮಿಶ್ರಣವನ್ನು ಹಚ್ಚಿ ತಿಕ್ಕಿ ಅರ್ಧ ಗಂಟೆಯ ನಂತರ ಚೆನ್ನಾಗಿ ಜಿಡ್ಡು ಹೋಗುವಂತೆ ತಲೆಯನ್ನು ತೊಳೆದುಕೊಳ್ಳುವದರಿಂದಲೂ ಕೂದಲು ಆರೋಗ್ಯಯುತವಾಗಿರುತ್ತವೆ. ನೀರಿನಲ್ಲಿ ಕುದಿಸಿ ತೆಗೆದ ನೀರುಳ್ಳಿ ಸಾರ, ಹಸಿರು ಗೋಡಂಬೆಕಾಯಿಯ ರಸ, ಮುಂತಾದವುಗಳ ಲೇಪನದಿಂದ ಕೂದಲು ಅಂದವಾಗಿ ಕಪ್ಪಾಗಿ ಕಾಣುವವು. ಇದೂ ಅಲ್ಲದೇ ತಲೆ ಚರ್ಮವನ್ನು




"ಮಾವನ ಆಸೆಗೆ ಮಿತಿಯಿಲ್ಲ ಅಂತ ಹೇಳ್ಕೊಡ್ತಿ ಯಲ್ಲೆ? ಮಾನವನ ಆಸೆಗೆ ಮಿತಿಯಿಲ್ಲ ಅಂತ ಹೇಳ್ಕೊಡು."

ಪ್ರಚೋದನಗೊಳಿಸುವಂತಹ ಗಿಡಮೂಲಿಕೆಗಳ ಸಾರ, ವಿವಿಧ ಮಲಾಮುಗಳ ಲೇಪನ, ಸಿಂಕೋನಾ ಗಿಡದ ತೊಗಟೆಯ ರಸ, ಕೆಂಪು ಮೆಣಸು, ಅಯೋಡಿನ್ ಮುಂತಾದವುಗಳನ್ನೂ ತಲೆಗೂದಲಿನ ಬೆಳವಣಿಗೆಗೆ ಬಳಸಲಾಗುವುದು. ದ್ರವ ನೈಟ್ರೋಜನ್ನಿನ ಮಜ್ಜನ ಪರಿಣಾಮಕರ ಎಂದು ಕಂಡುಬಂದಿದೆಯಲ್ಲದೆ ಬೋಳು ತಲೆಯನ್ನು ನಿವಾರಿಸಲು ಕ್ಷ-ಕಿರಣಗಳನ್ನೂ ಉಪಯೋಗಿಸಲಾಗುತ್ತದೆ. ಒಟ್ಟಾರೆ ಎಲ್ಲಾ ಕೇಶ ಶುಶ್ರೂಷಾ ವಿಧಾನಗಳನ್ನು ಸ್ಥೂಲವಾಗಿ ಮಜ್ಜನ, ಭೌತಿಕ ವ್ಯಾಯಾಮ, ಪ್ರಾಕೃತಿಕ ಚಿಕಿತ್ಸೆ, ಸಮತೂಕ ಹಾಗೂ ಪೋಷಕಾಂಶ ಯುಕ್ತ ಆಹಾರ ಸೇವನೆಯ ಉಪಚಾರ, ಆಕ್ಯು-ಪಂಕ್ಚರ್, ಗಿಡಮೂಲಿಕೆಗಳಿಂದ ಆದ ಔಷಧಗಳ ಸೇವನೆ, ಸಸ್ಯಜನ್ಯ ವಸ್ತುಗಳ ಲೇಪನ ಮುಂತಾದ ವಿವಿಧ ವಿಧಾನಗಳೆಂದು ವಿಂಗಡಿಸಬಹುದು. ಎಲ್ಲಾ ವಿಧದ ಉಪಚಾರಗಳಲ್ಲಿ ಪೋಷಕಾಂಶಗಳು ತಲೆಯ ಭಾಗಕ್ಕೆ ಹೆಚ್ಚು ರಕ್ತ ಪರಿಚಲನೆಗೊಳ್ಳುವಂತೆ ಮಾಡಿ ಚರ್ಮ ಪ್ರಚೋದನಗೊಂಡು ಆ ಭಾಗದಲ್ಲಿ ಕೂದಲು ವೃದ್ಧಿ ಹೊಂದಿ ಸಮೃದ್ಧವಾಗಿ ಬೆಳೆಯುವಂತೆ ಮಾಡುವದೇ ಇದರ ಉದ್ದೇಶ.

ಬಕ್ಕತಲೆಯ ಉಪಚಾರಕ್ಕೆ "ಪ್ರತಿ ಆ್ಯಂಡ್ರೋಜನ್ನ"ನ್ನು ಬಳಸುವ ಹೊಸ ಉಪಚಾರ ವಿಧಾನವನ್ನು ರಶಿಯದ ವಿಜ್ಞಾನಿಗಳು ಹಾಗೂ ಕಾಂತಿವರ್ಧಕ ತಜ್ಞರು ಕಂಡುಹಿಡಿದಿರುವರು. ಪ್ರತಿ ಆ್ಯಂಡ್ರೋಜನ್ ತಯಾರಿಕೆಗಳು ಚರ್ಮದ ಮೇಲೆ ಆಗುವ ಆ್ಯಂಡ್ರೋಜನ್ ಹಾರ್ಮೋನಿನ ಪರಿಣಾಮವನ್ನು ತಡೆಯುತ್ತವೆಯಾದ್ದರಿಂದ ತಲೆಗೂದಲು ಉದುರುವದರ ಮೂಲವನ್ನು ನಿಯಂತ್ರಿಸುತ್ತವೆ ಎಂದು ರಶಿಯದ ಪ್ರಸಿದ್ಧ ಕಾಂತಿವರ್ಧಕ ತಜ್ಞರಾದ ರೊರಖಿಂದೆಸ್ಟವೆನ-ಸ್ಕಯಾ ಅಭಿಪ್ರಾಯಪಡುತ್ತಾರೆ. ಕೃತ್ರಿಮ ಲೈಂಗಿಕ ಹಾರ್ಮೋನುಗಳನ್ನು ಉಪಯೋಗಿಸುವಲ್ಲಿ ಇರುವಂಥ ಜಾಗರೂಕತೆಯು "ಪ್ರತಿ ಆ್ಯಂಡ್ರೋಜನ್" ಬಳಕೆಯಲ್ಲಿಯೂ ಅವಶ್ಯ. ಏಕೆಂದರೆ ಆ್ಯಂಡ್ರೋಜನ್ ಪುರುಷತ್ವವನ್ನು ನಿರ್ಧರಿಸುವ ಲೈಂಗಿಕ ಹಾರ್ಮೋನಾಗಿದ್ದು 'ಪ್ರತಿ ಆ್ಯಂಡ್ರೋಜನ್'ಗಳ ಉಪಚಾರದಿಂದ ಪುರುಷರಲ್ಲಿ ಆ್ಯಂಡ್ರೋಜನ್ನಿನ ಪ್ರಮಾಣ ಕ್ಷೀಣಿಸಿ ಅವನಲ್ಲಿ ಲೈಂಗಿಕ ಪ್ರಚೋದನೆ ಕಡಿಮೆಯಾಗಿ ಅವನ ಪುರುಷತ್ವಕ್ಕೆ ಸಂಚಕಾರ ಬರುವ ಸಾಧ್ಯತೆ ಇದೆ. ಆದ್ದರಿಂದ ಬೋಳು ತಲೆಯ ಉಪಚಾರದಲ್ಲಿ, ವಿವೇಚನಾಪೂರಿತ "ಪ್ರತಿ ಆಂಡ್ರೋಜನ್"ಗಳ ಬಳಕೆ ಒಂದು ವಿಧದಲ್ಲಿ ಸೃಷ್ಟಿಯ ವ್ಯವಸ್ಥೆಗೆ ಸವಾಲಾಗಬಹುದು. ಪುರುಷರಲ್ಲಿ ಈ ಉಪಚಾರದಿಂದ ಹಾನಿಯಾಗಬಹುದಾದ್ದರಿಂದ ಬೋಳು ತಲೆಯ ಬಗ್ಗೆ ಪುರುಷರು ಪ್ರಾರಂಭದಲ್ಲಿಯೇ ತಲೆಕೆಡಿಸಿಕೊಳ್ಳಬೇಕಾಗಿದೆ. ಆದ್ದರಿಂದ ಸ್ತ್ರೀಯರಿಗಿಂತ ಪುರುಷರು ಬೋಳು ತಲೆ ಸಮಸ್ಯೆಯ ಬಗ್ಗೆ ಸಮ



"ನಿನ್ನನ್ನು (ಮದುವೆಯಾಗಲು) ಒಪ್ಪಿಕೊಂಡಾಗಲೇ ನನಗೆ select ಮಾಡಲು ಬರುವುದಿಲ್ಲ ಎಂಬುದು (ನಿನಗೆ) ಗೊತ್ತಾಗಬೇಕಿತ್ತು."

ಯೋಚಿತ ಮುಂಜಾಗ್ರತೆ ತಗೆದುಕೊಳ್ಳಬೇಕು. ವಾಸ್ತವದಲ್ಲಿ ಪುರುಷರು ಬೋಳು ತಲೆಯ ಸಮಸ್ಯೆಯ ಬಗ್ಗೆ ಬಹು ಭೀತಿಗೊಳ್ಳುತ್ತಾರೆ. ತಲೆ ಬೋಳಾದರೆ ತಾವು ಮುದುಕರಾದೆವು ಎಂಬುದು ಅವರ ಭೀತಿಗೆ ಕಾರಣವೇನೊ. ಈ ಸಮಸ್ಯೆಯನ್ನು ಶಾಂತ ಚಿತ್ತದಿಂದ ಎದುರಿಸುವದು ಅವಶ್ಯ. ಮಾನಸಿಕ ಭೀತಿ ಪರಿಸ್ಥಿತಿಯನ್ನು ಇನ್ನಿಷ್ಟು ಹದಗೆಡಿಸುತ್ತದೆ.

ಬಕ್ಕತಲೆಯುವರಿಗೆ ಹೊಸ ಆಸೆ ಮೂಡಿಸುವಂಥ ಔಷಧವೊಂದನ್ನು ಅಮೇರಿಕದ ಆಪ್-ಜಾನ್ ಸಂಸ್ಥೆ ಕಂಡುಹಿಡಿದಿದೆ. ಈ ಸಂಸ್ಥೆಯ "ಲೋನಿಟೇನ್ ಮೊನಾಯಿಡಿಲ್"ಎಂಬ ಔಷಧವನ್ನು ೨೦ ವರ್ಷಗಳಿಂದ ರಕ್ತದ ಅಧಿಕ ಒತ್ತಡ ಚಿಕಿತ್ಸೆಗಾಗಿ ಬಳಸಲಾಗುತ್ತಿತ್ತು. ರಕ್ತ ಒತ್ತಡದ ತೊಂದರೆಗೆ ಇದು ಉತ್ತಮ ಉಪಚಾರ. ಇದರ ದುಷ್ಪರಿಣಾಮವೆಂದರೆ ಬಳಸಿದವರಲ್ಲಿ ಶೇಕಡಾ ೮೦ ರಷ್ಟು ಜನರಿಗೆ ಹಣೆ ಬೆನ್ನು, ತೋಳು, ಕಾಲುಗಳ ಮೇಲೂ ಕೂದಲು ಬೆಳೆಯಲಾರಂಭಿಸಿತು. ಅಂದರೆ ಈ ಔಷಧ ಕೂದಲು ಬೆಳೆಯುವಂತೆ ಮಾಡುತ್ತದೆ ಎಂಬುದು ದೃಢಪಟ್ಟನಂತರ ಇದನ್ನು ಮುಲಾಮಿನಂತೆ ಬೋಳು ತಲೆಯುವರಿಗೆ ಉಪಚರಿಸಿ ಪರೀಕ್ಷಿಸಿದಾಗ ಅವರ ಬೋಳುತಲೆಯುಲ್ಲಿ ಕೂದಲು ಕಾಣಿಸಿಕೊಂಡವು. ಈಗ ಆ ಸಂಸ್ಥೆ "ಲೋನಿಟೇನ್ ಮೊನಾಯಿಡಿಲ್" ಔಷಧಿ ಚಿಕಿತ್ಸೆಯನ್ನು ಬಕ್ಕತಲೆಯುವರಿಗೆ ನಡೆಸಲು ಅನುಮತಿ ಕೋರಿ ಔಷಧ ಇಲಾಖೆಯವರನ್ನು ಕೇಳಿಕೊಂಡಿದೆ.

ಬೋಳುತಲೆಯ ತೊಂದರೆಯನ್ನು ಹೋಗಲಾಡಿಸಲು ರೋಗಿ ಹಾಗೂ ವೈದ್ಯ ಇಬ್ಬರಲ್ಲಿಯೂ ತಾಳ್ಮೆ ಹಾಗೂ ಉಪಚಾರವನ್ನು ಸತತವಾಗಿ ದೀರ್ಘಕಾಲದ ವರೆಗೆ ನಡೆಸಿಕೊಂಡು ಹೋಗುವ ಮನೋಬಲಬೇಕು. ಈ ಸಮಸ್ಯೆ ಸಂಕೀರ್ಣವಾದುದಾದ್ದರಿಂದ ಕ್ಷಣಿಕ ಉಪಚಾರದಿಂದ ತಕ್ಷಣದ ಪರಿಣಾಮ ದೊರೆಯುವದಿಲ್ಲ. ಚರ್ಮತಜ್ಞರು, ಮಾನಸಿಕ ಹಾಗೂ ನರಮಂಡಲ ತಜ್ಞರು, ನಿರ್ನಾಳ ಗ್ರಂಥಿ ತಜ್ಞರು, ಆಹಾರ ವಿಜ್ಞಾನ ಪರಿಣಿತರು, ವೈದ್ಯರು ಹಾಗೂ ವಿಜ್ಞಾನಿಗಳು ಕೂಡಿಯೇ ಈ ಸಮಸ್ಯೆಯನ್ನು ನಿವಾರಿಸುವಲ್ಲಿ ಶ್ರಮಿಸಬೇಕಾಗಬಹುದು.

ಬೋಳುತಲೆಯ ತೊಂದರೆ ದೂರವಾಗದ ಪಕ್ಷದಲ್ಲಿ, ಕೂದಲು ಉದುರಿ ತಲೆ ಬೋಳಾಗುತ್ತದೆ, ಆಗಿದೆ ಎಂದು ಏಕೆ ಬೇಸರಿಸಬೇಕು? ಬೋಳುತಲೆ ವ್ಯಕ್ತಿತ್ವ ಚಿಹ್ನವಲ್ಲವೆ? ತಲೆಯಲ್ಲಿ ಕೂದಲಿಲ್ಲದ ವ್ಯಕ್ತಿ ಮೇಧಾವಿ, ಹಿರಿಯ ಗುಣ ಉಳ್ಳವನೆಂದು ಸಮಾಜದಲ್ಲಿ ಗ್ರಹಿಸಲ್ಪಡುವುದಿಲ್ಲವೇ? ತಲೆಬೋಳಾದರೆ ಸಮಾಜದಲ್ಲಿ ನಿಮಗೆ ಗೌರವವಿದೆ. ಕೆಲವೊಮ್ಮೆ ನನಗನಿಸುವುದೇನೆಂದರೆ ಭವಿಷ್ಯತ್ತಿನಲ್ಲಿ ಮಾನವ ಯಾವ ರೀತಿ ಇರಬಹುದು? ದೊಡ್ಡ ತಲೆಯ ಸಮೃದ್ಧ ಕೂದಲುಳ್ಳವನೋ? ಪಿಂಗ್‌ಪಾಂಗ್ ಚಂಡಿನಂತೆ ನುಣುಪಾದ ಬೋಳು ತಲೆಯುವನೋ?

ರಶಿಯದ ಡಾ. ಅಕೊಪಾಯನ್ ಹೇಳುತ್ತಾರೆ: "ವಿಜ್ಞಾನವು ಬೋಳು ತಲೆಯನ್ನು ನಿವಾರಿಸುವ ಯಕ್ಷಣೀ ಮದ್ದನ್ನು ಕಂಡುಹಿಡಿಯದೇ ಹೋದಲ್ಲಿ, ನಿಜವಾಗಿಯೂ ವೈಜ್ಞಾನಿಕದಂತ ಕಥೆಗಳಲ್ಲಿ ಬರುವಂಥ ಕೂದಲಿಲ್ಲದ ಬೋಳು ತಲೆಯ ಮನುಷ್ಯ ಮುಂದಿನ ಯುಗದಲ್ಲಿ ಸರ್ವೇಸಾಮಾನ್ಯನಾಗಬಹುದು ಎಂಬುದರಲ್ಲಿ ಸಂದೇಹವಿಲ್ಲ. ಹಾಗಾಗುತ್ತದೆ ಎಂಬ ಭಯಂಕರ ಕಲ್ಪನೆಯಿಂದ ನೀವು ಭಯಪಡಬೇಡಿ. ಏಕೆಂದರೆ ನಾಳಿನ ಮನುಷ್ಯನಿಗೆ ಬೋಳು ತಲೆ ಅನಿವಾರ್ಯ."

❁



# ಎರಡು ಮೂಲ

**ಮಾ. ಭ. ಪೆರ್ಲ**

ಭಾವನಾಗೆ ಥಕ್ಕನೆ ಬೆಚ್ಚಿಬಿದ್ದವಳಂತೆ ಎಚ್ಚರವಾಯಿತು. ಅರೆ ಬರೆ ಎಚ್ಚರವಾದಾಗ ಮೊದಲು ಆಕೆ ತನ್ನ ಎಡ ಪಕ್ಕದಲ್ಲಿ ಕೈಯಾಡಿಸಿ ನೋಡಿದಳು. ಸ್ಪಂದನಾ ಮಲಗಿಯೇ ಇದ್ದಾಳೆಂದು ತಿಳಿದು, ಸಮಾಧಾನದ ನಿಟ್ಟುಸಿರೊಂದು ತನ್ನಿಂದ ತಾನಾಗಿಯೇ ಹೊರ ಹೊಮ್ಮಿತು. ಮನಸ್ಸಲ್ಲೇ 'ದೇವರು ದೊಡ್ಡವನು' ಅಂದುಕೊಂಡಳು. ತಾನು ನೋಡಿದ್ದು — ಸ್ಪಂದನಾ ನೀರಲ್ಲಿ ಬಿದ್ದು ತನ್ನನ್ನಗಲಿ ಹೋದುದು ಕನಸು, ನಿಜವಲ್ಲ ಎಂದು ಮನಸ್ಸಿಗೆ ಸಮಾಧಾನವಾಗಿ ಆಕೆಯ ಹೃದಯ ತುಸು ಹಗುರವಾಯಿತು.

ಇನ್ನೂ ಬೆಳಕು ಹರಿದಿರಲಿಲ್ಲ. ಮಗ್ಗುಲಾಗಿ ಮಲಗಿದ್ದ ಸ್ಪಂದನಾಳ ಮೇಲಿಟ್ಟಿದ್ದ ಭಾವನಾಳ ಬಲಗೈ ಅವಳನ್ನು ಇನ್ನಷ್ಟು ಗಟ್ಟಿಯಾಗಿ ಹಿಡಿದುಕೊಂಡಿತು. ಮಗುವನ್ನು ಇನ್ನಷ್ಟು ಹತ್ತಿರಕ್ಕೆಳೆದು ತಬ್ಬಿಕೊಳ್ಳಬೇಕೆಂದು ಆಕೆಗೆ ಮನಸ್ಸಾದರೂ ಹಾಗೆ ಮಾಡಿದರೆ ಎಚ್ಚರವಾಗಿ ಮಗುವಿನ ನಿದ್ದೆ ಕೆಡುವಂತಾದೀತೆಂದು ಮನಸ್ಸನ್ನು ಬಿಗಿ ಹಿಡಿದಳು. ಪಾಪ, ರಾತ್ರಿ ಅತ್ತತ್ತು ಮಲಗಿದ್ದಾಳೆ. ಎಚ್ಚರವಾಗುವ ತನಕ ಮಲಗಲಿ ಎಂದು ತನ್ನ ಕನಸಿನ ಪ್ರಪಂಚದಿಂದ ಪೂರ್ತಿಯಾಗಿ ಹೊರ ಬಂದಾಗ ನಿದ್ರೆ ಹಾರಿ ಹೋಗಿತ್ತು.

ಸಂಜೆಯ ಘಟನೆ ಚಿತ್ರದಂತೆ ಅವಳ ಕಣ್ಣ ಮುಂದೆ ಸುಳಿಯಲಾರಂಭಿಸಿತು. ಮೂರು ಗಂಟೆಗೆ ಪಕ್ಕದ ಮನೆಯ ಸರಸಮ್ಮ ತಮ್ಮ ಮಗಳು ಮತ್ತು ಮೊಮ್ಮಗನೊಂದಿಗೆ ಬಂದಿದ್ದರು. ಒಂದು ಗಂಟೆಯಷ್ಟು ಸಮಯ ಹರಟೆ ಹೊಡೆದು ಕೊನೆಗೆ ಶರಬತ್ ಕುಡಿದು ಹೊರಟು ಹೋಗಿದ್ದರು. ಅನಂತರ ಭಾವನಾಳ ಗಂಡನ ಸ್ನೇಹಿತ ಇಂಜಿನೀಯರ್ ತನ್ನ ಪತ್ನಿಯೊಂದಿಗೆ ಮೊದಲ ಬಾರಿ ಬಂದಿದ್ದ. ಅವರಿಗೆ ಕಾಫಿ, ತಿಂಡಿ ಮಾಡಿಕೊಟ್ಟು ಭಾವನಾ ಆರು ಗಂಟೆಯ ತನಕ ಅವರೊಂದಿಗೆ ಮಾತನಾಡುತ್ತ ಕುಳಿತಿದ್ದಳು. ಆರು ಗಂಟೆಗೆ ಅವರು ಹೊರಡಲು ಸಿದ್ಧರಾದರು. ಭಾವನಾ ಗೇಟಿನ ತನಕ ಹೋಗಿ ಬಂದಳು. "ನೋಡು, ಇವರು ಅಂಕಲ್ ಅಂಟಿ" ಎಂದರೂ ಆಕೆ ಅವರತ್ತ ಒಮ್ಮೆ ದೃಷ್ಟಿ ಬೀರಿ "ಅಮ್ಮಾ, ನೀರು ಬೇಕು" ಎಂದು ಒಳಗೆ ನುಗ್ಗಿದಳು. "ಚಿಂತಿಲ್ಲ ಬಿಡಿ, ಆಟ ಆಡಿ ಬಾಯಾರಿಕೆಯಾಗಿದೆ. ಇನ್ನೊಮ್ಮೆ ಬಂದಾಗ ಮಾತಾಡಿಸ್ತೇವೆ, ಬರ್ತೇವೆ" ಎಂದು ಅವರು

ಹೊರಟು ಹೋದರು. ಗೇಟು ಹಾಕಿ ಮನೆಯೊಳಗೆ ಬರುವಷ್ಟರಲ್ಲಿ ಸ್ಪಂದನಾ ಮತ್ತೆ "ಅಮ್ಮಾ, ನೀರು ಬೇಕು. ಚೀಕಾ ಎಲ್ಲಿ?" ಎಂದಳು. "ಒಳಗೆ ಹೋಗಿ ಕುಡಿಯೋ, ಬಂದೆ" ಎಂದಳು ಭಾವನಾ. ಸ್ಪಂದನಾ "ಚೀತಾ ಚೀತಾ" ಎನ್ನುತ್ತಾ ಒಳಗೆ ಹೋದಳು. ಒಂದೇ ನಿಮಿಷದಲ್ಲಿ ಮತ್ತೆ "ಅಮ್ಮಾs ಅಮ್ಮಾss" ಎಂಬ ಚೀರಾಟದ ಧ್ವನಿ ಕೇಳಿ ಭಾವನಾ ಒಳಗೋಡಿದಳು.

ಅಡುಗೆ ಮನೆಗೆ ನುಗ್ಗಿದಾಗ ಅವಳ ಎದೆ ಧಸಕ್ ಎಂದಿತು. "ಛೂ, ಛೂ" ಎಂದು ಹೇಳುತ್ತ ಸೀತಾಳ ಮೇಲೆರಗಿದ್ದ ಬಾವುಗಕ್ಕೆ ಕೈಯಿಂದಲೇ ನಾಲ್ಕೇಟು ಬಿಗಿದಳು. ಅದು ಕಿಟಕಿಯಿಂದ ಜಿಗಿದು ಹೊರಗೆ ಓಡಿ ಹೋಯಿತು.



ಭಾವನಾಗೆ ದಿಕ್ಕೇ ತೋಚದಂತಾಯಿತು. ಸ್ಪಂದನಾ ನೀರು ಕುಡಿಯಲು ತೆಗೆದುಕೊಂಡಿದ್ದ ಸ್ಟೀಲಿನ ಲೋಟ ಒಂದೆಡೆ ಉರುಳಿ ಬಿದ್ದಿತ್ತು, ನೀರೆಲ್ಲ ಚೆಲ್ಲಿ ಹೋಗಿತ್ತು. ಸ್ಪಂದನಾ ಪ್ರಜ್ಞಾ ಶೂನ್ಯಳಾಗಿ ಬಿದ್ದಿದ್ದಳು! ಮತ್ತೊಂದೆಡೆ ಕೊರಳಿನಿಂದ ಚಿಮ್ಮುತ್ತಿರುವ ರಕ್ತದ ಓಕುಳಿಯಲ್ಲಿ ಸೀತಾ ಚಡಪಡಿಸುತ್ತಿದ್ದಳು.

ಭಾವನಾ ಮರುಕ್ಷಣದಲ್ಲಿ ಸ್ಪಂದನಾಳನ್ನು ಮಡಲಲ್ಲಿ ಎತ್ತಿಕೊಂಡಳು. ಕಣ್ಣಿಗೆ- ಮುಖಕ್ಕೆ ನೀರು ಚಿಮುಕಿಸಿ "ಸ್ಪಂದನಾ ಸ್ಪಂದನಾ" ಎಂದು ನಾಲ್ಕಾರು ಬಾರಿ ಕರೆದಾಗ ಆಕೆ ನಿಧಾನವಾಗಿ ಕಣ್ಣು ತೆರೆದಳು. "ಅಮ್ಮಾ, ಅಮ್ಮಾ" ಎಂದು ಅಳುತ್ತಾ "ಅಲ್ಲಿ ನೋಡಮ್ಮಾ, ನಮ್ಮ ಚೀತಾ ಮೈ ಎಲ್ಲಾ ಲಕ್ತ ಲಕ್ತ" ಎನ್ನುತ್ತ ಭೀತಿಯಿಂದ ಅತ್ತ ನೋಡತೊಡಗಿದಳು.

ಭಾವನಾ ಆಕೆಯನ್ನೆತ್ತಿಕೊಂಡು ಬೆಡ್‌ರೂಮಿಗೆ ಹೋದಳು. "ಅಮ್ಮಾ, ಆ ದೊಡ್ಡ ಬೆಕ್ಕು ಬಂದಿತ್ತು. ಅದು ಚೀತಾಗೆ ಲಕ್ತ ಲಕ್ತ ಮಾಡಿತು" ಎಂದು ಏನೇನೋ ಹೇಳಲಾರಂಭಿಸಿದಳು ಸ್ಪಂದನಾ.

"ನೀ ಸುಮ್ನಿರು. ನೀ ಇಲ್ಲೇ ಇರು. ಚೀತಾಳತ್ರ ಹೋಗ್ಬೇಡ" ಎಂದು ಆಕೆಯನ್ನು ಹಾಸಿಗೆಯಲ್ಲಿ ಮಲಗಿಸಿ ಒಂದಿಷ್ಟು ಹಾಲು ಕುಡಿಸಿ ಕೈಗೆ ಚಾಕಲೇಟು ಕೊಟ್ಟು ಅಡುಗೆ ಮನೆಗೆ ಹೋದಳು. "ಸೀತಾ ಸೀತಾ" ಎನ್ನುತ್ತಿರುವಂತೆಯೇ ಅವಳಿಗೆ ಕಣ್ಣೀರು ಬಂದೇ ಬಿಟ್ಟಿತು. ರಕ್ತರಂಜಿತ ಸೀತಾಳನ್ನು ಮಡಲಲ್ಲಿ ಎತ್ತಿಕೊಂಡಳು. "ನಿನ್ನನ್ನು ಐದು ತಿಂಗಳ ಮಗುವಿನಂತೆ ರಕ್ಷಿಸಿದ್ರೂ ಕೊನೆಗೂ ಹೊರಟೇ ಹೋದೆಯಲ್ಲಾ ಸೀತಾ? ನಿನ್ಗೆ ಐದು ತಿಂಗಳು, ಸ್ಪಂದನಾಗೆ ಐದು ವರ್ಷಗಳಾಗ್ತಾ ಬಂದವು. ಸ್ಪಂದನಾಗೆ ಹಾಲು ಕೊಟ್ಟಾಗ, ತಿಂಡಿ ಕೊಟ್ಟಾಗ ನಿನ್ಗೂ ಕೊಡ್ತಿದ್ದೆ, ಅಕಸ್ಮಾತ್ ನನ್ಗೆ ಮರೆತು ಹೋದ್ರೂ ಸ್ಪಂದನಾಳೇ ನೆನ್ಪು ಮಾಡ್ತಿದ್ಲು 'ಅಮ್ಮಾ ಚೀತಾಗೆ' ಎಂದು. ಅವಳು ಸ್ಕೂಲಿಂದ ಬಂದಾಗ, ಆಟ ಆಡಿ ಮನೆಯೊಳ್ಗೆ ಕಾಲಿರಿಸ್ಬೇಕಾದ್ರೆ 'ಚೀತಾ ಚೀತಾ' ಎಂದು ನಿನ್ನನ್ನೇ ಕರೀತಿದ್ಲು. ನಿನ್ ಮೈ ಮೇಲೆ ಕೈಯಾಡಿಸ್ತಿದ್ಲು. ನೀನು 'ಗುರ್ ಗುರ್' ಎನ್ನುತ್ತ ಸಂತೋಷದಿಂದ ಬಾಲ ಅಲ್ಲಾಡಿಸ್ತಿದ್ದಿ, ಇನ್ನವಳು ಯಾರೊಂದಿಗೆ ಆಡ್ಬೇಕು? ನಿನ್ತಾಯಿ ಹೊರಗಿನಿಂದ ಬಂದು 'ಮ್ಯಾಂವ್ ಮ್ಯಾಂವ್' ಎನ್ನುತ್ತ ನಿನ್ನ ಹುಡ್ಕಿದಾಗ ನಾನು ಏನುತ್ರ ಕೊಡ್ಲಿ? ಇಷ್ಟು ದಿವ್ಸ ನಿನ್ನ ಕಾಯ್ತಾ ಇದ್ದ ನಾನು ಒಂದೆರಡು ನಿಮಿಷ ಮೊದ್ಲು ಅತಿಥಿಗಳನ್ನ ಕಳಿಸಿ ಬಿಟ್ಟಿದ್ರೆ ನಿನ್ಗೆ ಈ ಪರಿಸ್ಥಿತಿ ಬರ್ತಿರಲಿಲ್ಲ. ನಾನೇ ಕೈಯಾರೆ ನಿನ್ನ ಕೊಂದ್ಹಾಗೆ ಆಯ್ತಲ್ಲಾ ಸೀತಾ? ನಾ ಯಾವ ಜನ್ಮದಲ್ಮಾಡಿದ ಪಾಪಕ್ಕೆ ಈ ಪ್ರಾಯಶ್ಚಿತ್ತಕೊಟ್ಟೆ ಭಗವಂತಾ?" ಎಂದು ಏನೇನೋ ಹೇಳಿಕೊಳ್ಳುತ್ತ ಸೀತಾಳ ಕತ್ತಿನಲ್ಲಾದ ಗಾಯವನ್ನು ನೋಡುತ್ತಿರುವಂತೆಯೇ ಅದು ಕೊರಳನ್ನು ಅಡ್ಡ ಹಾಕಿ ತನ್ನ ಅಂತ್ಯವನ್ನು ಸೂಚಿಸಿತು. ಭಾವನಾಳ ಮಡಿಲು ರಕ್ತಮಯವಾಗಿತ್ತು. ಆಕೆ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು.

ಆಕೆಯ ಅಳುವನ್ನು ಕೇಳಿ ಸ್ಪಂದನಾ ಅಡುಗೆ ಮನೆಗೆ ಬಂದಳು. ತಾಯಿಯ ಮಡಿಲು ರಕ್ತಮಯವಾಗಿದೆ. ಬಿಳಿ ಸೀತಾಳ ಬಣ್ಣ ಪೂ ಕೆಂಪಾಗಿದೆ. ತಾಯಿ ಅಳುತ್ತಿರುವುದನ್ನು ಕಂಡು ಸ್ಪಂದನಾಳಿಗೂ ಅಳು ಬಂತು.

"ಅಮ್ಮಾ, ಚೀತಾ ಬದ್ಕೋದಿಲ್ವಾ?" ಎಂದು ಕೇಳಿದಳು ಸ್ಪಂದನಾ.

"ಇಲ್ಲಮ್ಮಾ, ಸತ್ತೋಯ್ತು."

ಎಂದು ಇನ್ನಷ್ಟು ಜೋರಾಗಿ ಅಳಲಾರಂಭಿಸಿದಳು ಭಾವನಾ.

"ಅಮ್ಮಾ, ಆ ದೊಡ್ಬೆಕ್ಕು ಚೀತಾಳ ಕುತ್ಗೇನ ಕಚ್ಚಿ ಕಚ್ಚಿ ಅವ್ಳನ್ನ ಆ ಕಡೆ ಈ ಕಡೆ ಎಳೀತು. ಪಾಪ ಚೀತಾ! ಚತ್ತೋಯ್ತು! ಚೀತಾ ಚತ್ತೋಯ್ತು."

ಸ್ಪಂದನಾ ಅಳಲಾರಂಭಿಸಿದೊಡನೆ ಭಾವನಾಳ ಅಳು ಥಟ್ಟನೆ ನಿಂತುಹೋಯಿತು. ಅವಳು ಸೆರಗಿನಿಂದ ಕಣ್ಣೊರಸಿಕೊಂಡಳು. ತುಸು ಗದರಿಸುವ ದನಿಯಲ್ಲಿ ಅವಳು ಸ್ಪಂದನಾಗೆ ಹೇಳಿದಳು, "ನೀ ಹೋಗಿ ಮಲ್ಕೊ."

ತಾಯಿಯ ಮಾತಿನ ಧಾಟಿ ನೋಡಿ, ಅವಳ ಮುಖವನ್ನೊಮ್ಮೆ ನೋಡಿ ಮರು ಮಾತಾಡದೆ ಸ್ಪಂದನಾ ಮನಸ್ಸಿಲ್ಲದ ಮನಸ್ಸಿನಿಂದ ಅಸಮಾಧಾನದಿಂದಲೇ ಬೆಡ್‌ರೂಮಿಗೆ ಹೋದಳು.

ಭಾವನಾ ಉಕ್ಕಿಬಂದ ದುಃಖವನ್ನು ತಡೆಹಿಡಿಯುತ್ತ ಸೀತಾಳ ಶವವನ್ನು ಹೊತ್ತುಕೊಂಡು ಹಿತ್ತಲುಕಡೆಗೆ ಹೋದಳು. ಸೀರೆ ರಕ್ತಮಯವಾಗಿತ್ತು. ಸೀತಾಳನ್ನು ಒಂದೆಡೆ ಇಟ್ಟು ಮನೆಯೊಳಗಿನಿಂದ ಹಾರೆ ತಂದು ಒಂದು ಗುಂಡಿ ತೋಡಿದಳು. ಪೂರ್ವಕ್ಕೆ ತಲೆಮಾಡಿ ಅದರಲ್ಲಿ ಸೀತಾಳನ್ನಿಟ್ಟು ಮಣ್ಣು ಮುಚ್ಚುತ್ತಿರಬೇಕಾದರೆ ಕಣ್ಣುಗಳಿಂದ ಉದುರಿದ ಅಶ್ರು ಬಿಂದುಗಳು ಆ ಮಣ್ಣಲ್ಲಿ ಸೇರಿಕೊಂಡವು. ಮಣ್ಣು ಮುಚ್ಚಿ ಒಂದೈದು ನಿಮಿಷ ಆ ಜಾಗವನ್ನೇ ನೆಟ್ಟದೃಷ್ಟಿಯಿಂದ ನೋಡುತ್ತ ನಿಟ್ಟುಸಿರೊಂದನ್ನು ಬಿಟ್ಟು ಆಕೆ ಮನೆಯೊಳಗೆ ಬಂದಾಗ ಬಾಗಿಲ ಬಳಿಯಲ್ಲಿ ಅದನ್ನೆಲ್ಲ ನೋಡುತ್ತ ನಿಂತಿದ್ದ ಸ್ಪಂದನಾ "ಅಮ್ಮಾ, ಚತ್ಮೇಲೆ ಎಲ್ರನ್ನೂ ಮನ್ನಿಗೆ ಆಕ್ತಾರಾ?" ಎಂದು ಕೇಳಿದಳು. ಏನು ಉತ್ತರಿಸಬೇಕೆಂದು ತಿಳಿಯದ ಭಾವನಾ "ನೀ ಯಾಕೆ ಇಲ್ಲಿಗ್ಬಂದೆ?" ಎಂದು ಗದರಿಸಿದಳು.

ರಾತ್ರಿಯಾದಂತೆ ಭಾವನಾಳ ಮನಸ್ಸಿನ ದುಃಖವೂ ಹೆಚ್ಚಾಗುತ್ತ ಹೋಯಿತು. ಗಂಡ ಬೆಂಗಳೂರಿಗೆ ಹೋಗಿ ಎರಡು ದಿನವಾಗಿತ್ತು. ಅವನು ಮರುದಿನ ಬರುವವನಿದ್ದ. ಗಂಡನ ಅನುಪಸ್ಥಿತಿಯೊಂದಿಗೆ ಸೀತಾಳ ಸಾವು ಸೇರಿ ಆಕೆಗೆ ತಡೆಯಲಾರದಷ್ಟು ದುಃಖವಾಯಿತು. ಮನೆ ಸ್ಮಶಾನವಾಗಿ ತೋರಿತವಳಿಗೆ. ಆದರೂ ಏನೋ ಒಂದಿಷ್ಟು ಅಡಿಗೆ ಮಾಡಿ ಸ್ಪಂದನಾಳನ್ನು ಊಟಕ್ಕೆ ಕರೆದರೆ ಆಕೆ ಊಟ ಮಾಡಲು ಸುತರಾಂ ಒಪ್ಪಲಿಲ್ಲ. "ಅಮ್ಮಾ ಚೀತಾ ಇಲ್ಲ. ನಾನೂ ಊಟ ಒಲ್ಲೆ" ಎಂದು ಹಟ ಹಿಡಿದಳು. ಎಷ್ಟೇ ಸಮಜಾಯಿಸಿದರೂ, ಬೆದರಿಸಿದರೂ ಒಂದು ತುತ್ತು ಸಹ ಅವಳ ಬಾಯಿಗೆ ಹೋಗಲಿಲ್ಲ. ಕೊನೆಗೆ ಬಲವಂತಮಾಡಿ ಒಂದಿಷ್ಟು ಬೋರ್ನವಿಟಾ ಕುಡಿಸಿ ಮಲಗಿಸ ಹೋದಾಗ ಒಮ್ಮಿಂದೊಮ್ಮೆಗೆ ಭಾವನಾಳ ಮೈ ಕಂಪಿಸಿತು. ಸ್ಪಂದನಾಳ ಮೈ ಸ್ವಲ್ಪ ಬೆಚ್ಚಗಿರುವಂತೆ ತೋರಿತು. ಮತ್ತೊಮ್ಮೆ ಮುಟ್ಟಿನೋಡಿದಳು. ಎರಡು ಮೂರು ಸಲ ಮುಟ್ಟಿನೋಡಿದಾಗ ಅದು ಕೇವಲ ತನ್ನ ಭ್ರಮೆಯೆಂದು ತೋರಿತವಳಿಗೆ. ಮಗುವನ್ನು ಮಲಗಿಸಿದಳು. ಹತ್ತು ಹದಿನೈದು ನಿಮಿಷಗಳಲ್ಲಿ ಮಗುವಿಗೆ ನಿದ್ರೆಯೂ ಬಂತು.

ತಾನು ಅತ್ಯಂತ ಪ್ರೀತಿಯಿಂದ ಸಾಕಿದ ಸೀತಾ ಸತ್ತು ಹೋದಳಲ್ಲಾ? ಎಂದು ದುಃಖಿಸುತ್ತ ಸೀತಾ ಮತ್ತು ಸ್ಪಂದನಾಳ ಸಲಿಗೆ, ಸ್ನೇಹ ಆಟಗಳನ್ನು ನೆನಸುತ್ತಾ ಮಧ್ಯರಾತ್ರಿಯ ತನಕ ಅತ್ತಿಂದಿತ್ತ ಹಾಸಿಗೆಯಲ್ಲಿ ಹೊರಳಾಡುತ್ತ ಕಳೆದಳು ಭಾವನಾ. ಅನಂತರ ಎಷ್ಟು ಹೊತ್ತಿಗೆ ನಿದ್ದೆ ಬಂತೆಂಬುದೇ ಅವಳಿಗೆ ತಿಳಿಯಲಿಲ್ಲ.

ಕನಸು ಕಂಡು ಎಚ್ಚರವಾಗಿ ಹತ್ತು ಹದಿನೈದು ನಿಮಿಷ ಇವೇ ಯೋಚನೆಗಳಲ್ಲಿ ಮುಳುಗಿದ್ದಳು. ಮುಂಜಾವಿನ ತಂಗಾಳಿಯ ಸ್ಪರ್ಶದಿಂದಲೋ ಏನೋ ಮತ್ತೆ ಅವಳಿಗೆ ಜೊಂಪು ಹತ್ತಿದಂತಾಯಿತು.

ಪುನಃ ಎಚ್ಚರವಾದಾಗ ಸುಮಾರಾಗಿ ಬೆಳಕು ಹರಿದಿತ್ತು. ಎದ್ದು ಸೀತಾಳನ್ನು ಹೂತ ಜಾಗದವರೆಗೆ ಹೋಗಿ ನೋಡಿಕೊಂಡು ಬಂದಳು. ಅದೇ ದುಃಖದ ಗುಂಗಿನಲ್ಲಿ ಹಲ್ಲುಜ್ಜಿ ಮುಖ ತೊಳೆಯುತ್ತಿರುವಾಗ ರಾತ್ರಿ ಸ್ಪಂದನಾ "ಚೀತಾ, ಚೀತಾ" ಎಂದು ಹೇಳಿದಂತೆ "ಅಮ್ಮಾ, ಅಮ್ಮಾಽ" ಎಂದು ಚೀರಿದಂತೆ ಕೇಳಿಸಿದ್ದು ನಿಜವೇ, ಭ್ರಮೆಯೋ ಅಥವಾ ಕನಸೇ ಎಂಬುದು ಅವಳಿಗೆ ತಿಳಿಯದಾಗಿ ಮನಸ್ಸು ಅಸಹ್ಯ ವೇದನೆಯಿಂದ ಒದ್ದಾಡತೊಡಗಿತು. ಮುಖ ತೊಳೆದುಕೊಂಡು ಬರುವಷ್ಟರಲ್ಲಿ ಪೂರ್ತಿಯಾಗಿ ಬೆಳಕು ಹರಿದಿತ್ತು. ಬೆಡ್‌ರೂಮಿಗೆ ಬಂದು ಹಣೆಗೆ ಕುಂಕುಮ ಹಚ್ಚಿಕೊಂಡು ಸ್ಪಂದನಾಳನ್ನು ಎಬ್ಬಿಸಲು 'ಸ್ಪಂದನಾ, ಸ್ಪಂದನಾಽ' ಎಂದಳು. ಆಕೆಗೆ ಎಚ್ಚರವಾಗಲಿಲ್ಲ. ಮಂಚದ ಹತ್ತಿರಹೋಗಿ ಅವಳನ್ನು ಅಲುಗಾಡಿಸುತ್ತ "ಸ್ಪಂದನಾ, ಏ ಸ್ಪಂದನಾ, ಏಳು." ಎಂದಾಗಲೂ ಎಚ್ಚರವಾಗಲಿಲ್ಲ. ಜೋರಾಗಿ ಅಲುಗಾಡಿಸಿದಾಗ ಮಗ್ಗುಲಾಗಿ ಮಲಗಿದ್ದ ಸ್ಪಂದನಾ ಮರದ ಕೊರಡಿನಂತೆ ಅಂಗಾತ ಮಲಗಿದಳು.

"ಸ್ಪಂದನಾಽ"

ಚೀರಾಟದೊಂದಿಗೆ ಭಾವನಾ ಅವಳ ಮೇಲೆಯೇ ಕುಸಿದು ಬಿದ್ದಳು! ❀

ತ. ಕು. ನಾಗಭೂಷಣ

# ವೆನೆಡಿಯಂ
## ಔದ್ಯೋಗಿಕ ಕ್ಷೇತ್ರಕ್ಕೊಂದು ವಿಟಾಮಿನ್ನು

'ಮೋಟಾರ್ ವಾಹನಗಳ ರಾಜ' ಹೆನ್ರಿ ಫೋರ್ಡ್ ೧೯೦೫ರಲ್ಲಿ ಮೋಟಾರ್ ವಾಹನಗಳ ದೊಡ್ಡ ರೇಸಿನ ಪಂದ್ಯವನ್ನು ವೀಕ್ಷಿಸುತ್ತಿದ್ದ. ಅಂತಹ ಪಂದ್ಯಗಳಲ್ಲಿ ಸರ್ವೇ ಸಾಧಾರಣವಾಗಿ ಸಂಭವಿಸುವ ಡಿಕ್ಕಿ ಅಪಘಾತ ಅವನ ಕಣ್ಣೆದುರಿನಲ್ಲೇ ಸಂಭವಿಸಿತು. ಅಪಘಾತ ನಡೆದ ಸ್ಥಳಕ್ಕೆ ಹೋದ ಫೋರ್ಡ್, ಅಲ್ಲಿ ಮುರಿದು ಬಿದ್ದಿದ್ದ ಕಾರಿನ ಭಾಗವನ್ನು ಕೈಗೆತ್ತಿಕೊಂಡು ನೋಡಿದಾಗ ಫ್ರೆಂಚ್ ಕಾರೊಂದರ ಕವಾಟದ ಕದರಣಿಗೆ (Valve Spindle) ಅದೆಂದು ತಿಳಿಯಿತು. ಅದರಲ್ಲಿ ಅಂತಹ ವಿಶೇಷವೇನೂ ಇರದಿದ್ದರೂ ಕುತೂಹಲಿಯಾಗಿದ್ದ ಫೋರ್ಡ್ ಅದರ ಹಗುರತೆ ಮತ್ತು ಗಡಸುತನವನ್ನು ಗುರುತಿಸುತ್ತಾ ದಂಗಾಗಿದ್ದನು. ಅವನದನ್ನು ಪ್ರಯೋಗಶಾಲೆಯೊಂದಕ್ಕೆ ಕಳುಹಿಸಿ ವಿಶ್ಲೇಷಿಸಿದಾಗ, ಆ ಭಾಗವನ್ನು ಮಾಡಿರುವ ಉಕ್ಕಿನಲ್ಲಿ 'ವೆನೆಡಿಯಂ' ಲೋಹದ ಮಿಶ್ರಣ ಇರುವುದು ತಿಳಿಯಿತು. ಮುಂದೆ "ವೆನೆಡಿಯಂ ಇರದಿದ್ದರೆ ಮೋಟಾರ್ ವಾಹನಗಳಿರುತ್ತಿರಲಿಲ್ಲ" ಎಂದವನೇ ಫೋರ್ಡ್.

ಮೋಟಾರ್ ವಾಹನಗಳ ತಯಾರಿಕೆಯಲ್ಲಿ ದೊಡ್ಡ ಪ್ರಮಾಣದಲ್ಲಿ ಅಂತಹ ಉಕ್ಕನ್ನು ಬಳಸಬಹುದೆಂಬ ಯೋಚನೆ ಫೋರ್ಡ್‌ಗೆ ಬಂತು. ವೆನೆಡಿಯಂ ಮಿಶ್ರಿತ ಉಕ್ಕನ್ನು ಬಳಸಿ ಮಾಡಿದ್ದ ವಾಹನಗಳು ಅತಿ ಹಗುರವಾಗುವುದರಿಂದ ಹೆಚ್ಚಿನ ಪ್ರಮಾಣದಲ್ಲಿ ಉಕ್ಕನ್ನು ಉಳಿಸಬಹುದು. ಅದರಿಂದ ವಾಹನಗಳನ್ನು ಕಡಿಮೆ ಬೆಲೆಗೆ ತಯಾರಿಸಬಹುದಾದ ವಿಷಯ ಫೋರ್ಡ್‌ನ ಯೋಚನೆಯನ್ನು ಸರಿಯಾಗಿಸಿತ್ತು. ಕಾರು ಅಗ್ಗವಾಗುವುದರಿಂದ ಬೇಡಿಕೆ ಹೆಚ್ಚಾಗಿ ಹೆಚ್ಚಿನ ಲಾಭ ಮಾಡಿಕೊಳ್ಳಬಹುದೆಂಬುದನ್ನು ಫೋರ್ಡ್ ಅರಿತುಕೊಂಡನು. ತನ್ನ ಯೋಜನೆಯಂತೆ ಮುಂದುವರಿಯಲು ಅವನು ಬಹಳ ತೊಂದರೆಗಳನ್ನು ಎದುರಿಸಬೇಕಾಯಿತು. ಆದರೆ ಅನೇಕ ವರ್ಷಗಳ ನಂತರ ಫ್ರಾನ್ಸಿನ ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ ಫೋರ್ಡ್ ಹೊರತಂದ ಕಾರುಗಳ ಕೆಲವು ಭಾಗಗಳನ್ನು ಪರೀಕ್ಷೆಗೆ ಒಳಪಡಿಸಿದಾಗ ಅಮೇರಿಕದ ಉಕ್ಕು ಫ್ರಾನ್ಸಿನದಕ್ಕಿಂತ ಹಲವಾರು ವಿಶೇಷ ಗುಣಗಳನ್ನು ಹೊಂದಿರುವುದು ಸಿದ್ಧವಾಯಿತು.

ಹೀಗೆ ಮೋಟಾರ್ ವಾಹನ ಉತ್ಪಾದನೆಯಲ್ಲಿ ಹೊಸ ಅಧ್ಯಾಯವನ್ನಾರಂಭಿಸಿದ 'ವೆನೆಡಿಯಂ' ಲೋಹದ ಹುಟ್ಟಿನ ಕಥೆ ಬಹಳ ಕುತೂಹಲ

ಕಾರಿಯಾಗಿದೆ. ಮೆಕ್ಸಿಕೋದ ಖ್ಯಾತ ರಸಾಯನ ಶಾಸ್ತ್ರಜ್ಞ ಹಾಗೂ ಧಾತುಶಾಸ್ತ್ರಜ್ಞ ಆಂದ್ರೆ ಮ್ಯಾನ್ಯುಯೆಲ್ ಡೆಲ್ ರಯೋ ೧೮೦೧ರಲ್ಲಿ ಮೆಕ್ಸಿಕೋದ ಕಂದು ಬಣ್ಣದ ಸೀಸದ ಅದಿರುಗಳನ್ನು ಅಭ್ಯಸಿಸುತ್ತಿರುವಾಗ ಅಲ್ಲಿಯುವರೆಗೆ ಪತ್ತೆಯಾಗದ ಲೋಹವೊಂದು ಅದರಲ್ಲಿರುವುದನ್ನು ಕಂಡುಹಿಡಿದು ಅದರ ಸಂಯುಕ್ತ ವಸ್ತುಗಳು ಹಲವಾರು ಬಣ್ಣಗಳಲ್ಲಿ ದೊರೆತವು. ಆದ್ದರಿಂದಲೇ ಅವನು ಅದನ್ನು ಹಲವಾರು ಬಣ್ಣದ್ದಾಗಿರುವುದೆಂದು 'ಅರ್ಥ ಬರುವ' ಫ್ಯಾನ್ ಕ್ರೋಮಿಯಂ ಎಂದು ಕರೆದನು. ನಂತರ 'ಕೆಂಪು' ಎಂದು ಅರ್ಥ ಕೊಡುವ 'ಎರಿಟ್ರೊನಿಯಂ' ಎಂಬ ಹೆಸರಿಟ್ಟನು.

ಆದರೆ ಡೆಲ್ ರಯೋ ತನ್ನ ಸಂಶೋಧನೆಯನ್ನು ವೈಜ್ಞಾನಿಕವಾಗಿ ಸಿದ್ಧಪಡಿಸಲಾಗಲಿಲ್ಲ. ಕೊನೆಗೆ ೧೮೦೫ರಲ್ಲಿ ಆ ಮೂಲವಸ್ತು, ಕೆಲವೇ ವರ್ಷಗಳ ಹಿಂದೆ ಪತ್ತೆಯಾಗಿದ್ದ ಕ್ರೋಮಿಯಂ ಎಂದು ತೀರ್ಮಾನಿಸಿದನು.

ಸುಮಾರು ೩೦ವರ್ಷಗಳ ನಂತರ ಸ್ವೀಡನ್ನಿನಲ್ಲಿ ಕೆಲವು ಕಬ್ಬಿಣದ ಅದುರಿನ ನಿಕ್ಷೇಪಗಳಿಂದ ಹೊರ ತೆಗೆದ ಲೋಹವೊಂದನ್ನು ಸುಲಭವಾಗಿ ಬೇರೆ ಬೇರೆ ಆಕಾರಕ್ಕೆ ತರಬಹುದೆಂಬ ಕುತೂಹಲಕಾರಿ ಗುಣವನ್ನು ಲೋಹಶಾಸ್ತ್ರಜ್ಞರು ಗಮನಿಸಿದರು. ಇದರ ಬಗ್ಗೆ ಹೆಚ್ಚಿನ ಸಂಶೋಧನೆ ಆರಂಭಿಸಿದ ಸ್ವೀಡಿಶ್ ವಿಜ್ಞಾನಿ ನೀಲ್ಸ್ ಸೆಫ್‌ಸ್ಟ್ರೋಮ್ ಆ ಲೋಹದ ಅದಿರನ್ನು ರಸಾಯನಿಕ ವಿಶ್ಲೇಷಣೆಗೆ ಒಳಪಡಿಸಿದ. ನಂತರ ಡೆಲ್‌ರಯೋ ಕ್ರೋಮಿಯಂ ಎಂದು ತಪ್ಪಾಗಿ ತಿಳಿದಿದ್ದ ಮೂಲವಸ್ತು ನಿಜವಾಗಿಯೂ ಹೊಸದಾದ ಲೋಹವಾಗಿತ್ತೆಂದು ಸಿದ್ಧಪಡಿಸಿ ಅದಕ್ಕೆ 'ವೆನೆಡಿಯಂ'ಎಂದು ಹೆಸರಿಟ್ಟ.

ರಶಿಯದ ಉರಲ್ ಪರ್ವತ ಶ್ರೇಣಿಯಲ್ಲಿರುವ ಬೆರೆಜೋವ್ ಗಣಿಗಳಲ್ಲಿ ದೊರೆಯುವ ಸೀಸದ ಅದಿರಿನಲ್ಲಿ ೧೮೩೩ರಲ್ಲಿ ಮೊದಲ ಬಾರಿಗೂ ೧೮೩೯ರಲ್ಲಿ ಮರಳು ಗಟ್ಟಿಯಾಗಿ ರೂಪುಗೊಂಡ ಶಿಲೆ 'ಪರ್ಮ್'ನಲ್ಲೂ ವೆನೆಡಿಯಂನ್ನು ಪತ್ತೆ ಮಾಡಲಾಯಿತು. ಕಬ್ಬಿಣ ಮತ್ತು ತಾಮ್ರದ ಮಿಶ್ರಲೋಹಗಳಲ್ಲಿ ವೆನೆಡಿಯಂನ ಉಪಯುಕ್ತ ಪರಿಣಾಮಗಳನ್ನು ರಶಿಯದ ಎಂಜಿನಿಯರ್ ಶುಬಿನ್ ಆಗಲೇ ಗಮನಿಸಿದ್ದನು, "ಕಪ್ಪು ತಾಮ್ರ, ತಾಂಡವಾಳ(Cast Iron) ಮತ್ತು ಪರಿಷ್ಕೃತ ತಾಮ್ರ, ವೆನೆಡಿಯಂನ ಮಿಶ್ರ ಲೋಹಗಳಿಂದೂ, ಬಹುಶಃ ಅದರಿಂದಲೇ ಈ ಮಿಶ್ರಲೋಹಗಳು ಬಹಳ ಗಟ್ಟಿಯಾಗುವುದೆಂದೂ" ಲೇಖನದಲ್ಲಿ ಬರೆದನು.

ಶುದ್ಧ ವೆನೆಡಿಯಂನ್ನು ಬೇರ್ಪಡಿಸಲು ಬಹಳ ವರ್ಷಗಳವರೆಗೆ ಯಾರಿಂದಲೂ ಸಾಧ್ಯವಾಗಿರಲಿಲ್ಲ. ೧೮೬೯ರಲ್ಲಿ ಬ್ರಿಟಿಶ್ ರಸಾಯನಶಾಸ್ತ್ರಜ್ಞ ಹೆನ್ರಿ ರೋಸ್ಕೊ ಅತ್ಯಂತ ಆಳವಾದ ಸಂಶೋಧನೆ ಮಾಡಿದನಂತರ ವೆನೆಡಿಯಂನ್ನು ಪಡೆಯುವುದರಲ್ಲಿ ಸಫಲನಾದ.

ಆರಂಭದಲ್ಲಿ ಪ್ರತಿಶತ ನಾಲ್ಕರಷ್ಟು ಕಲಬೆರಕೆ ಹೊಂದಿದ ವೆನೆಡಿಯಂನ್ನು ಪರಿಶುದ್ಧವೆಂದು ಪರಿಗಣಿಸಲಾಗುತ್ತಿತ್ತು. ಈ ಲೋಹದ ಒಂದು ವೈಶಿಷ್ಟ್ಯವೆಂದರೆ ಸಾರಜನಕ ಆಮ್ಲಜನಕ ಮತ್ತು ಜಲಜನಕಗಳಂತಹ ವಸ್ತುಗಳು ಎಷ್ಟೇ ಕಡಿಮೆ ಪ್ರಮಾಣದಲ್ಲಿ ಸೇರಿದರೂ ಅದು ಗಟ್ಟಿ ಹಾಗೂ ಭಂಗುರವಾಗುವುದಲ್ಲದೆ ಲೋಹದ ಆಕಾರ ಬದಲಿಸುವದು ಬಹಳ ಕಠಿಣವಾಗುತ್ತದೆ. ಹೆಚ್ಚಿನ ಉಷ್ಣತೆಯಲ್ಲಿ ಅಸಾಧಾರಣವಾದ ಚಟುವಟಿಕೆಯನ್ನು ಹೊಂದುವುದರಿಂದ ಶುದ್ಧ ವೆನೆಡಿಯಂನ್ನು ತಯಾರಿಸುವುದು ಕಷ್ಟವೆಂದು ಪರಿಗಣಿಸಲಾಗಿತ್ತು. ವೆನೆಡಿಯಂನ್ನು ದ್ರವೀಕರಿಸಲು ಬಳಸಬಹುದಾದ ಮೂಸೆಗಾಗಿ ಸರಿಯಾದ ಲೋಹವನ್ನು ಹುಡುಕುವುದೇ ಕಷ್ಟವಾಯಿತು, ಏಕೆಂದರೆ, ವೆನೆಡಿಯಂ ಮೂಸೆಯ ಲೋಹದೊಡನೆ ವರ್ತಿಸಿ ಅಶುದ್ಧಗೊಳ್ಳುತ್ತಿತ್ತು. ಅದರಿಂದಾಗಿ ವಿಜ್ಞಾನಿಗಳು ಬೇರೊಂದು ಮಾರ್ಗವನ್ನು ಹುಡುಕಬೇಕಾಯಿತು. ಇತ್ತೀಚೆಗೆ ವಿದ್ಯುದ್ವಿಭಜನೆಯಿಂದ

೯೯.೯೯% ಶುದ್ಧ ವೆನೆಡಿಯಂನ್ನು ಪಡೆಯುವ ಪ್ರಧಾನ ಕ್ರಮವೊಂದನ್ನು ಕಂಡುಹಿಡಿಯಲಾಗಿದೆ. ಈ ಸಂಶೋಧನೆ ಅತ್ಯಂತ ಮಹತ್ವಪೂರ್ಣ ಎನಿಸಿದೆ. ಬೆಳ್ಳಿ — ಬೂದಿ ಬಣ್ಣದ ಶುದ್ಧ ವೆನೆಡಿಯಂ ಅತ್ಯಂತ ಮೆದುವಾಗಿರುವುದರಿಂದ ಅದನ್ನು ಕಾಯಿಸಿ ಬಡಿದು ಬೇರೆ ಬೇರೆ ಆಕಾರಕ್ಕೆ ತರುವುದು ಸುಲಭ.

ಬಹಳ ಕಾಲ ವೆನೆಡಿಯಂನ ಔದ್ಯೋಗಿಕ ಉಪಯುಕ್ತತೆಯನ್ನು ಕಂಡುಕೊಳ್ಳಲಾಗಿರಲಿಲ್ಲ. ೧೯೦೭ರಲ್ಲಿ ಇಡೀ ಪ್ರಪಂಚದಲ್ಲಿ ಅದರ ಉತ್ಪಾದನೆ ಕೇವಲ ೩ ಟನ್ ಆಗಿದ್ದು, ಬೆಲೆ ೧ ಕಿಲೋಗ್ರಾಂಗೆ ಸುಮಾರು ರೂ. ೫,೦೦,೦೦೦ ಆಗಿತ್ತು. ವೆನೆಡಿಯಂನ ಇಷ್ಟು ಕಡಿಮೆ ಪ್ರಮಾಣದ ಉತ್ಪಾದನೆ ಹಾಗೂ ಹೆಚ್ಚಿನ ಬೆಲೆಗೆ ಕಾರಣವೇನೆಂದರೆ ಭೂಮಿಯ ಪದರದಲ್ಲಿ ವೆನೆಡಿಯಂ ಸಾಕಷ್ಟಿದ್ದರೂ (ಸೀಸದ ೧೫ ಪಟ್ಟು ಮತ್ತು ಬೆಳ್ಳಿಯ ೨೦೦೦ ಪಟ್ಟು) ಅದರ ನಿಕ್ಷೇಪಗಳು ಸುಲಭವಾಗಿ ಸಿಗದಿರುವುದರಿಂದಲೇ ಅಪರೂಪದ ಲೋಹವೆನಿಸಿಕೊಳ್ಳುತ್ತದೆ. ಪ್ರತಿಶತ ಒಂದರಷ್ಟು ವೆನೆಡಿಯಂ ಹೊಂದಿರುವ ಅದಿರು, ಅಸಾಧಾರಣವಾದ, ಧಾರಾಳ ಪ್ರಮಾಣದಲ್ಲಿ ಈ ಲೋಹವನ್ನು ಹೊಂದಿರುವುದಾಗಿ ಪರಿಗಣಿಸಲ್ಪಡುತ್ತದೆ. ಕೇವಲ ೦.೧% ಭಾಗ ವೆನೆಡಿಯಂ ಹೊಂದಿರುವ ಅದಿರನ್ನು ಔದ್ಯೋಗಿಕ ಪ್ರಮಾಣದಲ್ಲಿ ಪ್ರತಿಕ್ರಿಯ ವಿಧಾನಕ್ಕೆ ತೆಗೆದುಕೊಳ್ಳಲಾಗುತ್ತಿದೆ.

ಭೂಮಿಯನ್ನು ಅಪ್ಪಳಿಸುವ ಉಲ್ಕೆಗಳಲ್ಲಿ ವೆನೆಡಿಯಂನ ಪ್ರಮಾಣ ಭೂಪದರದಲ್ಲಿರುವ ಪ್ರಮಾಣಕ್ಕಿಂತ ೨–೩ ರಷ್ಟಿರುವುದೆಂಬುದು ಕುತೂಹಲಕರವಾದ ವಿಷಯ. ಸೌರರೋಹಿತ (Solar Spectrum)ದಲ್ಲಿ ಕಾಣುವ ಅನೇಕ ಗೆರೆಗಳಿಂದ ನಿರ್ಧರಿಸಿದಲ್ಲಿ, ಸೌರವ್ಯೂಹದಲ್ಲಿ ನಮ್ಮ ಗ್ರಹಮಂಡಲಕ್ಕಿಂತ ಹೆಚ್ಚಿನ ಅಂಶದಲ್ಲಿ ವೆನೆಡಿಯಂ ಇದೆಯೆನ್ನಬಹುದು. ಮುಂದೆ ಮಂಗಳ ಅಥವಾ ಶುಕ್ರಗ್ರಹದಿಂದ ವೆನೆಡಿಯಂ ಹೊಂದಿರುವ ಅದಿರನ್ನು ಕ್ರಮವಾಗಿ ಭೂಮಿಗೆ ಸಾಗಿಸಿ ತರಬಹುದಾದ ಸಾಧ್ಯತೆ ಇದ್ದರೂ, ಸದ್ಯಕ್ಕೆ ಭೂಮಿಯಲ್ಲಿ ಸಿಗುವ ಖನಿಜ ಸಂಪತ್ತನ್ನೇ ಅವಲಂಬಿಸಬೇಕಾಗಿದೆ.

ವೆನೆಡಿಯಂನ್ನು ಅದಿರಿನಿಂದ ಹೊರತೆಗೆಯುವುದು ಕಷ್ಟಕರವಾದುದರಿಂದಲೇ ಹಲವಾರು ದಶಕಗಳ ವರೆಗೆ ಈ ಅದ್ಭುತ ಲೋಹದ ಉಪಯುಕ್ತತೆಯನ್ನು ಕಂಡುಕೊಳ್ಳಲಾಗಿರಲಿಲ್ಲ. ತಾಂತ್ರಿಕ ಕ್ಷೇತ್ರದಲ್ಲಿ ಈಗಿನ ತೀವ್ರ ಪ್ರಗತಿ ಔದ್ಯೋಗಿಕ ಕ್ಷೇತ್ರದ ಬಾಗಿಲನ್ನು ವೆನೆಡಿಯಂಗಾಗಿ ದೊಡ್ಡದಾಗಿ ತೆರೆದಿದೆ. ಉಕ್ಕಿನಲ್ಲಿ ಅತ್ಯಂತ ಉಪಯುಕ್ತ ಗುಣಗಳನ್ನು ತರುವುದರಿಂದಲೇ, ವೆನೆಡಿಯಂ ಉಕ್ಕಿಗೆ ಸಂಬಂಧಿಸಿದಂತೆ 'ವಿಟಮಿನ್'ನ ಪಾತ್ರ ವಹಿಸುತ್ತದೆ ಎನ್ನಬಹುದಾಗಿದೆ.

ಶೇಕಡಾ ಒಂದು ಭಾಗದಷ್ಟು ವೆನೆಡಿಯಂ ಬೆರೆಸಿದಾಗ ಉಕ್ಕಿನ ಗುಣಗಳು ಬದಲಾಗಿ ಗಟ್ಟಿಯಾಗುವುದಲ್ಲದೆ, ಧಕ್ಕೆ ಮತ್ತು ಬಗ್ಗುವುದನ್ನು ವಿರೋಧಿಸುವ ಶಕ್ತಿಯನ್ನು ಪಡೆಯುತ್ತದೆ. ಅಂತಹ ಉಕ್ಕು ಸುಲಭವಾಗಿ ಸವೆಯುವುದಿಲ್ಲ, ಛಿದ್ರವೂ ಆಗುವುದಿಲ್ಲ, ಮೋಟಾರ್ ಕಾರುಗಳ ಭಾಗಗಳು ಮುಖ್ಯವಾಗಿ ಇವೇ ಗುಣಗಳನ್ನು ಹೊಂದಿರಬೇಕು. ಎಂಜಿನ್, ವಾಲ್ವ್, ಸ್ಪ್ರಿಂಗ್, ಆಕ್ಸಲ್ ಮತ್ತು ಗೇರ್‌ಗಳಂತಹ ಮುಖ್ಯ ಭಾಗಗಳನ್ನು ತಯಾರಿಸುವಾಗ ಅವು ತಮ್ಮ ನಿಜವಾದ ಸಾಮರ್ಥ್ಯಕ್ಕೆ ಮೊದಲೇ ನಿಷ್ಪ್ರಯೋಜಕವಾಗದಂತೆ ಎಚ್ಚರಿಕೆ ವಹಿಸಬೇಕಾಗುತ್ತದೆ. ವೆನೆಡಿಯಂ ಉಕ್ಕಿನಿಂದ ತಯಾರಿಸಲಾದ ಭಾಗಗಳು ಈ ಅಮೂಲ್ಯ ಗುಣ ಹೊಂದಿರುತ್ತವೆ. ಮೋಟಾರ್ ವಾಹನಗಳ ಆ್ಯಕ್ಸಲ್‌ಗಳಲ್ಲಿ ಅತ್ಯಗತ್ಯವಾಗಿ ಇರಬೇಕಾದ ಗುಣಗಳನ್ನು ಕಬ್ಬಿಣ ಹಾಗೂ ಉಕ್ಕಿಗೆ ಕೊಡುವ ವೆನೆಡಿಯಂನ ಶಕ್ತಿ ಅಪಾರವೆನ್ನಬಹುದು.

ಮೊದಲನೆಯ ಮಹಾಯುದ್ಧದ ಸಮಯದಲ್ಲಿ ಸಾಧಾರಣವಾಗಿ ಮಶಿನ್‌ಗನ್‌ಗಳನ್ನು ಹೊತ್ತಿರುತ್ತಿದ್ದ ಫ್ರೆಂಚ್ ವಿಮಾನವೊಂದು

ಬಯಲು ಪ್ರದೇಶದಲ್ಲಿ ಬಳಸುವ ದೊಡ್ಡ ಫೀಲ್ಡ್ ಗನ್‌ಗಳಿಂದ ಸಜ್ಜುಗೊಂಡು ಬಂದು ಜರ್ಮನ್‌ರನ್ನು ವಿಮಂಚನೆಗೀಡುಮಾಡಿತು. ವಿಮಾನವೊಂದರಲ್ಲಿ ಇಂತಹ ದೊಡ್ಡ ಗನ್ನನ್ನು ಏರಿಸಿ ಇಟ್ಟದ್ದಾದರೂ ಹೇಗೆಂದು ಎಲ್ಲರೂ ಆಲೋಚಿಸುವಂತಾಯಿತು. ಹಾರಾಡುವ ಪುಸ್ತಕದ ಪೆಟ್ಟಿಗೆಗಳೆನಿಸಿಕೊಂಡಿದ್ದ ಇಂತಹ ವಿಮಾನದ ಎತ್ತುವ ಶಕ್ತಿ ಬಹಳ ಕಡಿಮೆ. ಕೊನೆಗೆ, ಕಡಿಮೆ ತೂಕವುಳ್ಳದ್ದಾದರೂ ಅಸಾಧಾರಣ ಶಕ್ತಿಯನ್ನು ಪಡೆದಿದ್ದ ವೆನೆಡಿಯಂ ಮಿಶ್ರಿತ ಉಕ್ಕಿನಿಂದ ಈ ಫೀಲ್ಡ್‌ಗನ್‌ಗಳನ್ನು ಎರಕ ಹೊಯ್ದಿದ್ದು ಪತ್ತೆಯಾಯಿತು. ಅವುಗಳ ಸಹಾಯದಿಂದ ಜರ್ಮನ್ ವಿಮಾನಗಳ ಮೇಲೆ ಗುಂಡಿನ ಮಳೆ ಸುರಿಸಲು ಸಾಧ್ಯವಾಗಿತ್ತು.

ಮುಂದೆ ಸೈನಿಕರ ಶಿರಸ್ತ್ರಾಣಗಳನ್ನು ವೆನೆಡಿಯಂ ಉಕ್ಕಿನಿಂದ ತಯಾರಿಸಲು ಆರಂಭಿಸಿದರು. ಅವು ತೆಳುವಾಗಿದ್ದು ಹಗುರವಾಗಿದ್ದರೂ ಬಂದೂಕಿನ ಗುಂಡು ಹಾಗೂ ಅದರ ಸಿಡಿತದಿಂದ ಹೊರಬೀಳುವ ಚೂಪಾದ ಚೂರುಗಳಿಂದ ನೆಚ್ಚಬಹುದಾದ ರಕ್ಷಣೆಯನ್ನು ಕೊಡುತ್ತಿದ್ದವು. ನಂತರ ಫಿರಂಗಿ ಗಾಡಿಯೊಳಗಿನ ಸಿಬ್ಬಂದಿಗಳನ್ನು ಎದುರಾಳಿಗಳ ಗುಂಡಿನಿಂದ ಸಂರಕ್ಷಿಸುವಲ್ಲಿ ಬೇಕಾದ ಕವಚಗಳನ್ನು ಸರಿಯಾದ ವಸ್ತುವಿನಿಂದ ತಯಾರಿಸಬೇಕಾಯಿತು. ಇದಕ್ಕಾಗಿ ಶೆಫೀಲ್ಡ್‌ನ ಲೋಹಶಾಸ್ತ್ರಜ್ಞರು ಸಾಕಷ್ಟು ಪ್ರಮಾಣದಲ್ಲಿ ಸಿಲಿಕಾನ್ ಹಾಗೂ ನಿಕೆಲ್ ಹೊಂದಿರುವ ಉಕ್ಕನ್ನು ತಯಾರಿಸಿದರು. ಆದರೆ ಪ್ರಯೋಗಗಳಲ್ಲಿ ಗುಂಡುಗಳ ಹೊಡೆತಕ್ಕೆ ಒಳಪಡಿಸಿದಾಗ ಅಂತಹ ಉಕ್ಕಿನ ತಗಡುಗಳನ್ನು ಗುಂಡುಗಳು ಸುಲಭವಾಗಿ ಭೇದಿಸಿಕೊಂಡು ಹೋದುವು. ಆಗಲೇ ಕೇವಲ ೦.೨% ವೆನೆಡಿಯಂ ಮಿಶ್ರಿತ ಉಕ್ಕನ್ನು ಬಳಸಬೇಕೆಂದು ನಿರ್ಧರಿಸಲಾಯಿತು. ನಂತರ ಶೇಕಡಾ ೯೯ ಪ್ರಯೋಗಗಳಲ್ಲಿ ಫಲಿತಾಂಶಗಳು ನಿರೀಕ್ಷೆಯನ್ನು ಮೀರಿ ವೆನೆಡಿಯಂ ಉಕ್ಕು ಅಸಾಧಾರಣವೆಂದು ಸಿದ್ಧಪಟ್ಟಿತು.

ಹೀಗೆ ರಕ್ಷಣೆಯಲ್ಲಿಯೂ ವೆನೆಡಿಯಂ ಕೆಲಸ ಮಾಡಲು ಆರಂಭಿಸಿತು. ಅಮೇರಿಕ, ಫ್ರಾನ್ಸ್ ಮತ್ತು ಇಂಗ್ಲೆಂಡ್‌ನ ಅನೇಕ ಕಾರ್ಖಾನೆಗಳು ಹಲವಾರು ಕ್ಷೇತ್ರಗಳಲ್ಲಿ ವೆನೆಡಿಯಂನ್ನು ಬಳಸಲು ಮುಂದೆ ಬಂದವು. ಆದರೆ ಈ ಕ್ಷೇತ್ರದಲ್ಲಿ ಪರಿಣತಿ ಪಡೆದಿರುವರೆಂದು ಹೆಸರಾದ ಜರ್ಮನಿಯ ಲೋಹಶಾಸ್ತ್ರಜ್ಞರು ಮಾತ್ರ ಮಿಶ್ರಲೋಹಗಳಲ್ಲಿ ವೆನೆಡಿಯಂನ್ನು ಬಳಸುವಲ್ಲಿ ಸಂದೇಹವಾದಿಗಳಾದರು. ಜರ್ಮನಿಯ ಕಾರ್ಖಾನೆಯೊಂದು ವೆನೆಡಿಯಂನ್ನು ಅದಿರಿನಿಂದ ಹೊರತೆಗೆಯುವುದು ಉಪಯೋಗವಿಲ್ಲವೆಂದು ಹೇಳಿಕೆ ನೀಡಿತು. ಇದು ವಿರೋದಾಭಾಸವಾಗಿ ಕಂಡಿತು.

ಆದರೆ ಈ ರಹಸ್ಯವನ್ನು ಕೆಲವೇ ದಿನಗಳಲ್ಲಿ ಭೇದಿಸಲಾಯಿತು. ತಮ್ಮದೇ ಆದ ಖನಿಜ ನಿಕ್ಷೇಪಗಳಿರದ ಕಾರಣದಿಂದ ಜರ್ಮನ್‌ರು ಅದಿರನ್ನು ಆಮದು ಮಾಡಿಕೊಳ್ಳಬೇಕಾಗಿತ್ತು. ಆದ್ದರಿಂದ ಜಾಗತಿಕ ಮಾರುಕಟ್ಟೆಯಲ್ಲಿ ಅದರ ಬೆಲೆ ಏರುವುದನ್ನು ತಡೆಗಟ್ಟುವ ಯೋಜನೆ ಮಾಡಿದರು; ಔದ್ಯೋಗಿಕ ಕ್ಷೇತ್ರದಲ್ಲಿ ವೆನೆಡಿಯಂ ಉಕ್ಕಿನ ಬಳಕೆಯನ್ನು ನಿಲ್ಲಿಸಲು ಪ್ರಯತ್ನಿಸಿದರು. ವೆನೆಡಿಯಂನಷ್ಟೇ ಪರಿಣಾಮಕಾರಿಯಾದ ಮೂಲವಸ್ತುಗಳಿಗಾಗಿ ಹುಡುಕುವುದರಲ್ಲಿ ನಿರತರಾಗಿದ್ದ ಅವರ ಪ್ರಯತ್ನ ವಿಫಲವಾಯಿತು. ಮುಂದೆ ವೆನೆಡಿಯಂನ ಉತ್ಪಾದನೆ ವರ್ಷದಿಂದ ವರ್ಷಕ್ಕೆ ಏರುತ್ತಾ ಹೋಯಿತು.

ಇಂದು ವೆನೆಡಿಯಂನ್ನು ಬಳಸುತ್ತಿರುವ ಪ್ರತಿಯೊಂದು ಔದ್ಯೋಗಿಕ ಕ್ಷೇತ್ರವನ್ನು ಹೆಸರಿಸುವುದು ಕಷ್ಟ. ರೈಲು ಮತ್ತು ವಿಮಾನಗಳ ತಯಾರಿಕೆ, ಆಕಾಶವಾಣಿ, ಎಂಜಿನಿಯರಿಂಗ್ ಮತ್ತು ರಕ್ಷಣಾ ಯಂತ್ರೋಪಕರಣಗಳ ಕೈಗಾರಿಕೆಗಳು ವೆನೆಡಿಯಂನ ಪ್ರಧಾನ ಬಳಕೆದಾರರ ಗುಂಪಿಗೆ ಸೇರುತ್ತವೆ. ಪಿಸ್ಟನ್ ರಿಂಗ್‌ಗಳು, ನಮೂನೆಯಂತೆ ಆಕಾರ ಕೊಡುವ ಅಚ್ಚೊತ್ತು ಹಾಗೂ ತಗಡುಗಳನ್ನು ತಯಾರಿ-

ಸಲು ಬಳಸುವ ರೋಲ್‌ಗಳ ತಯಾರಿಕೆಯಲ್ಲಿ ಬೇಕಾಗುವ ಕಬ್ಬಿಣದಲ್ಲಿ ವೆನೆಡಿಯಂ 'ಸೇವೆ' ಸಲ್ಲಿಸುತ್ತಿದೆ.

ವೆನೆಡಿಯಂ ಕೇವಲ ಉಕ್ಕಿನ ವಿಟಮಿನ್ ಲೋಹವಾಗಿ ಮಾತ್ರ ಕೆಲಸ ಮಾಡುತ್ತಿಲ್ಲ. ವೆನೆಡಿಯಂ ಲವಣಗಳನ್ನು ಹಸಿರು, ಹಳದಿ, ಕೆಂಪು, ಕಪ್ಪು ಮತ್ತು ಚಿನ್ನದ ಬಣ್ಣದ ರಂಗುಗಳು ಮತ್ತು ವಿಶೇಷ ಶಾಯಿಗಳು, ಗಾಜು ಹಾಗೂ ಪಿಂಗಾಣಿಗಳ ತಯಾರಿಕೆಯಲ್ಲಿ ಸಫಲವಾಗಿ ಉಪಯೋಗಿಸಲಾಗಿದೆ. ಸೆಫ್‌ಸ್ಟ್ರೋವ್ ವೆನೆಡಿಯಂನ್ನು ಕಂಡುಹಿಡಿದ ಕೆಲವೇ ದಿವಸಗಳಲ್ಲಿ ವೆನೆಡಿಯಂನ ಪ್ರಾಯೋಗಿಕ ಉಪಯೋಗ ನಿಜವಾಗಿಯೂ ವಿಶೇಷ ಬಗೆಯ ಪಿಂಗಾಣಿಗಳ ತಯಾರಿಕೆಯಿಂದಲೇ ಆರಂಭವಾಯಿತು. ವೆನೆಡಿಯಂನ ಸಂಯುಕ್ತ ವಸ್ತುಗಳಿಂದ ಪಿಂಗಾಣಿ ಮತ್ತು ಮಣ್ಣಿನಿಂದ ಮಾಡಿದ ವಸ್ತುಗಳಿಗೆ ಚಿನ್ನದ ಮೆರಗು ಹಾಗೂ ಗಾಜಿಗೆ ಹಸಿರು ಅಥವಾ ನೀಲಿಯ ಬಣ್ಣದ ಛಾಯೆ ನೀಡುವಲ್ಲಿ ಬಳಸಲಾಗುತ್ತಿತ್ತು.

೧೮೪೭ ರಲ್ಲಿ ರಶಿಯದ ಪ್ರಸಿದ್ಧ ರಸಾಯನ ಶಾಸ್ತ್ರಜ್ಞ ಎನ್. ಎನ್. ಜಿನಿನ್. ಬಣ್ಣದ ಕೈಗಾರಿಕೆಯ ವಿಕಾಸದಲ್ಲಿ ಪ್ರಬಲವಾದ ಪ್ರಭಾವವನ್ನು ಬೀರಿದ್ದ ಅನಿಲೈನ್‌ನ್ನು ತಯಾರಿಸಿದನು. ೨೦೦ ಕಿಲೋಗ್ರಾಂ. ಬಣ್ಣರಹಿತ ಅನಿಲೈನ್ ಲವಣವನ್ನು ಪ್ರಬಲ ರಂಗುಳ್ಳ ಕಪ್ಪು ಅನಿಲೈನ್ ಆಗಿ ಪರಿವರ್ತಿಸಲು ಕೇವಲ ೧ ಗ್ರಾಂ. ವೆನೆಡಿಯಂ ಪೆಂಟಾಕ್ಸೈಡ್‌ನಿಂದ ಸಾಧ್ಯವಾಯಿತು.

ನೂತನ ರಸಾಯನಶಾಸ್ತ್ರದಲ್ಲಿ ವೆನೆಡಿಯಂಗೆ ಪ್ರಮುಖಸ್ಥಾನವಿದೆ. ರಸಾಯನಿಕ ಶಾಸ್ತ್ರದಲ್ಲಿ 'ಮುಖ್ಯ ಆಹಾರ ಎನ್ನಿಸಿಕೊಳ್ಳುವ ಗಂಧಕಾಮ್ಲದ ತಯಾರಿಕೆಯಲ್ಲಿ ವೆನೆಡಿಯಂ ಪೆಂಟಾಕ್ಸೈಡ್ ಯೋಗವಾಹಕವಾಗಿ ಕೆಲಸ ಮಾಡುತ್ತದೆ. ಹಲವಾರು ವರ್ಷ ಪ್ಲಾಟಿನಂ ಪುಡಿಯಿಂದ ಲೇಪನಮಾಡಲಾದ ಕಲ್ನಾರನ್ನು ಇದಕ್ಕಾಗಿ ಬಳಸಲಾಗುತ್ತಿತ್ತು. ಆದರದು ಅತ್ಯಂತ ದುಬಾರಿಯೂ ಅಸ್ಥಾಯಿಯೂ ಆಗಿರುವುದಲ್ಲದೆ ಅನಿಲಗಳಿಂದ ಕಲುಷಿತಗೊಂಡು ಕೆಲವೊಮ್ಮೆ ಕೆಲಸಮಾಡುತ್ತಿರಲಿಲ್ಲ. ಆದುದರಿಂದಲೇ ವೆನೆಡಿಯಂ ಪೆಂಟಾಕ್ಸೈಡ್‌ನ್ನು ಯೋಗವಾಹಕವಾಗಿ ಬಳಸುವ ಗಂಧಕಾಮ್ಲದ ತಯಾರಿಕೆಯ ಕ್ರಮವನ್ನು ಕಾರ್ಯರೂಪಕ್ಕೆ ತಂದಾಗ ಗಂಧಕಾಮ್ಲವನ್ನು ತಯಾರಿಸುತ್ತಿದ್ದ ಅನೇಕ ಕಾರ್ಖಾನೆಗಳು ಪ್ಲಾಟಿನಂ – ಕಲ್ನಾರನ್ನು ಬಳಸುವುದನ್ನು ನಿಲ್ಲಿಸಿದವು. ವೆನೆಡಿಯಂನ ಅಮೂಲ್ಯವಾದ ಗುಣಗಳನ್ನು ಪೆಟ್ರೋಲಿಯಂ ಶುದ್ಧೀಕರಣ ಹಾಗೂ ಹಲವಾರು ಸಾವಯವ ಸಂಯುಕ್ತ ವಸ್ತುಗಳ ತಯಾರಿಕೆಯಲ್ಲಿ ಉಪಯೋಗಿಸಿಕೊಳ್ಳಲಾಗುತ್ತಿದೆ.

ಹಂದಿಗಳಿಗೆ ಹಾಕುವ ಮೇವಿನಲ್ಲಿ ವೆನೆಡಿಯಂನ ಅಂಶವಿದ್ದಲ್ಲಿ, ಅವುಗಳ ಹಸಿವೆ ಹೆಚ್ಚಾಗಿ, ಬೇಗನೆ ಕೊಬ್ಬಿ ಬೆಳೆಯುತ್ತವೆಯೆಂಬ ಅಂಶವನ್ನು ಅರ್ಜೆಂಟೈನಾ ದೇಶದಲ್ಲಿ ನಡೆಸಲಾದ ಪ್ರಯೋಗಗಳು ತೋರಿಸಿವೆ. ಇಲಿಗಳ ಬೆಳವಣಿಗೆಯಲ್ಲಿ ವೆನೆಡಿಯಂನ ಪ್ರಭಾವವನ್ನು ಅಮೇರಿಕದ 'ಲಾಂಗ್ ಬೀಚ್' ಆಸ್ಪತ್ರೆಯ ವಿಜ್ಞಾನಿಗಳು ಅಭ್ಯಸಿಸಿದರು. ವೆನೆಡಿಯಂ ಅಂಶವಿರುವ ಆಹಾರವನ್ನು ತಿನ್ನುತ್ತಿದ್ದ ಇಲಿಗಳ ಬೆಳವಣಿಗೆ ಸಾಮಾನ್ಯ ಇಲಿಗಳ ಬೆಳವಣಿಗೆಯ ಎರಡರಷ್ಟಿತ್ತು. ಬೆಳವಣಿಗೆ ಕುಂಠಿತವಾಗಿದ್ದ ಇಲಿಗಳ ಆಹಾರದಲ್ಲಿ ವೆನೆಡಿಯಂ ಅಂಶವನ್ನು ಬೆರೆಸಿದ ಕೆಲವೇ ದಿನಗಳಲ್ಲಿ ಅವುಗಳ ಬೆಳವಣಿಗೆ ಸುಧಾರಿಸಿತು. ಹಲವಾರು ಜೀವಿಗಳಿಗೆ ವೆನೆಡಿಯಂ ಅಗತ್ಯವೆಂದು ಸಾಬೀತಾಗಿದೆ. ಮೊಟ್ಟೆ, ಕೋಳಿಮಾಂಸ, ಹಸುವಿನ ಹಾಲು, ಪ್ರಾಣಿಗಳ ಯಕೃತ್ತು ಮತ್ತು ಮಾನವನ ಮೆದುಳಿನಲ್ಲೂ ವೆನೆಡಿಯಂನ ಅಂಶವಿರುವುದನ್ನು ಕಂಡುಹಿಡಿಯಲಾಗಿದೆ.

ಕೆಲವು ಜಾತಿಯ ಸಮುದ್ರ ಸಸ್ಯಗಳು ಹಾಗೂ ಪ್ರಾಣಿಗಳು ವಾತಾವರಣದಿಂದ ಯಾವುದೋ ರಹಸ್ಯಮಾರ್ಗದಿಂದ ವೆನೆಡಿಯಂನ್ನು ಶೇಖರಿಸಿ ಹಿಡಿದಿಟ್ಟುಕೊಳ್ಳುತ್ತವೆ. ಮಾನವನ ಅಂಗಾಂಗ-

ಗಳು ಹಾಗೂ ಮೇಲು ವರ್ಗದ ಸಸ್ತನಿಗಳ ರಕ್ತದಲ್ಲಿ ಉಸಿರಾಟ ಕ್ರಮಕ್ಕೆ ಸಹಾಯಕವಾಗಿ ಕಬ್ಬಿಣ ವಹಿಸುವ ಪಾತ್ರವನ್ನು ಮೇಲಿನ ಜೀವಿಗಳ ಚಲನಾಂಗಗಳಲ್ಲಿ ವೆನೆಡಿಯಂ ವಹಿಸುತ್ತದೆಯೆಂದು ಕೆಲವು ವಿಜ್ಞಾನಿಗಳು ನಂಬುತ್ತಾರೆ. ಸಮುದ್ರ ಜೀವಿಗಳ ಆಹಾರಾಂಶ-ವಾಗಿ ವೆನೆಡಿಯಂನ ಅವಶ್ಯಕತೆಯಿದೆಯೆಂದೂ ಉಸಿರಾಟಕ್ರಮಕ್ಕಲ್ಲವೆಂದೂ ಮತ್ತೆ ಕೆಲವು ವಿಜ್ಞಾನಿಗಳು ಅಭಿಪ್ರಾಯಪಡುತ್ತಾರೆ. ಈ ವಿಷಯದಲ್ಲಿ ಮುಂದುವರಿಯುತ್ತಿರುವ ಪರಿ-ಶೋಧನೆಗಳು ನಿಜಾಂಶವನ್ನು ಕಂಡುಹಿಡಿ-ಯುವುದರಲ್ಲಿ ತೊಡಗಿವೆ. ಹಾಲೋಥೂರಿಯನ್ ಎಂಬ ಸಮುದ್ರ ಜೀವಿಗಳ ರಕ್ತದಲ್ಲಿ ಪ್ರತಿಶತ ಹತ್ತರಷ್ಟು ವೆನೆಡಿಯಂ ಇರುವುದಾಗಿಯೂ, ಕೆಲವು ಅಸಿಡಿಯನ್ ಎಂಬ ಸಸ್ಯಗಳಲ್ಲಿ ವೆನೆಡಿಯಂನ ಪ್ರಮಾಣ ಸಮುದ್ರ ನೀರಿನಲ್ಲಿರುವ ಪ್ರಮಾಣದ ಸಹಸ್ರಾರು ದಶಲಕ್ಷ ಪಟ್ಟು ಹೆಚ್ಚಾಗಿರುವುದು ಇಲ್ಲಿಯವರೆಗೆ ಸಿದ್ಧವಾಗಿದೆ. ಈ ಸಮುದ್ರ ಜೀವಿಗಳನ್ನು ಸಮುದ್ರದ ವೆನೆ-ಡಿಯಂ ಬ್ಯಾಂಕ್‌ಗಳೆಂದು ಕರೆಯಬಹುದು. ಸಹಜವಾಗಿಯೇ, ಸಮುದ್ರಗಳಿಂದ ವೆನೆಡಿಯಂನ್ನು ಹೊರ ತೆಗೆಯಬಹುದಾದ ಸಾಧ್ಯತೆಯನ್ನು ಪರಿಶೀಲಿಸುವುದರಲ್ಲಿ ವಿಜ್ಞಾನಿಗಳು ಆಸಕ್ತಿ ವಹಿಸುತ್ತಿದ್ದಾರೆ. ಜಪಾನಿನ ಸಮುದ್ರ ತೀರದಲ್ಲಿ ಅಸಿಡಿಯನ್‌ನ್ನು ಬೆಳೆಸುವ ಅಧಿನಿವೇ-ಶನಗಳು ಹಲವಾರು ಕಿಲೋಮೀಟರ್ ಉದ್ದಕ್ಕೂ ಹರಡಿವೆ. ಇವು ಅತ್ಯಂತ ಫಲೋತ್ಪಾದಕವಾಗಿದ್ದು ಒಂದು ಚದುರ ಮೀಟರ್ ಕ್ಷೇತ್ರದಲ್ಲಿ ೧೫೦ ಕಿಲೋ ಗ್ರಾಂ ಅಸಿಡಿಯನ್ನನ್ನು ಬೆಳೆಸಬಹುದು. ಈ ಬೆಳೆಯನ್ನು ತೆಗೆದು ವಿಶೇಷ ಪ್ರಯೋಗಶಾಲೆಗಳಿಗೆ ಕಳುಹಿಸಲಾಗುತ್ತದೆ. ಅಲ್ಲಿ ವೆನೆಡಿಯಂನ್ನು ಹೊರ ತೆಗೆಯಲಾಗುತ್ತದೆ. ಈ ಕ್ರಮದಿಂದ ಹೊರ ತೆಗೆದ ವೆನೆಡಿಯಂನ್ನು ಬಳಸಿ ವಿಶೇಷವಾದ ಉಕ್ಕುಗಳನ್ನು ಈಗಾಗಲೇ ಜಪಾನಿನ ಲೋಹಶಾಸ್ತ್ರಜ್ಞರು ತಯಾರಿಸಿದ್ದಾರೆಂದು ಪತ್ರಿಕಾ ವರದಿಯೊಂದು ತಿಳಿಸಿದೆ.

ರಶಿಯದ ಪರಿಶೋಧನಾ ಕೇಂದ್ರವೊಂದು ವಿಶೇಷವಾದ ಸಮುದ್ರ ಸಸ್ಯಗಳನ್ನು ಹೊರ ತೆಗೆಯುವ ಹಡಗುಗಳ ನಿರ್ಮಾಣ ಯೋಜನೆಯನ್ನು ಕೈಗೊಂಡಿದೆ. ಅದರಲ್ಲಿ ಅತಿ ನವೀನ ರೀತಿಯ ಸಮುದ್ರಯಾನದ ಸಲಕರಣೆಗಳು, ನೀರಡಿಯಲ್ಲಿ ಕೆಲಸ ಮಾಡುವ ಟೀವಿ ಕ್ಯಾಮರಾ ಮತ್ತು ಹಲವಾರು ಯಂತ್ರೋಪಕರಣಗಳನ್ನು ಅಳವಡಿಸಲಾಗಿವೆ. ಸದ್ಯದಲ್ಲೇ ಇಂತಹ ಹಡಗುಗಳು ಖನಿಜಗಳನ್ನು ಹೊತ್ತು ತರುವ ಸಾಧನಗಳಾಗಬಹುದಾದ ಸಾಧ್ಯತೆಯಿದೆ.

ಭೂಮಿಯ ಮೇಲೂ ವೆನೆಡಿಯಂನ್ನು ಹಿಡಿದಿಡುವಂತಹ ಪಾಚಿ ಜಾತಿಯ ಸಸ್ಯಗಳಿವೆ. ವೆನೆಡಿಯಂ ಇಲ್ಲದೆ ಅವು ಬೆಳೆಯುವುದಿಲ್ಲ. ಹೀಗೆ ಮೂಲ ವಸ್ತುಗಳನ್ನು ಹಿಡಿದು ಶೇಖರಿಸಿಡುವ ಸಸ್ಯಗಳಿಗೆ 'ಬಯೋ ಕಾನ್ಸೆಂಟ್ರೇಟರ್ಸ್' ಎನ್ನುತ್ತಾರೆ. ಅತ್ಯಮೂಲ್ಯವಾದ ಲೋಹದ ಖನಿಜಗಳನ್ನು ಹೊಂದಿರುವ ಸಸ್ಯಗಳು ಭೂಗರ್ಭ ಶಾಸ್ತ್ರಜ್ಞರಿಗೆ ಅನೇಕ ಸಲ ಬಹೂಪಯೋಗಿ.

ವಿಜ್ಞಾನಿಗಳ ಪ್ರಕಾರ ನಮ್ಮ ಗ್ರಹದ ವಾತಾವರಣ ರೂಪುಗೊಳ್ಳುವಲ್ಲಿ ಹಾಗೂ ಭೂಪದರದಲ್ಲಿ ವೆನೆಡಿಯಂ ಮತ್ತು ವೆನೆಡಿಯಂನಂತಹ ರಸಾಯನಿಕ ಮೂಲ ವಸ್ತುಗಳು ಶೇಖರಣೆಯಾಗುವಲ್ಲಿ 'ಮಿನ್ನೆರಿಯಾ' ಎಂಬ ಸಸ್ಯ ಪ್ರಮುಖ ಪಾತ್ರ ವಹಿಸಿತ್ತು.

ಗಮನಾರ್ಹವಾದ ಶಕ್ತಿ, ನಶಿಸುವುದನ್ನು ವಿರೋಧಿಸುವ ಗುಣ, ಹೆಚ್ಚಿನ ದ್ರವೀಭವನ ಬಿಂದು ಹಾಗೂ ಕಬ್ಬಿಣಕ್ಕಿಂತ ಕಡಿಮೆ ಸಾಪೇಕ್ಷ ಸಾಂಧ್ರತೆಯುಳ್ಳ ವೆನೆಡಿಯಂನ ಮಿಶ್ರ ಲೋಹಗಳು ಮುಂದೆ ಅತ್ಯುತ್ತಮ ಕಟ್ಟಡ ನಿರ್ಮಾಣದ ವಸ್ತುವಾಗಬಹುದೆಂದು ನಿರೀಕ್ಷಿಸಲಾಗಿದೆ. ಆದರೆ ಅದಕ್ಕಿಂತ ಮೊದಲು ನಿಸರ್ಗದ ಅಕ್ಷಯ ಹಾಗೂ ನಿಗೂಢ ಭಂಡಾರಗಳಿಂದ ವೆನೆಡಿಯಂನ್ನು ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಹೊರ ತೆಗೆಯುವ ಕ್ರಮಗಳನ್ನು ಮಾನವ ಕಲಿಯಬೇಕಾಗಿದೆ. ✡

ಅನಿಸಿಕೆ

# "ಹಳ್ಳಿಯೊಡಲಾಳದಲಿ"

ಎಸ್. ನಟರಾಜ ಬೂದಾಳು

ಕಿಟತೋಂ, ಕಿಟತೋಂ ಎಂದು ತಬಲದಿಂದ ಹೊರಟ ನಾದವನ್ನು ಸರಿಹೊಂದಿಸಲು ಇನ್ನೂ ಎತ್ತರಿಸಿಕೊಂಡರು ಕೃಷ್ಣಪ್ಪ. ಸುತ್ತ ಕುಳಿತ ಸುಮಾರು ೨೫–೩೦ ಜನ ಸಂಗೀತವಿಶಾರದರಲ್ಲ-ದಿದ್ದರೂ ಉತ್ತಮ ಮಟ್ಟದ ಶ್ರೋತೃಮನೋ-ಧರ್ಮದವರು. ಅದರಲ್ಲಿಬ್ಬರು ಶ್ರೀ ಎಂ. ಡಿ. ರಾಮನಾಥನ್, ಜಿ. ಎನ್. ಬಾಲಸುಬ್ರಹ್ಮಣ್ಯಂ ಇಂಥವರ ಕಚೇರಿಗಳನ್ನು ಕೇಳಿ ಬೆಳೆದವರೂ ಇದ್ದರು. ಹಾರ್ಮೋನಿಯಂ ಹಿಡಿದು ಕುಳಿತವರು ಆ ಹಳ್ಳಿ ಗವಿರಂಗಾಪುರದಲ್ಲಿಯೇ ಹುಟ್ಟಿ ಬೆಳೆದ ಕಲಾವಿದರು.

ತಬಲದ ಶ್ರುತಿ ಸರಿಹೊಂದಿತು. ಹಾರ್ಮೋ-ನಿಯಂನಿಂದ ಹೊಮ್ಮಿ ಹರಿಯಲಾರಂಭಿಸಿದ ಮೋಹನದ ಆಲಾಪನೆ ನಮ್ಮನ್ನೆಲ್ಲಾ ಬೇರೊಂದು ಲೋಕಕ್ಕೊಯ್ಯಿತು. ಈ ಮಧ್ಯೆ ಜನಗಳ ನಡುವೆ ದಾರಿ ಮಾಡಿಕೊಳ್ಳುತ್ತ ಸುಮಾರು ಹದಿಮೂರು ವರ್ಷದ ಹುಡುಗನೊಬ್ಬ ಮುಂದೆ ಬಂದು ಕೃಷ್ಣಪ್ಪನವರಿಗೆ ಒತ್ತಿಕೊಂಡೇ ಕುಳಿತುಕೊಂಡ. ಅವನ ಆಸಕ್ತಿ ಕಂಡು ಸಂತೋಷವಾಯಿತು. ದಿಟ್ಟಿಸಿ ನೋಡಿದೆ. ಆಟ ಆಡಿ ಬಂದದ್ದಕ್ಕೇನೋ ಎಣ್ಣೆ ಹಚ್ಚದ ಸ್ವಲ್ಪ ಒರಟಾದ ತಲೆಗೂದಲು ಕೆದರಿತ್ತು. ಜಿದ್ದು ಮೊಣಕಾಲಿನ ಮೇಲಾದ ಗಾಯಗಳು ಮತ್ತೆ ಮತ್ತೆ ಬೀಳುಗಳನ್ನನುಭವಿಸಿ ಇನ್ನೂ ದೊಡ್ಡ-ದಾಗುತ್ತಿದ್ದವು. ವಯಸ್ಸಿಗನುಗುಣವಾಗಿ ಬೆಳೆ-ಯದೆ ಸ್ವಲ್ಪ ಕೃಶವೇ ಎನ್ನಿಸುವ ಶರೀರ. ಮಿಂಚನ್ನುಕ್ಕಿಸುವ ಕಣ್ಣುಗಳಿಗೆ ಅಡ್ಡವಾಗಿ ಏನೋ ತೆರೆ ಎಳೆದಂತೆ ಕೊರತೆಯ ಪರದೆ.

ಹಾರ್ಮೋನಿಯಂ ನುಡಿಸುತ್ತಿದ್ದ ಪರಣ್ಣನವ-ರದು ಒಳ್ಳೆಯ ಪಳಗಿದ ಕೈ. ಮನ ಮುಟ್ಟುವಂತೆ ನುಡಿಸಬಲ್ಲರು. ಮೋಹನ ಆಲಾಪನೆ ತನ್ನೆಲ್ಲ ವೈಭವವನ್ನು ಮೆರೆಸಿ ಮುಕ್ತಾಯಕ್ಕೆ ಬಂತು. ಕೃಷ್ಣಪ್ಪನವರು ಇನ್ನೊಮ್ಮೆ ತಬಲದ ಮೇಲೆ ಕೈಯಾಡಿಸಿ ಶ್ರುತಿ ನೋಡಿಕೊಂಡರು. ಪರಣ್ಣನ-

ವರು ಶ್ರೀ ತ್ಯಾಗರಾಜರ 'ನನ್ನುಪಾಲಿಂಪ' ಕೀರ್ತನೆಯನ್ನು ಸುಶ್ರಾವ್ಯವಾಗಿ ನುಡಿಸಲಾರಂಭಿಸಿದರು. ಹಾರ್ಮೋನಿಯಂನ ಹಿತವಾದ ಸಂಗೀತದೊಡನೆ ಮೇಳವಿಸಿ ಹರಿಯಲಾರಂಭಿಸಿತು ತಬಲದ ನಾದ. ಯಾಕೋ ತಟಕ್ಕನೇ ತಿರುಗಿದೆ. ತಬಲದ ಮೇಲಾಡುತ್ತಿದ್ದುದು ಏಳು ವರ್ಷದ ಆ ಪುಟ್ಟ ಬೆರಳುಗಳು! ತಬಲ ಎತ್ತಿ ತೊಡೆಯ ಮೇಲಿಟ್ಟುಕೊಳ್ಳಲೂ ಶಕ್ತಿ ಸಾಲದ ಆ ಪುಟ್ಟ ಕೈಗಳು ಮಿಡಿದ ನಾದ ಅಮೋಘ. ಆ ಪುಟ್ಟ ಬಾಲಕನ ಬೆರಳುಗಳು ಹೊರಡಿಸಿದ ನಾದವಿದು ಎಂಬ ಸತ್ಯಕ್ಕೆ ಮನಸ್ಸನ್ನೊಗ್ಗಿಸಲು ಸ್ವಲ್ಪ ಹೊತ್ತೇ ಬೇಕಾಯಿತು. ಲೀಲಾಜಾಲವಾಗಿ ಬೆರಳಾಡುತ್ತಿದ್ದವು. ತೀರಾ ಅನುಭವಸ್ಥ ಕೈಯಂತೆ 'ಎಡ'ದ ಮೇಲೆ ಜೀಕುತ್ತಿತ್ತು ಎಡಗೈ. ಅರ್ಧಗಂಟೆ ವಿಸ್ತಾರವಾದ ವಾದನಕ್ಕೆ ಮುಕ್ತಾಯ ನುಡಿಸಿ ಆ ಹುಡುಗ ನನ್ನ ಕಡೆಗೊಮ್ಮೆ ನೋಡಿದ. ಆ ಪುಟ್ಟ ಹುಡುಗನಿಗೆ ನನ್ನ ಅಪಾರ ಮೆಚ್ಚುಗೆ ಸೂಚಿಸಲು ನನಗಾವ ಮಾರ್ಗವೂ ತೋಚಲಿಲ್ಲ.

ಅನಂತರ ಸುಮಾರು ಒಂದು ಗಂಟೆ ಕಾಲ ನಡೆದ ಕಚೇರಿಯಲ್ಲಿ ಆ ಬಾಲಕ ತನ್ನ ಕೈಚಳಕ ಮೆರೆದ. ಪಕ್ಕದಲ್ಲಿ ಕುಳಿತಿದ್ದ ತಂದೆ ಕೃಷ್ಣಪ್ಪ ಕ್ಲಿಷ್ಟಘಟ್ಟಗಳಲ್ಲಿ ಕೈ ಸನ್ನೆಗಳ ಮೂಲಕ 'ನಡೆ' ಯನ್ನು ಸೂಚಿಸುತ್ತಿದ್ದರು. ಕಚೇರಿ ಮುಗಿದಾಗ ಅಭಿಮಾನದಿಂದೊಮ್ಮೆ ನೋಡಿದೆ. ಆ ಹುಡುಗ ನನ್ನ ಕಡೆಗೆ ಎರಡು ಮೂರು ಬಾರಿ ನೋಡಿದ. ಅವನ ಕಣ್ಣುಗಳಲ್ಲಿ ಏನೊ ಹೇಳಬೇಕು ಎನ್ನುವ ಭಾವವಿದ್ದಂತಿತ್ತು. ತಂದೆಯ ಕಡೆ ನೋಡುತ್ತಲೇ ಅವರ ಕಣ್ಣು ತಪ್ಪಿಸಿ ನನ್ನ ಬಳಿ ಬಂದ. ಅವನಿಗೆ ಏನೋ ಹೇಳಬೇಕಿದೆ ಎನ್ನಿಸಿತು. ಮೆಲ್ಲಗೆ ಕೆಳಗೆ ಬಾಗಿ, "ತುಂಬಾ ಚೆನ್ನಾಗಿ ನುಡಿಸಿದೆ ಮಗೂ," ಎಂದೆ. ನನ್ನ ಮೆಚ್ಚುಗೆಯನ್ನೊಂದಿಷ್ಟೂ ಗಮನಿಸದೆ, ಬೀದಿಯಲ್ಲಿ ಗೋಲಿಯಾಡುತ್ತಿದ್ದ ಹುಡುಗರ ಕಡೆಗೊಮ್ಮೆ ನೋಡುತ್ತಾ, "ಹತ್ತು ಪೈಸಾ ಕೊಡುತ್ತೀರಾ?" ಎಂದು ಕೇಳಿದ.

ಒಂದು ರೀತಿಯ ಸಂಕಟವಾಯಿತು. ತನ್ನಲ್ಲಿ ತುಂಬಿರುವ ಅಪಾರ ಸಂಪತ್ತಿನ ಅರಿವಿಲ್ಲದ ಈ ಹುಡುಗನಿಗೆ ಹತ್ತು ಪೈಸೆ ಕೊಡಲೆ? ಎಷ್ಟು ರೂಪಾಯಿ ಕೊಟ್ಟರೆ ತಾನೇ ಸರಿ?

ಕತೆಯಂಥ ಈ ಘಟನೆ ಕಟುಸತ್ಯ. ಅಪಾರ ಕ್ರಿಯಾಶಕ್ತಿ ತುಂಬಿತುಳುಕುವ ಹಳ್ಳಿಯ ಮಕ್ಕಳಲ್ಲಿ ಅರಳದೆ ಮುದುಡಿ ಹೋಗುವ ಪ್ರತಿಭೆ, ಬುದ್ಧಿವಂತಿಕೆ ಎಷ್ಟೊಂದು! ವರ್ಷಕ್ಕೆ ಸಾವಿರಾರು ರೂಪಾಯಿ ಫೀಸ್ ಕೊಟ್ಟು, ಹೊರೆ ಪುಸ್ತಕಗಳನ್ನು ಹೊರಿಸಿ ಕಾನ್ವೆಂಟ್‌ಗೆ ಕಳಿಸುವ ಮಕ್ಕಳಿಗೆ ದೊರೆವ ಅರ್ಧ ಸೌಲಭ್ಯ ಇವರಿಗಿದ್ದಿದ್ದರೆ? ವಾರಕ್ಕೊಮ್ಮೆ ಸಿಗುವ ಭಾನುವಾರದ ರಜೆಯನ್ನು ಕೂಡ ದನ ಕಾಯಲೋ, ಎಮ್ಮೆ ಕಾಯಲೋ, ಉಪಯೋಗಿಸಬೇಕಾದ ಸ್ಥಿತಿಯಲ್ಲಿ ಬೆಳೆದು ಬಂದವರು ನಮ್ಮ ಬುದ್ಧಿಜೀವಿಗಳಲ್ಲಿನ ಎಷ್ಟೋ ಮಂದಿ. ಬಹಳಷ್ಟು ಕವಿಗಳನ್ನು, ಪ್ರೊಫೆಸರ್‌ಗಳನ್ನೂ, ಸಂಗೀತಗಾರರನ್ನು ಪೋಷಿಸಿ ಬೆಳೆಸಿದ್ದು ನಮ್ಮ ಹಳ್ಳಿಗಳು. ಅಂದರೆ ಪಟ್ಟಣಗಳಲ್ಲಿ ಬೆಳೆದವರು ದಡ್ಡರೆಂದರ್ಥವಲ್ಲ. ಹಳ್ಳಿಯ ಬದುಕಿನ ಒಂದು ಅನಿವಾರ್ಯವೆಂದರೆ ಜೀವನದ ಆಳಕ್ಕಿಳಿಯಬೇಕಾಗಿರುವುದು. ಹೀಗಾಗಿ ಒಬ್ಬೊಬ್ಬರಿಗೂ ಸಂಪೂರ್ಣ ಬೇರೆಯೇ ಆದ ಗುಣಪ್ರವೃತ್ತಿಗಳು ಬಂದು ಬಿಡುತ್ತವೆ.

ಆದರೆ ನನ್ನ ನೋವು ಇದರ ಬಗ್ಗೆಯಲ್ಲ. ಇಷ್ಟೊಂದು ಅಪಾರ ಕರ್ತೃತ್ವ ಶಕ್ತಿ ಹೊರಬರಲು ಸಾಧ್ಯವಾಗದೆ ಸೀದು ಹೋಗುವುದಕ್ಕೆ. ಇದಕ್ಕೇನಾದರೂ ಪರಿಹಾರವುಂಟೆ? ✡



ಒಂದು ಪ್ರಾಚೀನ ಮಹಾಕಾವ್ಯದ ಕಥೆ

# ಬಿಯೊವುಲ್ಫ್

ಗೌರೀಶ ಕಾಯ್ಕಿಣಿ

ಇದೊಂದು ಅತಿ ಪ್ರಾಚೀನ ಮಹಾಕಾವ್ಯದ ಕಥೆ. ಈ ಕಾವ್ಯ ಇಂಗ್ಲಿಷ್ ಭಾಷೆಯಲ್ಲಿಯೇ ಅತ್ಯಂತ ಹಳೆಯದು. ಇದರ ಒಂದೇ ಒಂದು ಪ್ರತಿ ಕ್ರಿಸ್ತಶಕ ೧೦೦೦ರಲ್ಲಿ ಬರೆದದ್ದು ಇಂದಿಗೂ ಲಂಡನ್ನಿನ ಬ್ರಿಟಿಶ್ ಮ್ಯೂಝಿಯಮ್ಮಿನ ಗ್ರಂಥಾಲಯದಲ್ಲಿ ಇದೆ. ಇದರ ಕಥಾನಾಯಕ ವೀರಾಗ್ರಣಿ ಬಿಯೊವುಲ್ಫ್. ಕಥೆ ನಡೆದ ಪ್ರದೇಶ ಸ್ವೀಡನ್-ಡೆನ್ಮಾರ್ಕ್‌ನ ಕರಾವಳಿಗಳು. ಈ ಕಾವ್ಯದ ಭಾಷೆ ಇಂದಿನವರಿಗೆ ಓದಲು ಬರುವಂತಿಲ್ಲ. ನಮ್ಮ ಹಳೆಗನ್ನಡದಂತೆ ಅಂದಿನ ಈ ಇಂಗ್ಲಿಷ್ ಶಬ್ದಗಳು, ಅವುಗಳ ಲಿಪಿ, ಅಕ್ಷರ, ಎಲ್ಲ ತೀರ ಬೇರೆ.

ಈ ಕಾವ್ಯಕ್ಕೆ ಅದರ ನಾಯಕ ಬಿಯೊವುಲ್ಫ್ (Beowolf)ನದೆ ಹೆಸರು. ಕಥೆ ಹಿಂದು ಮುಂದಾಗಿ ಹಲವು ಕಥೋಪಕಥನಗಳೊಂದಿಗೆ ಸೇರಿಕೊಂಡು ದೊಡ್ಡ ವೀರಗಾಥೆಯಾಗಿ ಸಾಗುತ್ತದೆ. ಈ ಪುರಾಣದ ಆರಂಭದ ಅಂಶವೇ ಈ ಕೆಳಗಿನ ಕಥೆ. ನಮ್ಮಲ್ಲಿಯೂ ಅಂಥ ಪುರಾಣ ಕಥೆಗಳಂತೆಯೇ ಅದ್ಭುತ ರಮ್ಯ ಅಥವಾ ರುದ್ರ ಭಯಾನಕ.

ಅನೇಕಾನೇಕ ವರ್ಷಗಳ ಹಿಂದೆ ಹೋಥ್ಗರ್ ಎಂಬ ದೊರೆ ಇದ್ದ. ಆತ ಡೇನ್ ಜನಾಂಗದ ಅರಸು. ಅವನ ರಾಜ್ಯ ಬಹು ವಿಸ್ತಾರವಾಗಿ ಹಬ್ಬಿತ್ತು— ಕಡಲಿನಿಂದ ಕಡಲಿನತನಕ. ಅವನ ಖ್ಯಾತಿ ನೆರೆಹೊರೆಯ ರಾಜ್ಯಗಳಲ್ಲಿ ಇನ್ನೂ ವಿಸ್ತಾರವಾಗಿ ಪಸರಿಸಿತ್ತು.

ದೊರೆ ಹೋಥ್ಗರನು ಒಂದು ದೊಡ್ಡ ಭವನವನ್ನು ಕಟ್ಟಿಸಲು ನಿರ್ಧರಿಸಿದನು. ಮರದ ಕಾಂಡಗಳಿಂದ ದಪ್ಪ ಹಲಿಗೆಗಳಿಂದ ಕಬ್ಬಿಣದ ಕಂಬಿ-ಪಟ್ಟಿಗಳಿಂದ ಹಿಡಿದು ಜೋಡಿಸಿ ಆ ಭವನವನ್ನು ಕಟ್ಟಲಾಯಿತು. ಅಂದು ಕಬ್ಬಿಣವೇ ಅತಿ ಬಲಿಷ್ಠ ಧಾತು. ದೇಶ ವಿದೇಶಗಳ ಬಡಿಗರೂ ಕಮ್ಮಾರರೂ ಅಲ್ಲಿ ಕೂಡಿ ಕಲೆತು ಹಗಲಿರುಳು ದುಡಿದು, ಆ ಭವ್ಯ ಸೌಧವು ತಲೆ ಎತ್ತಿ ನಿಂತಿತು—ಎತ್ತರವಾಗಿ ವಿಶಾಲವಾಗಿ ಸಡಗರದ ಡೌಲಿನಿಂದ.



ಅದಕ್ಕೆ ಪ್ರಚಂಡವಾದ ಹೆಬ್ಬಾಗಿಲು. ಆದರ ದಪ್ಪ ದಪ್ಪ ಕದಗಳಿಗೆ ಕಬ್ಬಿಣದ ಕಂಬಿಗಳನ್ನು ಬಿಗಿದಿದ್ದರು. ಒಳಗೆ ಪ್ರಶಸ್ತವಾದ ಹಜಾರ. ಅದರ ಮಧ್ಯದಲ್ಲಿ ದೊಡ್ಡ ಅಗ್ಗಿಷ್ಟಿಗೆಯ ಧಗ ಧಗಿಸುವ ಕುಂಡ— ಓಲಗ ಕೂಡಿದಾಗ ಮನ್ನೆ-ಯರೆಲ್ಲ ಸುತ್ತಲೂ ಕುಳಿತು ಚಳಿ ಕಾಯಿಸಲಿಕ್ಕೆ. ಅದರ ಹೊಗೆ ನೇರ ಮಾಡಿನೊಳಗಿನ ದೊಡ್ಡ ಕಿಂಡಿಯೊಳಗಿಂದ ಹೊರಗೆ ಹೋಗುತ್ತಿತ್ತು.

ಈ ಓಲಗ ಸಾಲೆಯ ಇಬ್ಬದಿಯ ಗೋಡೆ ಗಳಿಗೆ ಆನಿಸಿ ಪೀಠಗಳಿದ್ದವು. ಒಂದು ಸಾಲಿನ ನಟ್ಟನಡುವೆ ದೊರೆಗೂ ಅವನ ರಾಣಿಗೂ ಹಿರಿಯ ಆಸನಗಳು. ಇದಿರಿನ ಬದಿಯ ಸಾಲಿ ನಲ್ಲಿ ದೊರೆಯನ್ನು ಕಾಣಲು ಬರುವ ಹಿರಿಯ ಮನ್ನಣೆಯ ಮಂದಿಗಾಗಿ ಆಸನಗಳಿದ್ದವು. ಅವು ಗಳ ಜೊತೆ ಈಚೆ ಪರಿವಾರದವರಿಗಾಗಿ ಉಳಿದ ಪೀಠಗಳು. ಭವನದ ಹೆಸರು 'ಹಿಯೊರೊತ್' (Heorot).

ಆದರೆ ಈ ಹಿಯೊರೊತ್ ಕಟ್ಟಿನಿಂತಂದಿ-ನಿಂದ ಹನ್ನೆರಡು ವರ್ಷ ಬರಿದಾಗಿ ಬಿದ್ದಿತು. ಅದರಲ್ಲಿ ಯಾರೂ ವಸತಿ ಮಾಡಲಿಲ್ಲ! ಅದಕ್ಕೆ ಅಂತಹದೇ ಭಯಂಕರ ಕಾರಣ ಉಂಟಾಗಿತ್ತು.

*

ಈ ಭವ್ಯ ಭವನ ಕಟ್ಟಿ ಸಿದ್ಧವಾದೊಡನೆ ದೊರೆ ಹೋಥ್ಗರನು ಅದರ ಉದ್ಘಾಟನೆಯ ಉತ್ಸವವೆಂದು ಒಂದು ದೊಡ್ಡ ಮೇಜವಾನಿ-ಯನ್ನು ಏರ್ಪಡಿಸಿದನು. ಅದಕ್ಕೆ ಬಂದ ಹತ್ತಿರದ, ದೂರದ ನೂರಾರು ಮನ್ನೆಯರು ಮನದಣಿ ತಿಂದುಂಡು, ಕುಡಿದು, ಹಾಡಿ ಕೇಕೇ ಹಾಕಿ ಕೂಗಾಡಿದರು. ನಡು ರಾತ್ರಿಯಲ್ಲಿ ಅವರ ಕೂಗಾಟದ ಸದ್ದು ಆ ಕಟ್ಟಿರುಳ ಚಳಿ-ಗಾಳಿಯಲ್ಲಿ ತೇಲಿ ಮೈಲುಗಟ್ಟಲೆ ದೂರದವರೆಗೆ ಈ ಸುತ್ತಲಿನ ಜವಗು ಭೂಮಿಯಲ್ಲಿ, ಕಡ-ಲಾಚೆಗೂ ಮುಟ್ಟಿತು.

ಹಾಗೆಯೇ ಆ ಸದ್ದು ಗ್ರೆಂಡೆಲ್‌ನ ಕಿವಿಗೂ ಮುಟ್ಟಿತು. ಗ್ರೆಂಡೆಲ್ ದೂರದಲ್ಲಿ ಒಂದು ಕೊಳದ ತಳಕ್ಕೆ ಮನೆ ಮಾಡಿಕೊಂಡಿದ್ದ. ಆತ ಸಾಮಾನ್ಯನಲ್ಲ. ಒಬ್ಬ ನರಪಶು. ಅರ್ಧ ಪಶು, ಅರ್ಧ ನರ. ಅತಿ ಕ್ರೂರ, ಅತಿ ಹಿಂಸ್ರ ದುಷ್ಟ ಪ್ರಾಣಿ. ಅವನನ್ನು ಮಾನವರೂ, ದೇವತೆಗಳೂ ಕೂಡಿಯೇ ದ್ವೇಷಿಸುತ್ತಿದ್ದರು. ಅದಕ್ಕೆ ಒಂದು ಬಲವಾದ ಕಾರಣವಿತ್ತು.

ಗ್ರೆಂಡೆಲ್ ಏಕಾಂತಜೀವಿ. ಅವನನ್ನು ಹೆತ್ತವಳು ಅವನಂತೆಯೇ ಕ್ರೂರಳು ದುಷ್ಟಳು. ಗ್ರೆಂಡೆಲ್‌ನಿಗೆ ತಾನು ಖಿನ್ನ ಕುಗ್ಗಿ ದವನಾಗಿ ಇರುತ್ತಿರುವಾಗ ಲೋಕ ಸುಖಿ ಯಾಗಿ ಹಿಗ್ಗಿರುವುದು ಎಂದೆಂದೂ ಏನೇನೂ ಸಹಿಸಲು ಆಗುತ್ತಿರಲಿಲ್ಲ. ಆದ್ದರಿಂದಲೆ ಆತ ಲೋಕವನ್ನು ದ್ವೇಷಿಸುತ್ತಿದ್ದ.

ದೊರೆ ಹೋಥ್ಗರನ ಆ ಮೇಜವಾನಿಯ ಕಲಕಲ ಅವನಲ್ಲಿ ದ್ವೇಷ ಉಕ್ಕಿಸಿತು.

ಆತ ಪಿತ್ತ ನೆತ್ತಿಗೇರಿ ಉರಿಉರಿಯಾದನು. ಕಣ್ಣು ಕೆದರಿದ ಕೆಂಡವಾದವು. ಕೂಡಲೆ ಕೊಳದಿಂದ ಹೊರಗೆದ್ದು ಬಂದನು. ಆ ಕಗ್ಗತ್ತಲೆಯಲ್ಲಿ ಆ ಜವಗು ಬಯಲನ್ನು ದಾಪುಗಾಲಿನಿಂದ ದಾಟಿ ದೊರೆಯ 'ಹಿಯೊರೊತ್' ಭವನಕ್ಕೆ ಬಂದನು.

ಗ್ರೆಂಡೆಲ್ ಬಂದಾಗ ಅಲ್ಲಿ ಎಲ್ಲ ಸ್ತಬ್ಧ, ನಿಃಶಬ್ದವಿತ್ತು. ಮೇಜವಾನಿ ಮುಗಿದು, ಆಮಂತ್ರಿತ ಜನರೆಲ್ಲ ಅಲ್ಲಲ್ಲಿ ಬಿದ್ದುಕೊಂಡು ನಿದ್ದೆ ಹೋಗಿದ್ದರು, ಕುಡಿದ ಅಮಲಿನಲ್ಲಿ. ಆ ದೈತ್ಯಾಕಾರದ ಹೆಬ್ಬಾಗಿಲು ಭದ್ರವಾಗಿ ಮುಚ್ಚಿತ್ತು. ಆದರೆ ಗ್ರೆಂಡೆಲ್‌ನಿಗೆ ಅದು ದೊಡ್ಡದಲ್ಲ. ಅವನು ತನ್ನ ಕಪ್ಪು ಪಂಜಿನ ಒಂದು ಘಾತಪೆಟ್ಟಿನಿಂದ ಕಬ್ಬಿಣದ ಕಂಬಿಗಳ ಕದವನ್ನು ಒಡೆದು ಬಾಗಿಲನ್ನು ತೆರೆದು ಒಳನುಗ್ಗಿ ಅಲ್ಲಿ ಮಲಗಿದ ಮೂವತ್ತು ಮಂದಿಯನ್ನು ತನ್ನ ತೆಕ್ಕೆಯಲ್ಲಿ ಎತ್ತಿಕೊಂಡು ಹೋದನು. ಅವರ ದೇಹಗಳನ್ನು ದೂರ ಕೊಳದಂಚಿಗೆ ಒಯ್ದು ಅವುಗಳಿಂದ ತನ್ನ ಹೊಟ್ಟೆಯನ್ನು ಯಥೇಷ್ಟ ತುಂಬಿಕೊಂಡನು.

ಮರುದಿನ ಮುಂಜಾನೆ ಈ ನರರಾಕ್ಷಸನು ಮಾಡಿದ ಅನಾಹುತವನ್ನು ಹಿಯೊರೊತ್ ಭವನದಲ್ಲಿಯ ಜನರೆಲ್ಲ ಕಕ್ಕರಿಸಿ ನೋಡಿದರು. ಆಕ್ರೋಶವೇ ಆಕ್ರೋಶ. ಭವನದಲ್ಲೆಲ್ಲ ಅವರ ಬೆನ್ನಿಗೇ ಮಸಣ ಮೌನ, ದುರ್ಭರವಾದ ದುಗುಡ. ಖ್ಯಾತಿವೆತ್ತ ದೊರೆ ಹೋಥ್ಲರ್ ತನ್ನ ಪೀಠದಲ್ಲಿ ತಲೆಗೆ ಕೈ ಆನಿಸಿ ಕುಳಿತಿದ್ದ. ಎದೆ ತುಂಬ ದುಃಖ. ಗ್ರೆಂಡೆಲ್ ರಾಕ್ಷಸನ ಬಗೆಗೆ ಕಡು ದ್ವೇಷ. ಏನು ಮಾಡಬೇಕು? ಯಾರ ನೆರವು ಕೇಳಬೇಕು? ದೊರೆಗೆ ತಿಳಿಯದು, ತೋಚದು.

ಆದರೆ ಇಲ್ಲಿಗೇ ಮುಗಿಯಲಿಲ್ಲ. ಆ ದಿನ ರಾತ್ರಿಯ ಕಟ್ಟಿರುಳಿನಲ್ಲಿ ಆ ನರಪಶು ಮತ್ತೆ ಸದ್ದಿಲ್ಲದೆ ನುಗ್ಗಿ ಬಂದ. ಇನ್ನೂ ಹೆಚ್ಚು ಮಂದಿಯನ್ನು ಹೊತ್ತುಕೊಂಡು ಹೋಗಿ ತಿಂದು ತೇಗಿದ! ಹೀಗೆಯೇ ನಡೆಯಿತು ಪ್ರತಿ ರಾತ್ರಿ.



ಕೊನೆಗೆ ಗ್ರೆಂಡೆಲ್‌ನ ಆ ಭಯಾನಕ ಹಿಂಸಾಕಾಂಡಕ್ಕೆ ಹೆದರಿ ಕಂಗೆಟ್ಟು ಆ ಭವನದಲ್ಲಿ ಯಾರೂ ಮಲಗದಾದರು, ಅತ್ತ ಸುಳಿಯದಾದರು.

*

ಹೀಗೆ ಹಿಯೊರೊತ್ ಭವನ ಹನ್ನೆರಡು ವರುಷ ನಿರ್ಜನವಾಗಿ ಉಳಿಯಿತು.

ಕಡಲಾಚೆಯ ತಡಿಯಲ್ಲಿ ಇನ್ನೊಬ್ಬ ರಾಜನಿದ್ದ, ಅವನ ಹೆಸರು ಹೈಜೆಲೆಕ್. ಅವನ ಒಬ್ಬ ಆಪ್ತ ತರುಣವೀರ ಬಿಯೊವುಲ್ಫ್, ಹೈಜೆಲೆಕ್‌ನ ಸೋದರಳಿಯ. ತನ್ನ ಶೌರ್ಯ ಸಾಹಸಗಳಿಗಾಗಿ ಬಿಯೊವುಲ್ಫ್ ಆಗಲೇ ತುಂಬ ಪ್ರಖ್ಯಾತ. ಅವನು ಗ್ರೆಂಡೆಲ್‌ನ ಘೋರ, ಭೀಷಣ, ದುಷ್ಕೃತ್ಯಗಳ ಬಗೆಗೆ ಕೇಳಿದ್ದ, ದೊರೆ ಹೋಥ್ಲರನಿಗೆ ಒದಗಿದ ಮಹಾ ಸಂಕಟದಲ್ಲಿ ಸಹಾಯವು ಅಗತ್ಯವೆಂಬುದು ಬಿಯೊವುಲ್ಫನಿಗೆ ಗೊತ್ತಾಯಿತು.

ಆ ವೀರಸಾಹಸಿಗೆ ತಡೆಯಲಾಗಲಿಲ್ಲ. ಇಂಥ ಪ್ರಸಂಗಗಳು ಅಂಥವರ ಸತ್ವಪರೀಕ್ಷೆಗೆ ಒಂದು ಆಹ್ವಾನ, ತಮ್ಮ ಕೆಚ್ಚನ್ನು ಒರೆಗೆ ಹಚ್ಚಿ ನೋಡಲು ಒಂದು ಸುವರ್ಣಸಂಧಿ. ಆತ ಒಂದು ಹಡಗು ಸಿದ್ಧಪಡಿಸಿದ. ತನ್ನ ಅತಿ ಧೀರ ನಾವಿಕರಲ್ಲಿ ಹದಿನಾಲ್ಕು ಕೆಚ್ಚೆದೆಯ ಬಂಟರನ್ನು ಆಯ್ದುಕೊಂಡ. ಅವರಲ್ಲೆ ಒಬ್ಬ ಮುದಿ ಜಾಣ ಅನುಭವಿಕ ನಾವಿಕನೂ ಇದ್ದ— ನಾವೆಯನ್ನು ಕಡಲು ದಾಟಿಸಿ ಹೋಥ್ಗರನ ನಾಡಿಗೆ ಒಯ್ಯಲಿಕ್ಕೆ.

ಪ್ರಬಲವಾದ ಗಾಳಿ ಅವನಿಗೆ ನೆರವಾಯಿತು. ಒಂದೇ ದಿನದ ಕಡಲು ಪಯಣದ ನಂತರ ಅವರು ಆಚೆಯ ತೀರವನ್ನು ತಲಪಿದರು. ಅಲ್ಲಿಯ ಗುಡ್ಡ, ಕೊಳ್ಳ, ಸಮತಟ್ಟಾದ ಜವುಗು ಬಯಲುಗಳನ್ನು ದೂರದಿಂದಲೇ ಕಂಡರು. ನೇರ ಹಾಯಬಿಟ್ಟು ಆ ದಂಡೆಗೆ ತೇಲಿ ತಲಪಿ ಅಲ್ಲಿ ಇಳಿದರು. ಅಲ್ಲಿಯ ಕಿರಿಯಾಳದ ರಾಡಿನೀರೊಳಗಿಂದ ನಡೆದು ನೆಲಕ್ಕೆ ಬಂದರು.

ಅಲ್ಲಿ ಅವರಿಗೆ ಹೋಥ್ಗರನ ಒಬ್ಬ ಭಟನು ಭೆಟ್ಟಿಯಾದನು. ಆತ ಅವರ ಹಡಗು ಬರುವದನ್ನು ಕಂಡಿದ್ದನು. ಅವನು ಬಿಯೊವುಲ್ಫನನ್ನು ತನ್ನ ದೊರೆಯ ಭವನಕ್ಕೆ ದಾರಿಕಾಣಿಸುತ್ತ ಒಯ್ದನು. ಬಿಯೊವುಲ್ಫ ಮತ್ತು ಅವನ ಸಂಗಡಿಗರು ದೊರೆಯ ಇದುರಿಗೆ ಬಂದರು. ಬಿಯೊವುಲ್ಫ ಅಂದನು "ಓ ದೊರೆಯೇ, ನಾನು ಹೈಜೆಲಕ್ ರಾಜನ ಕುಟುಂಬದವನು. ನಮ್ಮ ರಾಜಧಾನಿಯಲ್ಲಿ ನನಗೆ ಗೊತ್ತಾಯಿತು: ಈ ನಿಮ್ಮ ಸುಂದರ ರಾಜಭವನವು ಆ ದುಷ್ಟ ಪ್ರಾಣಿ ಗ್ರೆಂಡೆಲ್‌ನ ಉಪಟಳಕ್ಕೆ ಬಲಿಯಾಗಿ ವಾಸಯೋಗ್ಯವಾಗಿ ಉಳಿದಿಲ್ಲವೆಂದು. ನಾನು ಅನೇಕ ವಿಚಿತ್ರ, ಭಯಂಕರ ಪ್ರಾಣಿಗಳನ್ನು ಕೊಂದಿದ್ದೇನೆ. ಅದೂ ಈ ನನ್ನ ಎರಡು ಕೈಗಳಿಂದ ಐವರು ದೈತ್ಯರನ್ನು ಕೊಂದಿದ್ದೇನೆ. ಕಡಲಾಳದ ಕ್ರೂರ ಪ್ರಾಣಿಗಳನ್ನು ನೀರಿನೊಳಗೇ ಹೊಕ್ಕು ಹೋರಾಡಿ ಕೊಂದಿದ್ದೇನೆ. ಈ ದುಷ್ಟ ಪ್ರಾಣಿಯನ್ನೂ ಹೋರಾಡಿ ಕೊಲ್ಲಬಲ್ಲೆ—ಕೊಲ್ಲಬಹುದೋ? ಎಂದು ನಿಮ್ಮಲ್ಲಿ ಕೇಳಲು ಬಂದಿದ್ದೇನೆ. ಇತರರು ಸೋತಲ್ಲಿ ನಾನು ಗೆಲ್ಲಬಹುದು. ಅಥವಾ ಅವರಿಗಿಂತ ಹೆಚ್ಚಿನ ಗೆಲುವು ನನ್ನದಾಗಲಿಕ್ಕಿಲ್ಲ. ನಾನೇ ಈ ಕದನದಲ್ಲಿ ಸಾಯಬಹುದು. ಅದೇ ನನ್ನ ದೈವಗತಿ ಆಗಲೂಬಹುದು. ಹಾಗೆ ಆಗುವುದಿದ್ದರೂ ಅದಕ್ಕೆ ನಾನು ಸಿದ್ಧ. ಸಾವು ಸೆಳೆದೊಯ್ದವನು ಅದೇ ದೇವರ ತೀರ್ಪು, ಅದೇ ಲೇಸು ಎಂದು ತಿಳಿಯಬೇಕು. ಗ್ರೆಂಡೆಲ್ ನನ್ನನ್ನು ಕೊಲ್ಲುವನಾದರೆ ನನ್ನ ಕಳೇಬರಕ್ಕಾಗಿ ಕಾಳಜಿ ಮಾಡುವ ಕಾರಣವಿಲ್ಲ. ಏಕೆಂದರೆ, ಅವನು



ನನ್ನ ದೇಹವನ್ನು ಹೊತ್ತೊಯ್ದು ಕಡಲಾಳದ ತನ್ನ ಮನೆಯಲ್ಲಿ ತಿಂದು ತೇಗುವನು. ಆದರೆ, ಆಗ ನೀವು ಒಂದು ಕೆಲಸ ಮಾಡಬೇಕು— ಈ ನನ್ನ ಕಬ್ಬಿಣದ (ಉಕ್ಕಿನ) ಕವಚವನ್ನು ಹೈಜೆಲೆಕ್ ದೊರೆಗೆ ಕಳುಹಿಸಿಕೊಡಬೇಕು. ಇದು ಅವನ ತಂದೆ ನನಗೆ ತೊಡಿಸಿದ್ದು. ಇದೊಂದು ಅದ್ಭುತ ಅಂಗರಕ್ಷೆ. ಮುಂದಿನದು ದೈವಾಧೀನ! ದೈವ ಎಂದಿಗೂ ತನ್ನ ಅವಶ್ಯಗತಿಯಲ್ಲಿ ಮುನ್ನಡೆಯುತ್ತದೆ!"

ದೊರೆ ಹೋಥ್ಗಾರ್ ಪ್ರಸನ್ನನಾದನು. "ಇಕೋ ಈ ಹಿಯೊರೊತ್ ಭವನವನ್ನು ನಿನ್ನ ವಶಕ್ಕೆ ತೆಗೆದುಕೋ! ಈ ಶ್ರೇಷ್ಠ ಸೌಧವನ್ನು ರಕ್ಷಿಸು. ನಿನ್ನ ಕೀರ್ತಿಯನ್ನು ನೆನೆದುಕೋ. ನಿನ್ನ ಶಕ್ತಿಯನ್ನು ಪ್ರಕಟಿಸು. ಶತ್ರುವಿನತ್ತ ಕಣ್ಣಿಡು. ಯಶಸ್ಸು ನಿನ್ನೊಂದಿಗೆ ಬರುವುದು!" ಎಂದು ಆ ವೀರಸಾಹಸಿಯನ್ನು ಹರಸಿದನು.

*

ರಾತ್ರಿ ಬಂದಿತು. ಬಿಯೊವುಲ್ಫ್ ಮತ್ತು ಅವನ ಸಂಗಡಿಗರು ಹಿಯೊರೊತ್ ಭವನವನ್ನು ಪ್ರವೇಶಿಸಿದರು. ಅವನು ತನ್ನ ಕವಚವನ್ನೂ ಹರಿತಾದ ಖಡ್ಗವನ್ನೂ ತೆಗೆದಿಟ್ಟನು. "ನಾನು ಗ್ರೆಂಡೆಲ್ ಹೋರಾಡುವಂತೆಯೇ ಹೋರಾಡುವೆ, ಖಡ್ಗವನ್ನು ಬಳಸುವುದಿಲ್ಲ. ಏಕೆಂದರೆ ಗ್ರೆಂಡೆಲ್‌ನ ಬಳಿಗೆ ಖಡ್ಗವಿಲ್ಲ. ನಾವಿಬ್ಬರೂ ಕೈ-ಕೈ ಕಾದಾಡುವೆವು!" ಆತ ಅಂದನು.

ರಾತ್ರಿ ಮುಂದುವರಿಯಿತು. ಭವನದಲ್ಲಿ ದಟ್ಟ ಕತ್ತಲೆ ಕವಿಯಿತು. ಅದರ ನೆಳಲುಗಳಲ್ಲಿ ಎಲ್ಲರೂ ನಿದ್ದೆ ಹೋದರು— ಒಬ್ಬನನ್ನು, ಬಿಯೊವುಲ್ಫ್ ಒಬ್ಬನನ್ನು ಉಳಿದು. ಆತ ಮೈಯೆಲ್ಲಾ ಕಣ್ಣಾಗಿ ಎಚ್ಚರವಾಗಿಯೇ ಉಳಿದ. ಆಗ ಗ್ರೆಂಡೆಲ್ ಬಂದ ಎಂದಿನಂತೆ. ಆ ಕಟ್ಟಿರುಳಿನಲ್ಲಿ ಆ ಜವಗು ಭೂಮಿಯ ಬಟ್ಟ ಬಯಲಿನಲ್ಲಿ ದಾಪುಗಾಲಿನಿಂದ ಸದ್ದಿಲ್ಲದೆ ನಡೆದು ಬಂದನು. ಎಂದಿನಂತೆ ತನ್ನ ಕಪ್ಪು ಮುಷ್ಟಿಯ ಪ್ರಹಾರದಿಂದ ಕದದ ಬಣ್ಣದ ಕಂಬಿಗಳನ್ನು ತೆರೆದು ಒಳ ನುಗ್ಗಿದನು. ಕತ್ತಲೆಯಲ್ಲಿ ಕೈ ಪಂಜಿನಿಂದ ತಡಕಾಡುತ್ತ ಸಾಗಿದನು. ಆತನ ಕೈಗೆ ಒಬ್ಬ ಸಿಕ್ಕ. ಅವನನ್ನು ಅಲ್ಲಿಯೇ ಮುರಿದಿಕ್ಕಿ ಕೊಂದು ಮತ್ತೆ ಮುನ್ನುಗ್ಗಿದನು. ಬಿಯೊವುಲ್ಫ್ ಅವಿತಿರಬಹುದಾದ ಸ್ಥಳದಲ್ಲಿ ಆತ ಹುಡುಕಿದನು.



ಬಿಯೊವುಲ್ಫ್ ಹೆದರಲಿಲ್ಲ. ಅವನ ಎದೆಯಲ್ಲಿ ಭಯವೆಂಬುದೇ ಇದ್ದಿಲ್ಲ. ಅವನು ತತ್‌ಕ್ಷಣ ಮುಂದೆ ಚಾಚಿ ಬಂದು ಗ್ರೆಂಡೆಲ್‌ನ ಪಂಜವನ್ನು ಗಟ್ಟಿಯಾಗಿ ಬಿಗಿದಂ ಹಿಡಿದನು. ಆಗ ಆ ಹಿಡಿತಕ್ಕೆ ಗ್ರೆಂಡೆಲ್ ನಿಜವಾಗಿಯೂ ಗಾಬರಿ

ಯಾದನು. ತನ್ನ ಭುಜವನ್ನೇ ಬಲವಾಗಿ ಹಿಡಿದಿದ್ದ ಆ ಶಕ್ತಿಯನ್ನು ಆತ ಗ್ರಹಿಸಿದನು. ದೊಡ್ಡದನಿಯಲ್ಲಿ ಆತ ಕೂಗಿದನು. ತನ್ನನ್ನು ಬಿಡಿಸಿಕೊಳ್ಳಲು ಹೆಣಗಿದನು. ಆದರೆ ಅವನ ತೋಳು ಬಿಯೊವುಲ್ಫ್‌ನ ಹಿಡಿತದಿಂದ ಜಾರಲೇ ಇಲ್ಲ. ಗ್ರೆಂಡೆಲ್ ಮಿಸುಕಾಡಿದನು. ಆದರೆ ಮಿಸುಕಾಡಿದಷ್ಟೂ ಇನ್ನಷ್ಟು ಬಲುಮೆಯಿಂದ, ಬಿರುಸಾಗಿ ಬಿಯೊವುಲ್ಫ್ ಅವನ ಭುಜವನ್ನು ತನ್ನ ವಜ್ರಮುಷ್ಟಿಯಲ್ಲಿ ಹಿಡಿದಿಟ್ಟನು.

ಆಗ ಗ್ರೆಂಡೆಲ್ ಇನ್ನಷ್ಟು ಹೆದರಿ, ಕೆರಳಿ, ಹುಚ್ಚನಾದನು. ಮನಬಂದಂತೆ ಹುಚ್ಚಾಪಟ್ಟೆ ಹೋರಾಡಿದನು, ಕೂಗಾಡಿದನು, ಅತ್ತನು. ನೋವಿನಿಂದ ನರಳಿದನು. ಕತ್ತಲೆಯಲ್ಲಿ ಅವನ ನುಗ್ಗಾಟ ಹಾರಾಟಕ್ಕೆ, ಪೀಠಗಳೆಲ್ಲ ಅತ್ತಿತ್ತ ಉರುಳಿ ನುಗ್ಗುನುಗ್ಗಾದವು. ಹಿಯೊರೊತ್ ಭವನವು ಆ ಹೋರಾಟದ ಅಬ್ಬರಕ್ಕೆ ಮೊಳಗಿತು. ಅದರ ಗೋಡೆಗಳಿಗೆ ಕಬ್ಬಿಣದ ಕಂಬಿಗಳನ್ನು ಜಡಿದು ಜೋಡಿಸಿರದಿದ್ದರೆ ಅವೂ ಒಡೆದು ಕಳಚಿ ಬೀಳುತ್ತಿದ್ದವು.

ಆದರೆ ಬಿಯೊವುಲ್ಫ್ ಆ ದೈತ್ಯನ ತೋಳನ್ನು ಬಿಡಲಿಲ್ಲ. ಅವನ ಪಂಜದ ಮೇಲಿನ ತನ್ನ ಹಿಡಿತವನ್ನು ಸಡಲಿಸಲಿಲ್ಲ. ಆ ಉಕ್ಕಿನ ಹಿಡಿತಕ್ಕೆ ಗ್ರೆಂಡೆಲ್ ಭಯಂಕರವಾಗಿ ಕೂಗಾಡಿದನು. ಘೋರವಾಗಿ ಹೋರಾಡಿದನು. ಆ ಕೂಗು ಕೇಳಿದವರೆಲ್ಲರಿಗೆ ಕರುಳು ಕಿತ್ತುಬಂದಂತಾಯಿತು.

ಗ್ರೆಂಡೆಲ್‌ನಿಗೆ ಹೆಗಲಲ್ಲಿ ಆಳವಾದ ಗಾಯವಾಯಿತು. ಅಲ್ಲಿಯ ಮೂಳೆ ಹೊರಬಂದಿತು. ಆದರೂ ಆ ನರಪಶು ವೀರ ಬಿಯೊವುಲ್ಫನಿಗೆ ಸೋಲಲೊಲ್ಲ. ಆದರೆ ಆ ಹೋರಾಟದ ರಭಸಕ್ಕೆ ಅವನ ತೋಳು ಹೆಗಲಿನಿಂದ ಕಿತ್ತು ಹೊರಬಂದು ದೇಹದಿಂದ ಕಳಚಿ ಬಿದ್ದಿತು.

ಆಗ ಆತ ಸೋತು ಅಲ್ಲಿಂದ ಕಾಲ್ದೆಗೆದ. ಭವನದಿಂದ ಹೊರಗೆ ಓಡಿ ಬಯಲನ್ನು ದಾಟಿ ಕೊಳವನ್ನು ಹೊಕ್ಕು ತನ್ನ ಮನೆಯನ್ನು ಸೇರಿದ. ಮಗನ ಅವಸ್ಥೆಯನ್ನು ಕಂಡು ಅವನ ತಾಯಿ ಕೆರಳಿ ಕ್ರೋಧಾವಿಷ್ಟಳಾದಳು. ತಾನು ಮರುದಿನ ರಾತ್ರಿ ಕೊಳದಿಂದ ಎದ್ದು ಬಂದು, ಭವನದ ಮೇಲೆ ದಾಳಿ ಮಾಡಿದಳು. ಆದರೆ ಬಿಯೊ-ವುಲ್ಫ್ ಅವಳನ್ನು ಲೆಕ್ಕಿಸುವನೆ? ಕವಚ ಖಡ್ಗ ಹಿಡಿದು ಅವಳನ್ನು ಬೆನ್ನಟ್ಟಿ ಕೊಳವನ್ನು ಸೇರಿದನು. ಅಲ್ಲಿಯ ನೆಲಮನೆಯಲ್ಲಿ ಅವಿತ ಆ ರಕ್ಕಸಿಯನ್ನು ಕೊಂದನು. ಅಲ್ಲಿಯೇ ಬಿದ್ದಿದ್ದ ಗ್ರೆಂಡೆಲ್‌ನ ಕಳೇಬರವನ್ನು ನೋಡಿ ಸಂತೋಷಪಟ್ಟನು.

■

ಬೆಳಗಾಯಿತು. ಬೆಟ್ಟ ಕೊಳ್ಳಗಳಲ್ಲಿ ಹಗಲ ಬಿಸಿಲು ನಿಧಾನವಾಗಿ ಹಬ್ಬಿತು. ಕೊಳವು ಕೆಂಪಾಗಿ ಕುದಿಯುತ್ತಿತ್ತು. ದೊಡ್ಡ ದೊಡ್ಡ ಅಲೆಗಳು ಏಳುತ್ತಿದ್ದವು, ಉರುಳುತ್ತಿದ್ದವು. ಶುಭ್ರ ಸಿರಿಭ್ರ ಬೆಳಕು ಎಲ್ಲೆಡೆ ಚೆಲ್ಲಿತ್ತು. ಆವರೆಗೆ ಗುಡ್ಡ–ಬೆಟ್ಟ–ಕೊಳ್ಳ–ಬಯಲುಗಳಲ್ಲಿ ದಟ್ಟವಾಗಿ ತುಂಬಿಕೊಂಡಿದ್ದ ಮಬ್ಬಿನ ಮುಸುಕೆಲ್ಲ ಹರಿದು ಹಿಂಜಿ ಹಿಂಜರಿದು ಹೋಗಿತ್ತು. ಆ ಸೀಮೆಯನ್ನು ಆವರಿಸಿದ ಸಾವಿನ ಶಾಪ ದೂರವಾಗಿತ್ತು, ಆ ಕಪ್ಪು ರಾಕ್ಷಸ ತಾಯಿಯೊಂದಿಗೆ ಸತ್ತು ಬಿದ್ದಿದ್ದನು.

ನಸುಕಿಗೆ ಹೋಥ್ಗರನ ಭವನದಲ್ಲಿ ಭಯಚಕಿತರಾದ ಜನ ಅಲ್ಲಲ್ಲಿ ಮುರಿದು ಅಸ್ತವ್ಯಸ್ತ ಬಿದ್ದ ಪೀಠಗಳ ನಡುವೆ ಬಿಳಿಚಿದ ಮೋರೆಗಳನ್ನೆತ್ತಿ ಬೆದರಿದ ಕಣ್ಣುಗಳಿಂದ ನೋಡುತ್ತ ನಿಂತಿದ್ದರು. —ನೆಲವೆಲ್ಲ ನೆತ್ತರ ಬಳಿದು ಕಪ್ಪು ಕೆಂಪು. ಕದಗಳೆಲ್ಲ ಒಡೆದು ಪುಡಿಪುಡಿ. ಮತ್ತೆ ಅಲ್ಲಿಯೇ ಬದಿಗೆ ಬಿದ್ದಿತ್ತು ಗ್ರೆಂಡೆಲ್‌ನ ತೋಳು—ಕಪ್ಪು ಪಂಜ ಹಾಗೂ ಅದರ ಉದ್ದುದ್ದ ನಖಗಳು ನೆತ್ತರದ ಮಡುವಿನಲ್ಲಿ ಚಾಚಿ!...ಅವರಿಗೆ ಗೊತ್ತಾಯಿತು. ತಮ್ಮ ನರವೀರ ನಾಯಕನು ತನ್ನ ಪ್ರತಿಜ್ಞೆಯನ್ನು ಪೂರೈಸಿದ್ದ.

ದಿನ ಬೆಳೆದಂತೆ ನೆರೆಕರೆಯ ರಾಜರೂ ರಾಜಪುತ್ರರೂ ಮನ್ನೆಯರೂ ಈ ಅದ್ಭುತವನ್ನು ನೋಡಲು ನೆರೆದರು. ಈ ದೈತ್ಯ ದ್ವಂದ್ವ

ಯುದ್ಧದ ಕರಾಳ ಕುರುಹುಗಳನ್ನು ಕಂಡರು— ಮೈಯೆಲ್ಲ ಹಣ್ಣಾಗಿ ಗಾಯಗೊಂಡು ರಕ್ತ ಬಸಿದ ಗ್ರೆಂಡೆಲ್‌ನ ಹೆಜ್ಜೆ ಗುರುತು ಕೊಳದ ವರೆಗೆ ಸಾಗಿದ್ದವು. ಕೊಳದಲ್ಲಿ ಮೇಲೆ ಬಂದು ತೇಲುತ್ತಿದ್ದ ಅವನ ವಿಕರಾಳ ಪ್ರಚಂಡ ಹೆಣವನ್ನು ನೋಡಿದರು.

ಅನಂತರ ಆ ಹಿಯೊರೊತ್ ಭವನವನ್ನು ಸಿಂಗರಿಸಿ ಸಜ್ಜುಗೊಳಿಸಲಾಯಿತು— ಹಿಂದೆಂದೂ ನಡೆದಿರದಂಥ ಭವ್ಯ ಔತಣದ ಸಮಾರಂಭಕ್ಕಾಗಿ. ಖಾದ್ಯಪ್ರಿಯ ಭಕ್ಷ್ಯ ಭೋಜ್ಯಗಳನ್ನು ಹೇರಳವಾಗಿ ಬಟ್ಟಲುಗಳಲ್ಲಿ ಹೇರಿ ಇಡಲಾಯಿತು. ಗೋಡೆಗಳನ್ನೆಲ್ಲ ಜರತಾರಿ ರತ್ನಗಂಬಳಿಗಳಿಂದ ಹೊದೆಯಲಾಯಿತು.

ರಾತ್ರಿ ಕವಿಯಿತು. ಹಿಲಾಲುಗಳ ಬೆಳಕಿನಲ್ಲಿ ಎಲ್ಲರೂ ಆ ಭೋಜನಶಾಲೆಯಲ್ಲಿ ಕುಳಿತರು—ಬಿಯೊವುಲ್ಫ್‌ನ ಗೆಲುವಿನ ಹಬ್ಬವನ್ನು ಆಚರಿಸಲಿಕ್ಕೆ. ಅವನ ಗೌರವಕ್ಕೆ ಸ್ವಸ್ತಿಪಾನವಾಗಬೇಕು. ಹ್ರೋಥ್ಗರನ ರಾಣಿಯು ಮದ್ಯ ತುಂಬಿದ ಪಾತ್ರೆ ಹಿಡಿದು ಬಂದಳು. ತನ್ನ ಯಜಮಾನರಿಗೂ ಅಂದಿನ ಏಕೈಕ ವಿಜಯ ವೀರನಿಗೂ ಮದ್ಯವನ್ನು ಪೇಲೆ ತುಂಬಿ ನೀಡಿದಳು. ಅನಂತರ ದೊರೆ ಹ್ರೋಥ್ಗರ್ ಎದ್ದು ನಿಂತು ಆ ಭೋಜನ ಕೂಟವನ್ನು ಉದ್ದೇಶಿಸಿ, ನರವೀರ ಬಿಯೊವುಲ್ಫನಿಗೆ— ನಾವು ಸೋತಲ್ಲಿ ನೀನು ಗೆದ್ದಿರುವಿ. ಅದಕ್ಕಾಗಿ ನಿನ್ನನ್ನು ಇನ್ನೂ ಮಿಗಿಲಾಗಿ ಗೌರವಿಸುತ್ತೇವೆ. ನರಶ್ರೇಷ್ಠನೇ, ನಿನ್ನನ್ನು ನಾನು ನನ್ನ ಮಗನೆಂದೇ ಭಾವಿಸುತ್ತೇನೆ. ನೀನು ಪರಮವೀರ ಕೃತ್ಯ ಗೈದಿರುವಿ. ನಿನ್ನಂಥ ಕೂಸನ್ನು ಹೆತ್ತ ಆ ಸನ್ಮಾನ್ಯ ತಾಯಿ ನಿಜವಾಗಿಯೂ ಧನ್ಯೆ! ನಿನ್ನ ಪ್ರಸವ ಅವಳಿಗೆ ದೈವಾನುಗ್ರಹ. ನಮಗೂ ಹಾಗೆಯೇ. ಅದಕ್ಕಾಗಿ ನಾವು ದೇವರಿಗೆ ಆಭಾರಿ!" ಎಂದು ಮಾತು ಮುಗಿಸಿದಾಗ ಊಟಕ್ಕೆ ಕುಳಿತವರೆಲ್ಲರೂ ಹರ್ಷೋದ್ಗಾರಗಳಿಂದ ಕೇಕೆ ಹಾಕಿ ಎದ್ದು ನಿಂತು ಬಿಯೋವುಲ್ಫನಿಗೆ ಶುಭವಾಗಲಿ ಎಂದು ತಮ್ಮ ತಮ್ಮ ಮದ್ಯದ ಪೇಲೆಗಳನ್ನು ತುಟಿಗೆ ಹಚ್ಚಿದರು.

ಮುಂದೆ ವಿಜಯ ವೀರ ಬಿಯೊವುಲ್ಫ್ ತನ್ನ ರಾಜ್ಯಕ್ಕೆ ಮರಳಿ ಹೋದನು. ಅವನ ಸೋದರ ಮಾವನಿಗೂ ಅಳಿಯನ ಪರಾಕ್ರಮದಿಂದ ಪರಮ ಹರ್ಷವಾಯಿತು. ಮುಂದೆ ಬಿಯೊವುಲ್ಫ್ ಅನೇಕ ಸಾಹಸಗಳನ್ನು ಮಾಡಿ ವಿಖ್ಯಾತನಾದನು. ಹೈಜೆಲೆಕ್ ಸತ್ತನಂತರ ಅವನ ಮಗ ಹರ್ಡರೆಟ್ ರಾಜನಾದನು. ಬಿಯೊವುಲ್ಫ್ ಅವನ ಬಲಗೈ. ಆದರೆ ಸ್ವೀಡನ್‌ನೊಂದಿಗೆ ನಡೆದ ಒಂದು ಯುದ್ಧದಲ್ಲಿ ಹರ್ಡರೆಟ್ ಮಡಿದಾಗ ಬಿಯೊವುಲ್ಫನೇ ಡೆನ್ಮಾರ್ಕಿಗೆ ದೊರೆಯಾದನು. ❁



ಮಧ್ಯಪ್ರದೇಶದ ಸೆಹೋರ್‌ನಲ್ಲಿರುವ ಒಬ್ಬ ಸರ್ಕಾರಿ ನೌಕರನಿಗೂ ಜಗತ್ ಪ್ರವಾಸದ ಹುಚ್ಚು. ಆದರ ಬಂದ ಪಗಾರ ಹೊಟ್ಟೆ ಬಟ್ಟೆಗೆ ಸಾಲದಿರುವಾಗ ಜಗತ್ ಪರ್ಯಟನ ಮಾಡಲು ಹೇಗೆ ಸಾಧ್ಯ?

ಆದಕ್ಕೊಂದು ಉಪಾಯವನ್ನಾತ ಕಂಡುಹಿಡಿದ.

ನೇತ್ರದಾನ ಶಿಬಿರದವರು ಈತನ ಊರಿಗೆ ಬಂದಿದ್ದರಂತೆ. ಈತ ತನ್ನ ನೇತ್ರದಾನಕ್ಕೂ ವಿಶ್ವಪರ್ಯಟನಕ್ಕೂ ಲಕ್ಷಣವಾಗಿ ತಳುಕು ಹಾಕಿದ.

ನೇತ್ರದಾನ ಶಿಬಿರದವರಿಗೆ ಒಂದು ಕರಾರು ಹಾಕಿದ.

"ನಾನು ಸತ್ತನಂತರ ನನ್ನ ನೇತ್ರಗಳನ್ನು ಒಬ್ಬ ಲಕ್ಷಾಧೀಶನಿಗೆ ದಾನ ಮಾಡುವೆ. ಆದರೆ ಆ ಲಕ್ಷಾಧೀಶ ಅಡ್ವಾನ್ಸಾಗಿ, ನನ್ನ ವಿಶ್ವಪರ್ಯಟನದ ವೆಚ್ಚವನ್ನು ಈಗಲೇ ಕೊಟ್ಟುಬಿಡಬೇಕು!"

–ವಾಸುದೇವ ರಾ. ಕಲಘುಗಿ

– ೯೬ –

## ಸಾಯುವ ಆಟ

ಸಾವು ಯಾವಾಗಲೂ ನಮ್ಮ ಸಂಗಡ ಇದೆ; ಆದರೆ ಮತ್ತೆ ಯಾವ ರೀತಿಯಲ್ಲಿ ಅಲ್ಲವಾದರೂ ಮಾತಿನಲ್ಲಿ ಅದರಿಂದ ತಪ್ಪಿಸಿಕೊಳ್ಳಲು ನಾವು ಪ್ರಯತ್ನಿಸುತ್ತಲೇ ಇರುತ್ತೇವೆಂಬುದಕ್ಕೆ ಭಾಷೆಗಳು ಕುರುಹು ಕೊಡುತ್ತವೆ. ಉದಾಹರಣೆಗೆ ಬಡಬಗ್ಗರು ಮತ್ತು ಸ್ಥಾನಮಾನಹೀನರು ಮಾತ್ರ ಕನ್ನಡದಲ್ಲಿ ಸಾಯುತ್ತಾರೆ. ಆರ್ಢ್ಯರು ಸ್ಥಾನವುಳ್ಳವರು ಸಂಸ್ಕೃತದಲ್ಲಿ ನಿಧನ ಹೊಂದುತ್ತಾರೆ; ಅಥವಾ ಪಂಚತ್ವ ಹೊಂದುತ್ತಾರೆ; ಇಲ್ಲವೇ ಕಾಲವಾಗುತ್ತಾರೆ; ಅಷ್ಟು ಎತ್ತರದ ಸ್ಥಾನವಿಲ್ಲದಿದ್ದರೆ ಮೃತರಾದರೂ ಆಗುತ್ತಾರೆ. ಹೆಸರು ಪಡೆದವರಾದರೆ ಅವರು ಕೀರ್ತಿಶೇಷರಾಗಲೂಬಹುದು. ಕನ್ನಡದಲ್ಲಿಯೇ ಆದರೆ ಅವರು ಸರಳವಾಗಿ ಹೋಗಿಬಿಡುವುದುಂಟು. ಮಡಿಯುವುದು ಅಥವಾ ಹಳೆಗನ್ನಡದಲ್ಲಿ ಪಡುವುದೂ ಅವರಿಗೆ ಸಾಧ್ಯವಿದೆ

ಸಾಮಾನ್ಯ ಬಳಕೆ ಮಾತಿನಲ್ಲಿ ಯಾವೊಂದು ಅನಿಷ್ಟವನ್ನು ಹೇಳುವುದು ಮರ್ಯಾದೆಯಲ್ಲ. ಎಷ್ಟೋ ಅನಿಷ್ಟ ವಿಷಯಗಳನ್ನು ಸಂಸ್ಕೃತದಲ್ಲಿ ಹೇಳಿ ಅನಿಷ್ಟಕ್ಕೊಳಗಾದವರ ನೋವನ್ನು ಕಮ್ಮಿ ಮಾಡಬಹುದು. ಉದಾಹರಣೆಗೆ ಸಂಸ್ಕೃತದಲ್ಲಿ ನಿಧನರಾಗುವುದೆಂದರೆ ಮಲಗಿಸಲ್ಪಡುವುದು, ಇಡಲ್ಪಡುವುದು. (ನಿ-ಧಾ ಎಂಬ ಸಂಸ್ಕೃತಧಾತು ಇಡು, ಮಡಗು ಎಂಬರ್ಥದ್ದು; ನಿಧಿ. ನಿಧಾನ ಅದೇ ಧಾತುವಿನ ಮಕ್ಕಳು.) ಬಹುಶಃ ಹೆಣಗಳನ್ನು ಹುಗಿಯುತ್ತಿದ್ದ ಕಾಲದ ನೆನಪನ್ನು "ನಿಧನ" ಹೊತ್ತುಕೊಂಡಿದೆ. ಇಂಗ್ಲಿಷಿನಲ್ಲಿ laying to rest— ವಿಶ್ರಾಂತಿಗೆ ಮಲಗಿಸುವುದು —ಎಂದು ಹೆಣ ಹುಗಿಯುವುದಕ್ಕೆ ಹೇಳುತ್ತಾರಲ್ಲ ಗೌರವಪೂರ್ವಕವಾಗಿ—"ನಿಧನ"ದ ತಾತ್ಪರ್ಯವೂ ಬಹುಶಃ ಅದೇ. ಪಡು ಎಂದು ಹಳೆಗನ್ನಡದಲ್ಲಿ ಸಾಯುವುದಕ್ಕಿರುವ ಶಬ್ದವೂ ಮಲಗುವುದು ಎಂಬರ್ಥದ್ದೇ. ಶಾಶ್ವತವಾಗಿ ಮಲಗುವುದು ಎಂದರೆ ಮರಣ. ಪಂಚತ್ವ ಹೊಂದುವುದು ಎಂದರೆ ಐದಾಗಿ ಹೋಗುವುದು. ಸಕಲ ಪದಾರ್ಥಗಳೂ— ಮಾನವ ಶರೀರವೂ ಸೇರಿದಂತೆ— ಪಂಚಭೂತಗಳ ಸಂಯೋಗದಿಂದ (ನೆಲ, ನೀರು, ಗಾಳಿ, ಬೆಳಕು ಮತ್ತು ಆಕಾಶ) ನಿರ್ಮಿತವಾಗುತ್ತವೆ. ಮರಣಾನಂತರ ಅವು ವಿಭಾಗವಾಗಿ ತಮ್ಮ ಮೂಲದ್ರವ್ಯಗಳಲ್ಲಿ ಲೀನವಾಗುತ್ತವೆ ಎಂಬ ತತ್ವಜ್ಞಾನಿಗಳ ವಿಚಾರವನ್ನು "ಪಂಚತ್ವ" ಸೂಚಿಸುತ್ತದೆ. ಕಾಲವಾಗುವುದು ಎಂದರೆ ಕಾಲದೇವ ವಶವಾಗುವುದು. "ಕಾಲ" ಎಂದರೆ ಯಮ ಮತ್ತು "ಕಾಲ" ಎಂದರೆ ಸಮಯ. ಯಮ ಕೊಂಡುಹೋದ ಎನ್ನಿ ಅಥವಾ ಕಾಲ ಅವನನ್ನು ದಾಟಿ ಹೋಯಿತು ಎನ್ನಿ. ಕೀರ್ತಿಶೇಷ ಎಂದರೆ ಅವನ ಕೀರ್ತಿ ಮಾತ್ರ ಉಳಿಯಿತು, ಕಾಯ ಉಳಿಯಲಿಲ್ಲ. ಶೇಷ ಎಂದರೆ ಉಳಿದದ್ದು (ಕೀರ್ತಿ ಎಂಥದೇ ಇರಲೊಲ್ಲದೇಕೆ!)

ಹೋಗಿಬಿಡುವುದು ಸಾವಿಗೊಂದು ಮರ್ಯಾದೆಯಾದ ಕನ್ನಡ ಪದ. ತಿರುಗಿ ಬಾರದಲ್ಲಿಗೆ ಹೋದ. ಅವನು ಬಿಟ್ಟ ಮೈಗಿಂತ ಭಿನ್ನವಾದ ಅವನು ಇದ್ದಾನೆ. ಇಲ್ಲಿಂದ ಹೋಗಿದ್ದಾನೆ ಅಷ್ಟೇ. ಸಂಸ್ಕೃತದಲ್ಲಿ ಅದನ್ನೇ ಇನ್ನೂ ಗಂಭೀರವಾಗಿ ಗತಿಸಿದನು ಎನ್ನುತ್ತೇವೆ. (ಗಮ್—ಗತೌ—ಹೋಗುವುದು.) ಸಾವಿನ ಚರಮತ್ವವನ್ನೂ ಪರಮತ್ವವನ್ನೂ ಅವರ ಕೈಯಿಂದ ಕಸಿದುಕೊಳ್ಳುದಕ್ಕಾಗಿ ಹೋದನು ಎಂಬ ಮಿದು ಮಾತನ್ನು ಬಳಸಿದ ನಂತರ ಸಾವು ಸೇಡು ತೀರಿಸಿಕೊಂಡಂತೆ ಕಾಣುತ್ತದೆ. ಯಾಕೆಂದರೆ ಹೋಗು, ಹೋಗಿ ಬಿಡುಎಂಬುದಕ್ಕೆ ಸಾವಿನ ಅಮಂಗಲದ ಸೊಂಕು ತಗಲಿಕೊಂಡಿತು. ಸಾಯು ಎನ್ನುವುದಕ್ಕೆ ಹೋಗು ಎಂದ

ಹೇಳಿ ಹೋಗು ಎಂದರೆ ಸಾಯು ಎಂದೇ ಆಗಲಿಲ್ಲವೇ? ಆದ್ದರಿಂದ ದಕ್ಷಿಣ ಭಾರತದಲ್ಲಿ ಯಾರೂ ತನಗಾಗಲಿ ತನಗೆ ಬೇಕಾದ(ಜೀವಂತ)ವರಿಗಾಗಲಿ ಬರೀ ಹೋಗು ಎಂಬ ಪದವನ್ನು ಪ್ರಯೋಗಿಸಲು ಒಪ್ಪುವುದಿಲ್ಲ. "ಹೋಗಿ ಬರುತ್ತೇನೆ," "ಹೋಗಿ ಬನ್ನಿ" ಎಂದೇ ಹೇಳಬೇಕು. "ಆಗ ಬಾ, ಈಗ ಬಾ, ಹೋಗಿ ಬಾ, ಎನ್ನದೆ" ಎಂದು ಸರ್ವಜ್ಞ ಹೇಳುತ್ತಾನೆ. ಬಿಕ್ಕೆ ಬೇಡ ಬಂದವರಿಗೂ ಹೋಗು ಎನ್ನಬಾರದು. ಹೋಗಿ ಬಾ ಎಂದೇ ಬೀಳ್ಕೊಡಬೇಕು! ನಮಗೆ ಅವನ ಜೋಳಿಗೆ ಭರ್ತಿ ಮಾಡಲು ಇಷ್ಟವಿಲ್ಲದಿದ್ದರೇನು, ಬೇರೆಯವರ ಮನೆಗಳಲ್ಲಾದರೂ ತಿರುಪೆ ಎತ್ತಿ ನಾಲ್ಕೊಪ್ಪತ್ತು ಬದುಕಿರಲಿ ಪಾಪ! ರಾಜೀವ ಗಾಂಧಿಯವರಿಗೆ ನಮ್ಮೀ ಹೋಗಿ ಬರುವ ಸೌಜನ್ಯದ ಮಾತು ಬಲು ಮೆಚ್ಚಿಕೆಯಾಯಿತಂತೆ. ನಮ್ಮಂತೆ ತಮಿಳರೂ "ಪೋಯಿಟ್ಟ್‌ವಾ" ಎಂದೇ ಹೇಳಿಯಾರು; ಬರೀ "ಪೋ" ಎಂದು ನುಡಿಯರು. ಇಂಗ್ಲಿಷನ್ನೇ ಬಳಸುವಾಗಲೂ ಅವರು go ಎನ್ನರು. ಒಬ್ಬ ವಿದೇಶೀಯನ ಹತ್ತಿರ ಕೆಲಸವಿದ್ದ ತಮಿಳನೊಬ್ಬ ಕೆಲಸ ಮುಗಿಸಿ ಬೀಳ್ಕೊಡುವಾಗ "I will go and come" ಎಂದನಂತೆ. ಆ ವಿದೇಶೀ ಮನುಷ್ಯ ಮಿಕಿ ಮಿಕಿ ನೋಡುತ್ತ, ಇವನ ಕೆಲಸ ಆಗಿದೆ ಮತ್ತೇಕಿಲ್ಲಿ ಪುನಃ ಬಂದು ಹೊತ್ತು ಹಾಳು ಮಾಡುತ್ತಾನೆ ಎಂದು ತಲೆ ಕೆರೆದುಕೊಂಡನಂತೆ! ಇಂಗ್ಲಿಷಿನಲ್ಲೇ ಏಕೆ? ಉತ್ತರ ಭಾರತದ ಭಾಷೆಗಳಲ್ಲಿ ಕೂಡ ಸಾವು ಇಷ್ಟು ದೂರದಿಂದ ಅಶುಭವನ್ನು ಮಾಡಲಾರದು. "ಮರಣವೇ ಮಹಾನವಮಿ" ಎಂದ ದಕ್ಷಿಣದಲ್ಲಿ ಸಾವು ಇಷ್ಟು ಭಯಂಕರವಾಗಿರುವುದು ಸೋಜಿಗವಲ್ಲವೇ?

ಆದರಿದು ಕೇವಲ ದ್ರಾವಿಡಕ್ಕೇ ಮೀಸಲಾದ ಭಾವನೆಯಲ್ಲ. ಸಂಸ್ಕೃತದಲ್ಲಿ ಕೂಡ ಹೋಮ ಮುಗಿಸಿ ಅಗ್ನಿಯನ್ನು ಬೀಳ್ಕೊಡುವಾಗ, "ಗಚ್ಛ ಗಚ್ಛ ಸುರಶ್ರೇಷ್ಠ ಪುನರಾಗಮನಾಯ ಚ" (ಹೋಗು ಹೋಗು ದೇವೋತ್ತಮನೇ, ಮತ್ತೆ [ಕರೆದಾಗ] ಬರುವುದಕ್ಕಾಗಿ) ಎಂದು ಪುರೋಹಿತರು ಹೇಳುತ್ತಾರೆ. ಬರೀ ಹೋಗು ಎಂದು ಹೇಳಿದರೆ ಅಗ್ನಿ ಬೇಜಾರು ಮಾಡಿಕೊಂಡು ತಿರುಗಿ ಬಾರದೇನೇ ಇದ್ದರೆ?

ಸಾವು ಅಮಂಗಲ ಮತ್ತು ಅನಾಗರಿಕವಾಗಿರುವುದು ನಮ್ಮಲ್ಲಿ ಮಾತ್ರವಲ್ಲ. ಉತ್ತರ ಭಾರತದಲ್ಲಿಯೂ ಮರ್‌ಗಯಾ (ಸತ್ತುಹೋದ) ಅನ್ನುವುದು ಮರ್ಯಾದೆಯಲ್ಲ. ಅವರು ಗುಜರ್ ಬಸೇ (ಪಾರಸಿಕ ಭಾಷೆಯಲ್ಲಿ ಗುಜರ್‌ನಾ = ತೀರುವುದು, ತಲಪುವುದು, ದಾಟುವುದು, ಹಾಜರಾಗುವುದು) ಎಂದಾರು. ಅಥವಾ ಶುದ್ಧ ಹಿಂದಿಯಲ್ಲಿ ಸಿಧಾರೇ (= ಹೋದರು, ಸಾಗಿದರು) ಎಂದಾರು. ಇಂಗ್ಲಿಷಿನವರು he passed away— ಅವನು ದಾಟ ಹೋದ (ಇಲ್ಲಿಂದ) ಎನ್ನುತ್ತಾರೆ; ಅಥವಾ expired (= ಉಸಿರು ಬಿಟ್ಟ) ಎಂದರೂ ಸೈ. ಆದರೂ die (= ಸಾಯು) ಎನ್ನುವ ಪದಕ್ಕೆ ನಾವು ಅಂಜುವಷ್ಟು ಅವರು ಅಂಜುವುದಿಲ್ಲ. ಅಲ್ಲಿ ಸಾವು ಅನಿಷ್ಟವಾದರೂ ಅಷ್ಟು ಮೈಲಿಗೆಯಲ್ಲ!

ಇಷ್ಟರಾದವರಿಗೆ ಗೌರವಪೂರ್ವಕ ಸಾಯುವುದಕ್ಕೆ ಶಬ್ದಗಳಿದ್ದಂತೆ ಸಲ್ಲದವರಿಗೆ ತಿರಸ್ಕಾರಪೂರ್ವಕ ಸಾಯುವ ಪದಗಳೂ ಭಾಷೆಗಳಲ್ಲಿವೆ. ಕನ್ನಡದಲ್ಲಿ ಗೊಟಕ್ಕೆನ್ನುವುದು, ನೆಗೆದು ಬೀಳುವುದು ಇದೆ. ಗೊಟಕ್ಕೆನ್ನುವುದು ಕೊನೆಯ ಉಸಿರು ಬಿಡುವಾಗಿನ ಸಪ್ಪಳಕ್ಕೆ ಅನ್ವಯಿಸುತ್ತಿದ್ದರೆ ನೆಗೆದು ಬೀಳುವುದರ ಮೂಲ ಬೆದಕುವುದು ಕಷ್ಟ. ಉತ್ತರ ಕರ್ನಾಟಕದಲ್ಲಿ ಇದಕ್ಕೆ ಜಿಗಿದ ಎನ್ನುತ್ತಾರೆ. ಸಾಯುವುದಕ್ಕೂ ನೆಗೆಯುವುದಕ್ಕೂ ಸಂಬಂಧ ಹಳೆಯದು. ಗೋವಿನ ಕಥೆಯ ಹುಲಿರಾಯ "ಹಾರಿ ನೆಗೆದು ತನ್ನ ಪ್ರಾಣವ ಬಿಟ್ಟನು," ಎಂದು ಆ ಪದ್ಯದ ಒಂದು ಪಾಠವಿದೆ. ಉತ್ತರ ಕರ್ನಾಟಕದಲ್ಲಿ ಸೆಟೆದ ಎನ್ನುವ ಇನ್ನೊಂದು ತುಚ್ಛೀಕಾರದ ಪದವಿದೆ. ಇದು ಸತ್ತವನ ಮೈ ಕೊರಡಾಗುವುದನ್ನು ಆಧರಿಸಿದೆ.

**–ಪಾವೆಂ.**

# ರೈಲ್ವೆಯೊಡನೆ

ಆಗಿನ್ನೂ ಕರ್ನಾಟಕ ರಾಜ್ಯವು ನಿರ್ಮಾಣಗೊಂಡು ಕೆಲವೇ ವರ್ಷಗಳಾಗಿದ್ದವು. ಹೈದರಾಬಾದ ಕರ್ನಾಟಕ, ಮುಂಬಯಿ ಕರ್ನಾಟಕ, ಮದ್ರಾಸ ಕರ್ನಾಟಕ ಪ್ರಾಂತಗಳು ಸೇರಿದಂತೆ ಮೈಸೂರು ಕರ್ನಾಟಕವನ್ನೊಳಗೊಂಡು ನಾಲ್ಕು ಪ್ರಾಂತೀಯ ವಿಭಾಗಗಳು ಏಕತ್ರ ಸೇರಿದ ಅಖಂಡ ಕರ್ನಾಟಕ ರಾಜ್ಯವು ಅಸ್ತಿತ್ವಕ್ಕೆ ಬಂದಿತು. ಬಳ್ಳಾರಿಯವರಾದ ನಾವು ಮೂರು ವರ್ಷಗಳಿಗೆ ಮುಂಚೆ ಮೈಸೂರಿನಲ್ಲಿ ವಿಲಯನಗೊಂಡಿದ್ದೆವು. ರಾಜ್ಯ ಸರಕಾರಿ ನೌಕರರು ಅತ್ತಿಂದಿತ್ತ ಇತ್ತಿಂದತ್ತ ವರ್ಗಾವಣೆಯಾಗುತ್ತಲಿದ್ದರು. ಹೀಗೆ ಒಂದು ಕಚೇರಿಯಲ್ಲಿ ಹೈದರಾಬಾದ, ಮುಂಬಯಿ, ಮೈಸೂರು, ಕೊಡಗು ಹೀಗೆ ವಿವಿಧ ಪ್ರಾಂತಗಳಿಂದ ಅಧಿಕಾರಿಗಳು ಹಾಗು ಸಿಬ್ಬಂದಿ ಸೇರಿರುತ್ತಿದ್ದರು. ಭಾಷಾವಾರು ಪ್ರಾಂತದ ರಚನೆಯಾದ ನಂತರ ನಮಗೆಲ್ಲ ಮೊದಲು ಮುಖ್ಯವಾಗಿ ಕಂಡುಬಂದ ಬದಲಾವಣೆಯೆಂದರೆ ನೌಕರರ ಸಮ್ಮಿಳನ. ಒಂದು ರೀತಿಯ ಸಂತೋಷ ಸಮಾಧಾನ, ಸಂತಸ, ಉತ್ಸಾಹ ನಮ್ಮಲ್ಲಿ ತುಂಬಿರುತ್ತಿತ್ತು. ಅದೊಂದು ಭಾಷಾ ಸಮ್ಮಿಲನವೇ ಆಗಿರುತ್ತಿತ್ತು. ಮುಂಬಯಿ ಭಾಗದಿಂದ ಬಂದ ಕೆಲವರಿಗೆ ಕನ್ನಡ ಬರುತ್ತಿರಲಿಲ್ಲ. ಹೈದರಾಬಾದ ಪ್ರಾಂತದಿಂದ ಬಂದವರಿಗೆ ಕನ್ನಡ ತಿಳಿಯುತ್ತಿರಲಿಲ್ಲ. ಮುಂಬಯಿ ಪ್ರಾಂತದವರಲ್ಲಿ ಕೆಲವರು ಮರಾಠಿ ಮಾತನಾಡುತ್ತಿದ್ದರು. ಹೈದರಾಬಾದದವರು ಉರ್ದು ಮಾತನಾಡುತ್ತಿದ್ದರು. ಇವರ ಮಧ್ಯೆ ಬಳ್ಳಾರಿಯವರಾದ ನಾವು ಬಹುಮಟ್ಟಿಗೆ ತೆಲಗು ಮಾತನಾಡುವ ಆಂಧ್ರ ಪ್ರಾಂತದವರೆಂದು ಪರಿಗಣಿಸಲ್ಪಡುತ್ತಿದ್ದೆವು. ನಮ್ಮ ಮಾತೃಭಾಷೆಯೇನೋ ಅಚ್ಚ ಕನ್ನಡ. ಆದರೆ ತೆಲುಗು ಅಷ್ಟು ಪ್ರಭಾವವುಂಟು ಮಾಡಿತ್ತು. ಸರಕಾರಿ ಕಾಗದ ಪತ್ರಗಳು ಹೆಚ್ಚು ತೆಲುಗು ಭಾಷೆಯಲ್ಲಿರುತ್ತಿದ್ದವು. ರಾಷ್ಟ್ರವ್ಯಾಪಕವಾಗಿ ಸಾಗರದ ಅಲೆಗಳಂತೆ ಬದಲಾವಣೆಯಾಗಿ ಎಲ್ಲಿಯವರು ಎಲ್ಲಿಗೋ ವರ್ಗವಾಗಿ ಬಿಡುತ್ತಿದ್ದರು. ಆ ಅವಸರದ ಒಂದು ಉತ್ಸಾಹದ ಹೊಳೆಯಲ್ಲಿ ಯಾರು ಎಲ್ಲಿಗೆ ಹೋದರೇನು? ಕ್ರಮೇಣ ಭಾಷಾ ಬಂಧುಗಳು ತಮ್ಮ ತಮ್ಮ ಪ್ರಾಂತಗಳಿಗೆ ವರ್ಗಾವಣೆಯಾಗಿ ಹೋದರು. ಮರಾಠಿ, ಉರ್ದು, ತೆಲುಗು ಮತ್ತು ಕೊಡಗು ಭಾಷೆಯವರ ಈ ಕನ್ನಡ ಸಂಗಮದಲ್ಲಿ ಇಂಗ್ಲಿಷ್ ಮಾಧ್ಯಮ ಭಾಷೆಯಾಗಿತ್ತು ಎಂದರೆ ಯಾರಾದರೂ ಆಶ್ಚರ್ಯಪಡಬಹುದು. ಆಡಳಿತ ಭಾಷೆಯೂ ಆಗ ಇಂಗ್ಲಿಷೇ ಆಗಿತ್ತು. ಪರಭಾಷಾ ಸಂಧಿಯಲ್ಲಿದ್ದ ನಮಗಂತೂ ತೆಲುಗು ಮಾತನಾಡುವವರಿಂದ ದೂರವಾಗಿ ಅಚ್ಚ ಕನ್ನಡ ಮಾತನಾಡುವ ಮೈಸೂರು ರಾಜ್ಯಕ್ಕೆ ಸೇರಿದುದು ಒಂದು ನವೋದಯವೇ ಆಗಿತ್ತು. ಅದೊಂದು ಪುನರ್ಮಿಲನವೆಂಬಂತಾಗಿತ್ತು. ಮೈಸೂರಿನವರ ಸರಳ ಸೌಜನ್ಯ ಕನ್ನಡ ನುಡಿ ನಮಗೆ ಆನಂದ ಉಂಟುಮಾಡುತ್ತಿತ್ತು. ಮೈಸೂರಿನವರ ಸ್ವಭಾವ, ನಡತೆ ಕೂಡ ಸೌಜನ್ಯಯುತವಾಗಿರುತ್ತಿತ್ತು. ನಮ್ಮ ನಡೆ ನುಡಿಗಳಲ್ಲಿ ಕನ್ನಡ ಸೌರಭ ಹರಡತೊಡಗಿತ್ತು. ನಮಗೆ ಇದಕ್ಕಿಂತ ಹೆಚ್ಚಿನ ಸಂತಸವೇನೂ ಇರಲಿಲ್ಲ. ಆದರೆ ಒಂದು ರೀತಿಯ ಅಸಮಾಧಾನ, ಅಸಂತುಷ್ಟಿ ಇದ್ದೇ ಇತ್ತು. ಏಕೆಂದರೆ ನಮ್ಮ ಅನೇಕರ ವೇತನಗಳು ಅತಿ ಕಡಿಮೆ ಮಟ್ಟದಲ್ಲಿದ್ದವು. ನಾವು ನಮ್ಮ ದರ್ಜೆ

# ಒಂದು ದಿನ

ಶಿವರಾಮ ಜೋಶಿ

ಯುಕ್ತಿ ಪಡೆಯುತ್ತಿದ್ದ ವೇತನದ ಎರಡು ಮೂರು ಪಟ್ಟು ವೇತನವನ್ನು ಹೈದರಾಬಾದ, ಮುಂಬಯಿ ಪ್ರಾಂತದ ನೌಕರರು ಪಡೆದುಕೊಳ್ಳುತ್ತಿದ್ದರು. ಸಮಾನ ವೇತನ ಶ್ರೇಣಿ ಬರಲು ಮುಂದೆ ಒಂದೆರಡು ವರ್ಷಗಳು ಹಿಡಿದವು. ಆದರೂ ಅಸಮಾನತೆಯ ವಿಷಮತೆ ಹಾಗೇ ಉಳಿಯಿತು. ನಮ್ಮ ನಿರಾಶೆ ನಿರಾಶೆಯೇ ಆಗಿ ಉಳಿಯಿತು.

ವಿಜಯನಗರದ ಗಂಡು ಮೆಟ್ಟಿನ ಸ್ಥಳ. ತುಂಗಭದ್ರ ತೀರದ ಸಮೃದ್ಧ ಬೀಡು. ನಿತ್ಯ ನಾವೆಲ್ಲ ನದೀತೀರದಲ್ಲಿ ಸೇರಿ ವಿನೋದವಾಗಿ ಮಾತನಾಡುತ್ತಿದ್ದೆವು. ಸಂತೋಷದಿಂದ ಕಾಲ ಕಳೆಯುತ್ತಲಿದ್ದೆವು. ಬಳ್ಳಾರಿ ಹೊಸತಾಗಿ ಮೈಸೂರು ರಾಜ್ಯ ಸೇರಿದಾಗ ಸ್ವತಃ ಮೈಸೂರಿನ ಮಹಾರಾಜರು ರಾಜಪ್ರಮುಖರಾಗಿ ಬಳ್ಳಾರಿಯವರನ್ನು ಆದರದಿಂದ ಸ್ವಾಗತಿಸಿದ್ದರು. ಹೊಸದಾಗಿ ಮನೆಗೆ ಬಂದ ಹಿರಿಯ ಸೊಸೆಯಂತೆ ನಮ್ಮನ್ನು ಕಾಣಲಾಗುತ್ತಿತ್ತು. ಆಗಿನ ಮುಖ್ಯಮಂತ್ರಿ ಶ್ರೀಮಾನ್ ಕೆಂಗಲ್ ಹನುಮಂತಯ್ಯನವರು ತಮ್ಮದೇ ಆದ ಗಡಸುತನದ ಗರ್ಜನೆ ಹಾಕಿದ್ದರು. ಬಳ್ಳಾರಿಯ ಭಾಗವೇ ಆಗಿದ್ದ ಇನ್ನುಳಿದ ಮೂರು ತಾಲೂಕುಗಳಾದ ಆದವಾನಿ, ಆಲೂರು ಹಾಗೂ ರಾಯದುರ್ಗ ಆಂಧ್ರದಲ್ಲಿಯೇ ಉಳಿದುಹೋಗಿದ್ದವು. ರಾಯಲಸೀಮೆಯ ಪ್ರಾಂತವಾಗಿದ್ದ ಬಳ್ಳಾರಿ ಜಿಲ್ಲೆ ಇಡಿಯಾಗಿ ಆಗ ಆಂಧ್ರಕ್ಕೆ ಸೇರಿಹೋಗುವ ಪ್ರಮೇಯ ಬಲವಾಗಿತ್ತು. ವಾಂಛೂ ಸಮಿತಿ, ಕುಂಝ್ರೂ ಸಮಿತಿಗಳು ಪ್ರತ್ಯೇಕವಾಗಿ ಈ ಭಾಷಾ ಪ್ರದೇಶಗಳನ್ನು ಅಧ್ಯಯನ ಮಾಡಿ, ತುಂಗಭದ್ರ ಅಚ್ಚುಕಟ್ಟು ಪ್ರದೇಶ ಆಂಧ್ರಕ್ಕೆ ಸೇರಬೇಕೆಂದು ಶಿಫಾರಸು ಮಾಡಿದ್ದವು. ಇದನ್ನು ವಿರೋಧಿಸಿ ಬಳ್ಳಾರಿ ಕನ್ನಡಿಗರು ಹೋರಾಡಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಬೇಕಾಯಿತು. ಆ ಮಾತು ಬೇರೆ. ಇದು ರಾಜಕಾರಣದ ಮಾತಾಯಿತು. ಸರಕಾರಿ ನೌಕರರ ಆಗಿನ ಪರಿಸ್ಥಿತಿಗೆ ಬಹಳ ದೂರ. ಸ್ವಾತಂತ್ರ್ಯಬಂದು ನಾಲ್ಕೆಂಟು ವರ್ಷಗಳೇ ಆಗಿರಬೇಕು. ರಾಜಕೀಯ ಸ್ವಾತಂತ್ರ್ಯದ ಉತ್ಸಾಹವೇ ಬಹಳವಾಗಿತ್ತು. ಕರ್ನಾಟಕದ ನವೋದಿತ ರಾಜ್ಯದ ಮುಖ್ಯಮಂತ್ರಿಯಾಗಿ ಶ್ರೀ ನಿಜಲಿಂಗಪ್ಪನವರು ಬಂದಾಗ ಆ ಸಂತಸ, ಹೆಮ್ಮೆಯೇ ಬೇರೆ.



ಆ ಸಂತಸದ ಕ್ಷಣಗಳು ಪುನಃ ಬರಲಾರವು! ಈಗಂತೂ ಸ್ವಾತಂತ್ರ್ಯದ ಬಿಸಿ ಆರಿದೆ. ರಾಜಕೀಯ ಸ್ವಾತಂತ್ರ್ಯದ ಎಲ್ಲೆ ಮಿರಿದೆ. ಹಕ್ಕುಬಾಧ್ಯತೆಗಳು ಒಂದು ಪೂರ್ಣವೆನ್ನಬಹುದಾದ ಹಂತಕ್ಕೆ ಬಂದಿದೆ. ಸ್ವಾತಂತ್ರ್ಯದ ಫಲಬಿಟ್ಟು ರಾಜಕೀಯ, ಸಾಮಾಜಿಕ, ಔದ್ಯೋಗಿಕ ಹಾಗೂ ಸಾಂಸ್ಕೃತಿಕ ಮಟ್ಟದ ಅನೇಕ ರಂಗಗಳನ್ನು ತಲಪಿದೆ. ಆದರೆ ಆರ್ಥಿಕ ಸ್ವಾತಂತ್ರ್ಯ ಎಲ್ಲರಿಗೂ ಬಂದಿದೆಯೋ ಇಲ್ಲವೋ ನಾನಂತೂ ಹೇಳಲಾರೆ. ಆಗಿನ ಹತ್ತು ಪಟ್ಟು ಈಗ ಆರ್ಥಿಕ ಮೌಲ್ಯ ಹೆಚ್ಚಾಗಿದೆ. ಜೀವನದ ಸ್ತರವೂ ಅಂತಸ್ತುಗಳ ಮಾನದಲ್ಲಿ ಎತ್ತರಿಸಿದೆ. ನಾವು ಯಾವ ಸ್ತರದಲ್ಲಿರುತ್ತೇವೆಂಬುದು ಮುಖ್ಯವಲ್ಲ. ಬೀಸುವ ಗಾಳಿ ಮುಖ್ಯ. ಆಗಿನ್ನೂ ಆರ್ಥಿಕ ಸ್ವಾವಲಂಬನೆಯ ಮೊದಲ ಮೆಟ್ಟಲಿನಲ್ಲಿ ನಿಂತ ನನಗೆ ಮುಂದೆ ಏರುವುದು ಆಗಲಿಲ್ಲ. ಆ ಮಾತು ಬೇರೆ.

ಜೀವನವೆಂದರೆ ಒಂದು ರೈಲುಗಾಡಿ ಇದ ಂತೆ.



ಎಲ್ಲಿಯೋ ಹತ್ತುತ್ತೇವೆ, ಎಲ್ಲಿಯೋ ಇಳಿಯುತ್ತೇವೆ. ಒಂದೊಂದು ಸಲ ಬಲವಂತವಾಗಿ ಇಳಿದು ಬಿಡುವ ಪ್ರಸಂಗ ಬರುತ್ತದೆ. ಈ ಜಗತ್ತೆಂಬ ಒಂದು ದೊಡ್ಡ ರೈಲುಗಾಡಿ ಯಾರಿಗಾಗಿಯೂ ಎಲ್ಲಿಯೂ ನಿಲ್ಲುವುದಿಲ್ಲ. ಅದು ಓಡುತ್ತಲೇ ಇರುತ್ತದೆ. ಕೆಲವರು ಆರಾಮವಾಗಿ ಕುಳಿತಿರುತ್ತಾರೆ. ಐಷಾರಾಮದಿಂದ ಇರುತ್ತಾರೆ. ಕೆಲವರು ಕುಳಿತಿರಲು ಸ್ಥಳಗಳಿಲ್ಲದೆ ನಿಂತೇ ಇರುತ್ತಾರೆ. ಸ್ಥಳ ಸಿಕ್ಕಾಗ ಕುಳಿತುಬಿಡುತ್ತಾರೆ. ಅನೇಕರು ರೈಲುಗಾಡಿಯ ಫುಟ್‌ಬೋರ್ಡಿನ ಮೇಲೆಯೆ ಪಯಣಿಸುತ್ತಾರೆ. ಜಗತ್ತೆಂಬ ಈ ಗಾಡಿಗೆ ಜೋತುಬಿದ್ದವರೆಷ್ಟೋ. ಪ್ರಯಾಣವೇ ಅಂತಹುದು. ನಾನು ಒಂದು ರೀತಿಯಲ್ಲಿ ಗಾಡಿ ಹತ್ತಿ ಕುಳಿತಿರಬಹುದಾದ ಅವಕಾಶ ಬಿಟ್ಟು ಗಾಡಿಯಿಂದ ಇಳಿದೇಬಿಟ್ಟೆ. ಆದರೆ ಗಾಡಿ ನನ್ನನ್ನು ಬಿಟ್ಟಿಲ್ಲ. ನನ್ನನ್ನು ಕರೆದುಕೊಂಡು ಹೊರಟಿದೆ. ಕಂಪಾರ್ಟ್‌ಮೆಂಟ್ ಬದಲಾಗಿದೆ ಅಷ್ಟೆ. ಕಾರಣ ನಾನು ಮುಂದೆ ಸರಕಾರೀ ನೌಕರಿ ಬಿಟ್ಟುಬಿಟ್ಟೆ. ಅದಕ್ಕೆ ನನ್ನ ಆರ್ಥಿಕ ವಿಷಮತೆ ನೀಗದಿದ್ದುದೇ ಕಾರಣ. ಖಾಸಗೀ ರಂಗದಲ್ಲಿರುವ ದೊಡ್ಡ ಅವಕಾಶ ಸರಕಾರೀ ರಂಗದಲ್ಲಿಲ್ಲವೆಂಬ ಭಾವನೆ ನನ್ನದಾಗಿತ್ತು. ಅದು ಬಲವತ್ತರಗೊಂಡು ನನ್ನ ಜೀವನ ಬದಲಾಯಿತು. ಮೂವತ್ತು ವರ್ಷಗಳ ನಂತರ ನನ್ನ ಅನುಭವ ಬೇರೆಯಾಗಿದೆ. ನಾನು ನನ್ನದೇ ಆದ ಚಿಕ್ಕ ಗಾಡಿಯನ್ನು ನಡೆಸುತ್ತಿದ್ದೇನೆ. ಜೀವನವೆಂದರೆ ಒಂದು ರೈಲುಗಾಡಿ ಎಂದೆನಲ್ಲ. ರೈಲುಗಾಡಿ ಯಾರಿಗೂ ಅನ್ಯಾಯ ಮಾಡುವುದಿಲ್ಲ. ಅವರವರ ತಾಣಕ್ಕೆ ತಪ್ಪದೆ ಕರೆದೊಯ್ಯುತ್ತದೆ. ಗುರಿಯಾಗಲೀ, ಪ್ರಯಾಣವಾಗಲೀ ಅವರವರ ವಿಧಿ. ಅವರವರ ಕರ್ಮಭಾರವನ್ನು ಅವರೇ ಹೊರಬೇಕು. ರೈಲುಗಾಡಿಯಿಂದ ಇಳಿದಾಗ ನಮ್ಮ ಲಗೇಜನ್ನು ನಾವು ತಪ್ಪದೆ ಇಳಿಸಿಕೊಳ್ಳುತ್ತೇವೆ. ನಮ್ಮದೇ ಹಾಸಿಗೆ ಹೊದಿಕೆ, ಟ್ರಂಕು, ಇತ್ಯಾದಿ.

ರೈಲುಗಾಡಿ ಎಂದಕೂಡಲೇ ಒಂದು ಪ್ರಸಂಗ ನೆನಪಿಗೆ ಬರುತ್ತದೆ. ಆಗಿನ್ನೂ ಸರಕಾರೀ ನೌಕರಿಯಲ್ಲಿದ್ದೆ. ಬಳ್ಳಾರಿ ಜಿಲ್ಲೆಯ ಹಗರಿ ಕೃಷಿ ಸಂಶೋಧನೆ ಕೇಂದ್ರದಲ್ಲಿ ನಾನಿನ್ನೂ ನೌಕರಿ

ಜುತ್ತಿದ್ದೆ. ಕೃಷಿ ಫಾರ್ಮಿನ ಸಿಬ್ಬಂದಿಯೊಂದಿಗೆ ಫಾರ್ಮಿನ ಕ್ವಾರ್ಟರ್ಸಿನಲ್ಲಿ ನಾನು ವಾಸವಾಗಿದ್ದೆ. ಕೆಲವಾರು ದಿನ ಬಳ್ಳಾರಿಯಿಂದ ಹೋಗಿ ಬಂದು ಮಾಡುತ್ತಿದ್ದೆ. ಕೃಷಿ ವ್ಯವಸ್ಥಾಪಕ ಸಿಬ್ಬಂದಿ ಸುಪರಿಂಟೆಂಡೆಂಟ್ ಮುಂತಾಗಿ ಪ್ರತ್ಯೇಕ ಬಂಗಲೆಗಳಿದ್ದವು. ನನಗಾಗಿಯೂ ಒಂದು ಬಂಗಲೆ. ನನಗಿನ್ನೂ ವಿವಾಹವಾಗಿರಲಿಲ್ಲ, ಏಕಾಂಗಿಯಾಗಿದ್ದೆ. ನಗರ, ಮಾರ್ಕೆಟ್, ಅಂಗಡಿ ಮುಂತಾದ ಸೌಲಭ್ಯಗಳಿಲ್ಲದೆ ಆರೆಂಟು ಮೈಲು ದೂರದಲ್ಲಿತ್ತು ಈ ಕೃಷಿ ಫಾರ್ಮು. ಅಘಹರಿನದಿ (ಪಾಪನಾಶಿನಿ) ಪಕ್ಕದಲ್ಲಿಯೇ ಹರಿಯುತ್ತಿತ್ತು. ಅತ್ಯಂತ ಸಮೀಪವೆಂದರೆ ಎರಡು ಮೈಲು ದೂರದ ರೇಲ್ವೆ ಸ್ಟೇಶನ್. ಪೂರ್ವಕ್ಕೆ ಮೂರು ಮೈಲು ದೂರದಲ್ಲಿ ಜೋಳದರಾಶಿ. ಪ್ರಸಿದ್ಧ ಗವಾಯಿ ಗಮಕಿ ಶ್ರೀ ಜೋಳದರಾಶಿ ದೊಡ್ಡನಗೌಡ ಅವರ ಜನ್ಮಸ್ಥಳ ಹಾಗೂ ವಾಸಸ್ಥಳ. ಇವರನ್ನು ಏಕೆ ಸ್ಮರಿಸುತ್ತಿರುವುದೆಂದರೆ ಹೊಸತಾಗಿ ಮೈಸೂರು ಸೇರಿದ ನಂತರ ೧೯೫೪-೫೫ ರಲ್ಲಿ ಮೈಸೂರಿನ ಮುಖ್ಯಮಂತ್ರಿ ಶ್ರೀ ಹನುಮಂತಯ್ಯನವರು ಸಾಂಸ್ಕೃತಿಕ ಯೋಜನೆಯೊಂದನ್ನು ಜಾರಿಗೆ ತಂದಿದ್ದರು. ಸಂಸ್ಕೃತಿ ಪ್ರಸಾರವೆಂಬ ಈ ಕಾರ್ಯಕ್ರಮದಲ್ಲಿ ಪ್ರತಿಯೊಂದು ಊರಿನಲ್ಲಿ ಪ್ರಸಿದ್ಧ ಗಾಯಕರು, ಕಲಾವಂತರು, ಸಂಗೀತಗಾರರು, ಕೀರ್ತನಕಾರರು. ಪುರಾಣಕಾರರು ಮುಂತಾದವರಿಂದ ಸರಕಾರದ ಆಶ್ರಯದಲ್ಲಿ ಕಾರ್ಯಕ್ರಮವನ್ನೇರ್ಪಡಿಸುತ್ತಿದ್ದರು. ಜೋಳದರಾಶಿ ದೊಡ್ಡನಗೌಡರು ಆಗ ಪ್ರಮುಖ ವ್ಯಕ್ತಿಯಾಗಿ ನಮಗೆ ಪರಿಚಿತರಿದ್ದರು. ಶ್ರೀ ಹನುಮಂತಯ್ಯನವರ ಸರಕಾರವು ಪ್ರಕಟಿಸಿದ ಅನೇಕ ಸಾಹಿತ್ಯಿಕ ಗ್ರಂಥಗಳನ್ನು ನಾನು ಸುಲಭ ಬೆಲೆಯಲ್ಲಿ ಪಡೆದುಕೊಳ್ಳುತ್ತಿದ್ದೆ. ಕುಮಾರವ್ಯಾಸನ ಮಹಾಭಾರತವೆಂಬ ಒಂದು ಸುಂದರ ಗ್ರಂಥ ನಾನು ಕೊಂಡ ಒಂದು ಅಮೂಲ್ಯ ಸಾಹಿತ್ಯ. ಬೆಲೆ ಕೇವಲ ಎರಡು ರೂಪಾಯಿ. ವಾರಕ್ಕೊಮ್ಮೆ ರಾಜ್ಯದ ಬೇರೆ ಬೇರೆ ಕಡೆಯಿಂದ ಬರುತ್ತಿದ್ದ ಕಲಾಕಾರರು, ಪಂಡಿತರು ಮುಂತಾದವರ ಉಪನ್ಯಾಸ ಕೇಳುವ ಅವಕಾಶವಿರುತ್ತಿತ್ತು. ನಗರ ಪ್ರದೇಶದಿಂದ ದೂರವಿರುತ್ತಿದ್ದ ನಾವು ಮೂರು ಮೈಲು ದೂರದ ಚೆಳ್ಳುಗುರ್ಕಿಯ ಎರ್ರಿಸ್ವಾಮಿ ಅವರ ದರ್ಶನಕ್ಕೆ ವಾರಕ್ಕೊಮ್ಮೆ ತಪ್ಪದೆ ಹೋಗಿ ಬರುತ್ತಿದ್ದೆವು. ಹುಬ್ಬಳ್ಳಿಯ ಶ್ರೀ ಸಿದ್ಧಾರೂಢ ಸ್ವಾಮಿಯಷ್ಟೇ ಪ್ರಸಿದ್ಧ ಅವಧೂತ ಶ್ರೀ ಎರ್ರಿ-ಸ್ವಾಮಿ. ಮೈಸೂರಿನ ಮಹಾರಾಜರು ಎರ್ರಿ-ಸ್ವಾಮಿಯ ಪರಮ ಭಕ್ತರಾಗಿದ್ದರು. ಅವರ ಅಮೂಲ್ಯ ದೇಣಿಗೆ ಚೆಳ್ಳುಗುರ್ಕಿಯಲ್ಲಿದೆ. ಮೈಸೂರಿನ ಒಬ್ಬ ಭಕ್ತರು ಅಲ್ಲಿಯೇ ಸಮಾಧಿಯಾಗಿದ್ದಾರೆ. ಈ ಮಾತು ಏಕೆ ಹೇಳುತ್ತಿದ್ದೇನೆಂದರೆ ಸಾಧು ಸಂತರು ಪುಣ್ಯ ಪುರುಷರು ಓಡಾಡಿದ ಸ್ಥಳವದು. ಅವರ ಪ್ರಭಾವ ನಮ್ಮ ಮೇಲಾಗದೇ ಇರುತ್ತಿರಲಿಲ್ಲ.

ನಾವು ಯಾವ ಪರಿಸರದಲ್ಲಿ ಬೆಳೆಯುತ್ತೇವೆಯೋ ಆ ಪರಿಸರದಂತೆ ನಮ್ಮ ಜೀವನ ಬೆಳೆಯುತ್ತದೆ. ಒಮ್ಮೊಮ್ಮೆ ನಮ್ಮ ಪರಿಸರವನ್ನು ನಾವೇ ನಿರ್ಮಿಸಿಕೊಳ್ಳುತ್ತೇವೆ. ಒಮ್ಮೆ



ಪರಿಸರದಂತೆಯೇ ಹೋಗುತ್ತೇವೆ. ಜೀವನವೆಂದರೆ ಒಂದು ರೈಲು ಗಾಡಿಯಾದರೆ ಅದಕ್ಕೆ ಅನೇಕ ಕಂಪಾರ್ಟ್‌ಮೆಂಟುಗಳು.

ಒಮ್ಮೆ ಏನಾಯಿತೆಂದರೆ ನಮ್ಮ ವಿಭಾಗದ ಕೇಂದ್ರವಾಗಿದ್ದ ರಾಯಚೂರಿನಿಂದ ಒಂದು ತಂತಿ ಬಂದಿತು. ಅವಸರವಾಗಿ ಒಂದು ವಿಭಾಗೀಯ ಸಮಾವೇಶವನ್ನು ಕರೆದಿದ್ದರು. ನಮ್ಮ ಕೃಷಿ ಫಾರ್ಮಿನ ವಿಶೇಷ ವರದಿಯೊಂದಿಗೆ ಫಾರ್ಮ್ ಸುಪರಿಂಟೆಂಡೆಂಟರು ಮಾರನೆಯ ದಿನ ಸಂಜೆ ರೈಲಿಗೆ ಹೊರಡಬೇಕು. ವರದಿ ತಯಾರಿಸಲು ನನಗೆ ೨೪ ತಾಸುಗಳ ಅವಧಿ. ಸರಿ. ರಾತ್ರೋರಾತ್ರಿ ವರದಿ ತಯಾರುಮಾಡಿದೆ. ಟೈಪು ಮಾಡಿ ವರದಿ ಸಿದ್ಧವಾಯಿತು. ಉಪನಿರ್ದೇಶಕರಿಗಾಗಿ ತಯಾರಾದ ಈ ವರದಿಯ ಪುಟಗಳು ನಮ್ಮ ಫಾರ್ಮಿನ ಎಲ್ಲ ಅಂಶಗಳನ್ನೂ ಒಳಗೊಂಡಿದ್ದವು. ಸಾಕಷ್ಟು ದೊಡ್ಡದು ಹಾಗೂ ಭಾರವಾದುದು. ಸರಿ. ಮಾರನೆಯ ದಿನ ಸಾಯಂಕಾಲ ಫಾರ್ಮಿನ ಟಾಯರ್‌ಗಾಡಿಯಲ್ಲಿ (ಎತ್ತುಗಳ) ಸ್ಟೇಶನ್ನಿಗೆ ಸುಪರಿಂಟೆಂಡೆಂಟ ಸಾಹೇಬರನ್ನು ಕಳಿಸಲು ನಾವು ನಾಲ್ಕಾರು ಸಹೋದ್ಯೋಗಿಗಳು ಹೊರಟೆವು. ಸಾಧಾರಣವಾಗಿ ನಾವು ಹೀಗೆ ಗಾಡಿ ಹೊರಟಾಗಲೆಲ್ಲ ಸ್ಟೇಶನ್ ವರೆಗೆ ಹೋಗಿ ಬರುತ್ತಿದ್ದುದುಂಟು. ಸ್ಟೇಶನ್ ಬಳಿ ಇದ್ದ ಚಹದ ಅಂಗಡಿಯಲ್ಲಿ ಚಹ ಸೇವಿಸಿ ಬರುತ್ತಿದ್ದೆವು. ಫಾರ್ಮಿನವರಿಗೆಲ್ಲ ಇದು ವಾಡಿಕೆಯಾಗಿತ್ತು. ಶ್ರೀ ಮುನಿಸ್ವಾಮಿ ಎಂಬವರು ಹೊಸ ಸುಪರಿಂಟೆಂಡೆಂಟ್ ಆಗಿದ್ದರು. ಮೈಸೂರಿನವರಾದ ಇವರು ಬಹಳ ಉದಾರಿಗಳು, ಸಹೃದಯಿಗಳು, ಎಲ್ಲರನ್ನೂ ಆತ್ಮೀಯತೆಯಿಂದ ಕಾಣುತ್ತಿದ್ದರು. ಬೆಂಗಳೂರಿನ ಗಾಡಿ ಹತ್ತಿಸಿ ಶುಭ ಪ್ರಯಾಣ ಕೋರಿದೆವು. ಗಾಡಿ ಹೊರಟಿತು. ಹಗರಿ ಸ್ಟೇಶನ್ನಿನಿಂದ ಗುಂತಕಲ್ ತಲಪಿ ಅಲ್ಲಿಂದ ಗಾಡಿ ಬದಲಿಸಿ ರಾಯಚೂರಿಗೆ ತೆರಳಬೇಕಿತ್ತು. ಗಾಡಿ ಪ್ರಯಾಣಿಕರಿಂದ ತುಂಬಿತ್ತು. ಸುಪರಿಂಟೆಂಡೆಂಟರ ಲಗೇಜು ಹಾಗೂ ಒಂದು ಬ್ಯಾಗು ಗಾಡಿಯ ಲಗೇಜು ಬೋರ್ಡಿನ ಮೇಲಿರಿಸಿ ನಾವು ಅವರಿಗೆ ಎಚ್ಚರ ಸೂಚಿಸಿದೆವು.

ಫಾರ್ಮಿಗೆ ಮರಳಿದೆವು. ಕೆಲಸದ ದಣಿವು ಶ್ರಮ ಎಲ್ಲವನ್ನು ಮರೆತು ಊಟೋಪಚಾರವಾದ ನಂತರ ನಾವು ಚದುರಂಗ ಆಟದಲ್ಲಿ ತೊಡಗಿದೆವು. ನನ್ನ ಇಬ್ಬರು ಸಹೋದ್ಯೋಗಿಗಳು ಹೈದರಾಬಾದಿನವರಾಗಿದ್ದರು. ನಮ್ಮ ನೆರೆಯಲ್ಲಿಯೇ ಅವರ ಕ್ವಾರ್ಟರುಗಳಿದ್ದವು. ವಿದ್ಯುದ್ದೀಪಗಳಿನ್ನೂ ಬಂದಿರಲಿಲ್ಲ. ಚೆಸ್ ಆಟದಲ್ಲಿ ಮಗ್ನರಾಗಿದ್ದೆವು. ನನ್ನ ಮಿತ್ರರಿಬ್ಬರೂ ಚೆಸ್ ಆಟದಲ್ಲಿ ಬಹಳ ಪ್ರವೀಣರಿದ್ದರು. ಅವರಿಂದ ನಾನು ಚೆಸ್ ಆಡುವುದನ್ನು ಕಲಿತೆ. ರಾತ್ರಿ ಸುಮಾರು ಹತ್ತು ಗಂಟೆಯಾಗಿರಬಹುದು. ನನ್ನ ನಿವಾಸದ ಬಾಗಿಲು ತೆರೆದೇ ಇತ್ತು. ಹೊರಗಿನಿಂದ 'ಜೋಷೀ' ಎಂಬ ಕರೆ ಕೇಳಿಸಿತು.

ಅದು ನಮ್ಮ ಸುಪರಿಂಟೆಂಡೆಂಟರ ಕರೆಯಾಗಿತ್ತು. ನಮ್ಮ ಆಟದಿಂದ ಲಕ್ಷ್ಯ ಸೆಳೆದು ಕತ್ತೆತ್ತಿ ನೋಡಿದೆವು. ಸುಪರಿಂಟೆಂಡೆಂಟರು ಬಾಗಿಲಿನಲ್ಲಿ ನಿಂತಿದ್ದರು. ದಣಿವು ಅವರನ್ನು ಆವರಿಸಿತ್ತು. ಬಹುಶಃ ರಾಯಚೂರನ್ನು ಸಮೀಪಿಸಿರಬಹುದಾದ ರಾತ್ರಿ ಸಮಯದಲ್ಲಿ ಫಾರ್ಮಿಗೆ ಮರಳಿ ಬಂದ ಅವರನ್ನು ಕಂಡು ನಮಗೆ ಬಹಳ ಆಶ್ಚರ್ಯವಾಯಿತು.

"ಸರ್, ಏನಾಯಿತು?" ಎಂದು ನಾನು ಕಂದಿಲು ಹಿಡಿದು ಎದ್ದೆ. ನನ್ನ ಸಹೋದ್ಯೋಗಿಗಳು ಕೂಡ ಗಾಬರಿಯಿಂದ "ಕ್ಯಾ ಹುವಾ ಸಾಹಬ!" ಎಂದು ಎದ್ದು ನಿಂತರು.

ಹಗರಿ ಸ್ಟೇಶನ್ನಿನಿಂದ ಹೊರಟ ಗಾಡಿ ಎರಡು ಸ್ಟೇಶನ್ ದಾಟಿ ಹೋಗುತ್ತಿದ್ದಾಗ ಲಗೇಜ್ ಬೋರ್ಡಿನ ಮೇಲೆ ಇಟ್ಟಿದ್ದ ಬ್ಯಾಗು ಜಾರಿ ಗಾಡಿಯಿಂದ ಹೊರಗೆ ಬಿದ್ದುಹೋಯಿತು. ಗಾಡಿಯ ಬಾಗಿಲು ತೆರೆದೇ ಇದ್ದು ಬ್ಯಾಗಿನಲ್ಲಿದ್ದ ಸಮಾವೇಶದ ಸರಕಾರೀ ಕಾಗದ ಪತ್ರಗಳ ಪಾಕೀಟು ಅದು ಹೇಗೊ ದಾರಿಯಲ್ಲಿ ಬಿದ್ದು ಬಿಟ್ಟಿತು. ಸುಪರಿಂಟೆಂಡೆಂಟರು ತಕ್ಷಣ ಗಾಡಿಯ ಸರಪಳಿ ಎಳೆದರು. ಗಾಡಿ ಮುಂದೆ ಸರಿದು ಕೆಲ ದೂರದಲ್ಲಿ ನಿಂತಿತು. ಕೂಡಲೇ ನಮ್ಮ ಸುಪರಿಂಟೆಂಡೆಂಟರು ಗಾಡಿಯಿಂದಿಳಿದು ತಮ್ಮ ಭಾರವಾದ ಬೂಟುಗಾಲಿನಿಂದಲೇ ಪಾಕೀಟು ಎತ್ತಿಕೊಳ್ಳಲು ಓಡತೊಡಗಿದರು.

ಸುಮಾರು ಅರ್ಧ ಫರ್ಲಾಂಗು ದೂರಕ್ಕೆ ಅವರು ಓಡಬೇಕಾಯಿತು. ಅಷ್ಟರಲ್ಲಿ ರೈಲಿನ ಗಾರ್ಡ್ ಕಂಪಾರ್ಟ್‌ಮೆಂಟಿಗೆ ಬಂದು ನೋಡಿದ. ನಮ್ಮ ಸುಪರಿಂಟೆಂಡೆಂಟರು ಕಾಗದದ ಪುಡಿಕೆಗಾಗಿ ಓಡುತ್ತಿದ್ದುದನ್ನು ನೋಡುತ್ತ ನಿಂತ; ಅವರು ಪಾಕೀಟನ್ನು ಹಾಗೂ ತಮ್ಮ ಬ್ಯಾಗನ್ನು ಎತ್ತಿಕೊಂಡು ಮರಳಿ ಗಾಡಿಯತ್ತ ಓಡತೊಡಗಿದರು. ಅಷ್ಟರಲ್ಲಿ ಗಾರ್ಡನು ತನ್ನ ವ್ಹಿಸಲ್ ಊದಿ ಗಾಡಿ ತೆರಳಲು ಆಜ್ಞೆ ವಿಧಿಸಿದ. ಶ್ರೀಮುನಿಸ್ವಾಮಿಯವರು ಇನ್ನೂ ಅರ್ಧದಾರಿಯಿರುವಾಗಲೇ ಗಾಡಿ ಮುಂದೆ ತೆರಳಿ ಹೋಗಿಬಿಟ್ಟಿತು. ಅವರ ಕೈಯಲ್ಲಿ ವರದಿಯ ಪುಡಿಕೆ. ಗಾಡಿಯಲ್ಲಿ ಅವರ ಲಗೇಜು. ಗಾಡಿ ಹೊರಟುಹೋಯಿತು. ನಮ್ಮ ಸುಪರಿಂಟೆಂಡೆಂಟರು ಅಸಹಾಯಕರಾದರು. ರೈಲು ಹಳಿಯನ್ನು ಬಿಟ್ಟರೆ ಬೇರೆ ಜೊತೆಗಿರಲಿಲ್ಲ. ನಡೆದುಕೊಂಡೇ ಮುಂದಿನ ಸ್ಟೇಶನ್ ತಲಪಿದರು. ಸ್ಟೇಶನ್ ಮಾಸ್ತರರನ್ನು ಭೇಟಿಯಾದರು. ಅವರೇನೂ ಮಾಡುವಂತಿರಲಿಲ್ಲ. ಗುಂತಕಲ್ಲಿಗೆ ಹೋಗಿ ವಿಚಾರ ಮಾಡಲು ಅವರು ಹೇಳಿದರು. ವಿಧಿ ಇಲ್ಲದೆ ಒಂದು ಕಡೆ ಈ ಅನಿರೀಕ್ಷಿತ ಘಟನೆ ಮತ್ತೊಂದು ಕಡೆ ಮರುದಿನವೇ ನಡೆಯಲ್ಲಿದ್ದ ಸಮಾವೇಶದಲ್ಲಿ ತಮ್ಮ ಕರ್ತವ್ಯ. ಫಾರ್ಮಿನ ಪಾತ್ರಾಪಾತ್ರ ವಿಚಾರಗಳ ವಿಮರ್ಶೆಯಾಗುವುದಿತ್ತು. ರಾಯಚೂರಿನ ಉಪನಿರ್ದೇಶಕ ಅಧಿಕಾರಿಗಳು ಬಹಳ ಕಟ್ಟುನಿಟ್ಟಿನ ಅಧಿಕಾರಿಯಾಗಿದ್ದರು. ಮುಂಬಯಿ ಪ್ರಾಂತದಿಂದ ಬಂದ ಶ್ರೀ ಹುಲ್ಲತ್ತಿ ಎಂಬ ಅವರ ಆಜಾನುಬಾಹು ವ್ಯಕ್ತಿತ್ವವೇ ಹೆದರಿಸುವಂತಿತ್ತು. ಅವರನ್ನು ಕಂಡರೇ ಅನೇಕರು ಹೆದರುತ್ತಿದ್ದರು. ಅವರ ಮಾತು ಕೂಡ ಅಷ್ಟೇ. ಆದರೆ ಬಹಳ ಹೃದಯವಂತರು, ದಯಾಳುಗಳು. ಹಿರಿಯ ಅಧಿಕಾರಿಯಾಗಿದ್ದ ಅವರಿಂದ ಟೀಕೆ ಎದುರಿಸಬೇಕೆಂಬ ಭಯ. ಹೀಗೆ ಮಾನಸಿಕವಾಗಿ ತಲ್ಲಣಗೊಂಡಿದ್ದರು ನಮ್ಮ ಸುಪರಿಂಟೆಂಡೆಂಟರು. ತಾವು ತಲಪಿದ ಸ್ಟೇಶನ್ನಿನಿಂದ ಹಗರಿಗೆ ರಸ್ತೆಯನ್ನು ಕಾಲು ನಡಿಗೆಯಿಂದ ಕ್ರಮಿಸಬೇಕಾಯಿತು. ಅಷ್ಟರಲ್ಲಿ ರಾತ್ರಿಯಾಗಿ ಹೋಗಿತ್ತು. ಅದು ಹೇಗೋ ರಸ್ತೆ ತಲಪಿದರು. ರಾತ್ರಿ ಸಂಚರಿಸುವ ಟ್ರಕ್ಕುಗಳಲ್ಲಿ ಒಂದನ್ನು ನಿಲ್ಲಿಸಿ ಹಗರಿ ಫಾರ್ಮಿನ ಮುಂದೆ ಬಂದಿಳಿದರು. ಮತ್ತೆ ಸುಮಾರು ಅರ್ಧ ಮುಕ್ಕಾಲು ಮೈಲಿ ದೂರ ನಡೆದು ಕತ್ತಲಲ್ಲಿ ನಿವಾಸ ನಿಲಯವನ್ನು ತಲಪಿದರು. ಫಾರ್ಮ್ ಕಾಯುತ್ತಿದ್ದ ರಾತ್ರಿ ಪಾಳಿಯ ಮಜದೂರನು ಕಬ್ಬಿಣದ ಬಾಗಿಲನ್ನು ತೆರೆದು ಮರಳಿ ಬಂದ ಸುಪರಿಂಟೆಂಡೆಂಟರನ್ನು ಕಂದೀಲು ಬೆಳಕಿನಲ್ಲಿ ಕರೆತಂದ. ನಮ್ಮ ಮನೆಯ ಮುಂಭಾಗದಲ್ಲೇ ಸುಪರಿಂಟೆಂಡೆಂಟರ ನಿಲಯವಿತ್ತು. ಶ್ರೀ ಮುನಿಸ್ವಾಮಿ ತಮ್ಮ ಮನೆಗೆ ತೆರಳಿ ದಣಿವಾರಿಸಿ ಮತ್ತೆ ವಿಚಾರಿಸಬಹುದಾದ ಸಾಧ್ಯತೆ ಇತ್ತು. ಆದರೂ ಅವರು ತಮ್ಮ ದಣಿವು ಶ್ರಮ ಇದಾವುದನ್ನೂ ಗಮನಕ್ಕೆ ತಾರದೇ ನೇರವಾಗಿ ನಮ್ಮ ನಿವಾಸಕ್ಕೆ ಬಂದರು.

"ನಡೆಯಿರಿ ಜೋಷಿ, ಗುಂತಕಲ್ಲಿಗೆ ಹೋಗೋಣ" ಎಂದರು. ಮಧ್ಯರಾತ್ರಿ ಸಮೀ-



ಪಿಸುತ್ತಿತ್ತು. ಕೂಡಲೇ ನಾನು ಅರಿವೆ ಬದಲಾಯಿಸಿ ಹೊರಟೆ. ನಾನು ಮತ್ತು ಸುಪರಿಂಟೆಂಡೆಂಟರು ಫಾರ್ವರ್ಡ್ ಬಿಟ್ಟು ರಸ್ತೆ ಸೇರಿದೆವು. ಟ್ರಕ್ಕುಗಳು ಎಡೆಬಿಡದೆ ರಸ್ತೆಯ ಎರಡು ದಿಕ್ಕಿಗೆ ಹೋಗುತ್ತಿದ್ದವು. ಗುಂತಕಲ್ಲಿನ ಕಡೆಗೆ ಹೋಗುತ್ತಿದ್ದ ಒಂದು ಟ್ರಕ್ಕನ್ನು ನಿಲ್ಲಿಸಿ ಗುಂತಕಲ್ಲಿಗೆ ತೆರಳಿದೆವು.ಸುಮಾರು ಒಂದೆರಡು ತಾಸಿನ ಹಾದಿ. ಗುಂತಕಲ್ಲನ್ನು ತಲಪಿದಾಗ ರಾತ್ರಿ ಎರಡು ಗಂಟೆಯಾಗಿರಬಹುದು. ನೇರ ರೇಲ್ವೆ ಸ್ಟೇಶನ್ನಿಗೆ ತೆರಳಿ ಮುಖ್ಯ ಸ್ಟೇಶನ್ ಮಾಸ್ತರರನ್ನು ಭೇಟಿಯಾದೆವು. ಪರಿಸ್ಥಿತಿ ಕೇಳಿಕೊಂಡ ಅವರು ನಮ್ಮನ್ನು ಸಂಬಂಧಪಟ್ಟ ಗಾರ್ಡನನ್ನು ಭೇಟಿಯಾಗಲು ಹೇಳಿದರು. ಅದೇಕೆ ನಾವು ಗಾರ್ಡನ ಬಳಿಗೆ ಹೋಗಬೇಕೆಂಬುದು ನನಗೆ ಅರ್ಥವಾಗಲಿಲ್ಲ. ನಾವು ರೈಲ್ವೆ ಅಧಿಕಾರಿಗಳೊಂದಿಗೆ ಎರಡು ಸಮಸ್ಯೆಗಳನ್ನು ಪರಿಹರಿಸಿಕೊಳ್ಳಬೇಕಿತ್ತು.

೧) ರೇಲ್ವೆ ಗಾರ್ಡನು ಪ್ರಯಾಣಿಕನೊಬ್ಬನನ್ನು ಅರ್ಧದಾರಿಯಲ್ಲಿ ಅಸಹಾಯಕನನ್ನಾಗಿ ಬಿಟ್ಟುಬಂದದ್ದು.

೨) ಪ್ರಯಾಣಿಕನ ಲಗೇಜು: ಅದೆಲ್ಲಿ ಹೋಯಿತು? ಯಾರು ಜವಾಬ್ದಾರಿ? ಮುಂದಿನ ಸ್ಟೇಶನ್ನಿನಲ್ಲಿ ಅವರ ಲಗೇಜನ್ನು ಗಾರ್ಡ್ ಪರಿಶೀಲಿಸಿ ಸ್ಟೇಶನ್ ಮಾಸ್ತರನಿಗೆ ಒಪ್ಪಿಸಬಹುದಾಗಿತ್ತು. ಇಲ್ಲವೇ ಗುಂತಕಲ್ಲ ಜಂಕ್ಷನ್ನಿನಲ್ಲಿ ಪ್ರಯಾಣಿಕನ ಲಗೇಜ್ ಬಗ್ಗೆ ಸರಿಯಾದ ವ್ಯವಸ್ಥೆ ಮಾಡಬೇಕಿತ್ತು. ರೇಲ್ವೆ ಅಧಿಕಾರಿಗಳಿಗೆ ಈ ವಿಷಯವನ್ನು ತಿಳಿಸಬೇಕಿತ್ತು.

ರೇಲ್ವೆ ಅಧಿಕಾರಿಗಳಿಗೆ ಯಾರಿಗೂ ಈ ಯಾವ ವಿಷಯದ ತಿಳುವಳಿಕೆಯೂ ಇರಲಿಲ್ಲ. ಮುಖ್ಯ ಸ್ಟೇಶನ್ ಮಾಸ್ತರರು ಸದರಿ ಗಾರ್ಡನ ನಿವಾಸದ ಅಡ್ರೆಸ್ಸು ತಿಳಿಸಿದರು. ಅವರು ಗುಂತಕಲ್ಲಿಗೆ ವಿಶ್ರಾಂತಿಗಾಗಿ ಮನೆಗೆ ಹೋಗಿದ್ದರು. ಅವರನ್ನು ಮನೆಯಲ್ಲಿ ಕಂಡು ಭೇಟಿಯಾದರೆ ಇದ್ದ ಸಮಾಚಾರ ತಿಳಿಯುವುದೆಂದು ಹೇಳಿದರು.

ಸರಿ. ರಾತ್ರಿ ಸ್ಟೇಶನ್ನಿನ ಪ್ಲಾಟ್‌ಫಾರ್ಮ್ ಮೇಲೆ ಕಳೆದೆವು. ಮರುದಿನ ಬೆಳಗಾಗುತ್ತಲೇ ಗಾರ್ಡನ ಮನೆ ಹುಡುಕಿಕೊಂಡು ಹೊರಟೆವು. ಅವನು ಒಬ್ಬ ಆ್ಯಂಗ್ಲೋ-ಇಂಡಿಯನ್ ಆಗಿದ್ದ. ಅವನ ಮನೆ ಮುಂದೆ ನಿಂತು ಕರೆದಾಗ ಪುಣ್ಯಕ್ಕೆ ತಕ್ಷಣವೇ ಬಾಗಿಲು ತೆಗೆದು ಮುಖ ಹೊರಗೆ ಹಾಕಿ ನಮಗೆ ದರ್ಶನವಿತ್ತ. ಬೆಳಗಾಗುತ್ತಿದಂತೆಯೇ ನಮ್ಮ ಕರೆಗೆ ಓಗೊಡಲಿಕ್ಕಿಲ್ಲವೆಂದು ನಮ್ಮೆಣಿಕೆಯಾಗಿತ್ತು. ಪ್ರಯಾಣದ ಆಯಾಸದಿಂದ ಮಲಗಿ ನಿದ್ರೆಹೋದವರನ್ನು ಎಚ್ಚರಿಸಿ ಕರೆ ಕೊಡುವುದು ನಮಗೆ ಸರಿ ಎನಿಸಲಿಲ್ಲ. ನಮ್ಮ ಸುಪರಿಂಟೆಂಡೆಂಟರು ಬೇಡವೆಂದರು. ಆದರೆ ನಮ್ಮ ಪರಿಸ್ಥಿತಿ ಬೇರೆಯಾಗಿತ್ತು, ಏನೇ ಆಗಲೀ ಹೋಗಿ ಪ್ರಯತ್ನಿಸೋಣವೆಂದು ಹೋದೆವು. ಕರೆ ಕೇಳಿಸಿದಕೂಡಲೆ ಬಾಗಿಲು ತೆರೆದು ಹೊರಗೆ ಮುಖಹಾಕಿ "Oh! you have come!" ಅಂದ ಆ ಗಾರ್ಡ್.

ನಮ್ಮ ಸುಪರಿಂಟೆಂಡೆಂಟರು ಮರುಮಾತನಾಡುವುದರೊಳಗೆ ಅವನು "Your baggage has reached Vijayawada, you go, you go" ಎಂದವನೇ ಬಾಗಿಲು ಮುಚ್ಚಿಕೊಂಡ.

ಶ್ರೀ ಮುನಿಸ್ವಾಮಿ ಮುಗುಳು ನಕ್ಕು ಹೇಳಿದರು, "ನೋಡಿದಿರಾ ಜೋಷಿ. ಯುರೋಪಿಯನ್ ಅಧಿಕಾರಿಗಳು ಹೇಗಿರುತ್ತಾರೆ. ನಮಗೆ ಎಷ್ಟೂ ನೋವಾಗದಂತೆ, ನಮ್ಮ ಪರಿಸ್ಥಿತಿಯ ಎಷ್ಟೂ ಕಾಳಜಿ ಇಲ್ಲದಂತೆ ಇದ್ದದ್ದನ್ನು ಇದ್ದಂತೆ ಹೇಗೆ ಮುಕ್ತಾಯ ಮಾಡಿದ" ಅಂದರು.

ನಾವು ಮತ್ತೆ ಸ್ಟೇಶನ್ನಿಗೆ ಮರಳಿದೆವು. ಗುಂತಕಲ್ಲಿನ ಯಾರ್ಡಿನಲ್ಲಿ ಬಿಟ್ಟ ಕಂಪಾರ್ಟ್‌ಮೆಂಟಿನಲ್ಲಿ ಲಗೇಜ್‌ಗಳು ಉಳಿದಿರಬಹುದಾದ ಪ್ರಮೇಯವಿದೆಯೆಂದು ಕೆಲವು ಅಧಿಕಾರಿಗಳು ಹೇಳಿದರು. ಮುಖ್ಯ ಸ್ಟೇಶನ್ ಮಾಸ್ತರರನ್ನು ಮತ್ತೆ ಭೇಟಿಯಾದೆವು. ಯಾರ್ಡಿನಲ್ಲಿದ್ದ ಕಂಪಾರ್ಟ್‌ಮೆಂಟುಗಳನ್ನು ಹುಡುಕಿಯಾಯಿತು. ಬ್ಯಾಗೇಜ್ ಇರಲಿಲ್ಲ. ಯಾವ ಕಂಪಾರ್ಟ್‌ಮೆಂಟು ಎಂದು ಹುಡುಕುವುದು? ಯಾರಾದರೂ ಎತ್ತಿ ಹಾಕಿದ್ದರೂ ಆಶ್ಚರ್ಯದ ಮಾತಲ್ಲ.

ಕೊನೆಗೆ ನಾವು ರೈಲ್ವೆ ವಿಭಾಗದ ಪೋಲೀಸ್ ಸ್ಟೇಶನ್ನಿಗೆ ತೆರಳಿದೆವು. ಅಲ್ಲಿ ಕುಳಿತು ಇನ್ಸ್-

ಪೆಕ್ಟರರಿಗೆ ಎಲ್ಲ ವಿಷಯ ತಿಳಿಸಿದೆವು. ಅಲ್ಲಿಂದಲೆ ಒಂದು ಕಂಪ್ಲೇಂಟು ಬರೆದು ಒಂದು ಸ್ಟೇಶನ್ ಮಾಸ್ತರಿಗೆ, ಒಂದು ರೈಲ್ವೆ ಖಾತೆಯ ಡಿ. ಟಿ. ಎಸ್. ಟಿ. ಗೆ, ಒಂದು ಪೋಲೀಸ್ ಇನ್ಸಪೆಕ್ಟರರಿಗೆ ಹಾಗೂ ರಾಯಚೂರಿನ ಉಪನಿರ್ದೇಶಕರಿಗೆ ಪ್ರತಿ ಕಳಿಸಿದೆವು. ಆ ಹೊತ್ತಿಗೆ ಮುಂಜಾನೆ ಹತ್ತು ಗಂಟೆಯಾಗಿತ್ತು. ಶ್ರೀ ಮುನಿಸ್ವಾಮಿ ಕೈಯಲ್ಲಿ ಪಾಕೀಟು ಹಿಡಿದು ರಾಯಚೂರು ಗಾಡಿ ಹತ್ತಿದರು. ತಡವಾಗಿಯಾದರೂ ಸಮಾವೇಶದಲ್ಲಿ ಭಾಗವಹಿಸಲು ಅವರು ರಾಯಚೂರು ಮುಟ್ಟಿದರು. ನಾನು ಹಗರಿಗೆ ಮರಳಿದೆ. ಮೂರು ದಿನಗಳ ನಂತರ ಸುಪರಿಂಟೆಂಡೆಂಟರು ರಾಯಚೂರಿನಿಂದ ಮರಳಿದರು. ನಮ್ಮ ಕೃಷಿ ಕೇಂದ್ರದಿಂದ ರೈಲ್ವೆ ಇಲಾಖೆಯೊಂದಿಗೆ ಪತ್ರವ್ಯವಹಾರ ಪ್ರಾರಂಭಿಸಿದೆವು. ನಮಗೆ ಗಾಡಿಯಲ್ಲಿ ಬಿಟ್ಟು ಹೋದ ಲಗೇಜ್ ವಾಪಸು ಬರಬೇಕಿತ್ತು. ಎರಡು ತಿಂಗಳ ಕಾಲ ಪತ್ರವ್ಯವಹಾರ ನಡೆಯಿತು. ಗಾರ್ಡ್ ಹೇಳಿದಂತೆ ಲಗೇಜು ವಿಜಯವಾಡಾವನ್ನು ತಲುಪಿತ್ತು. ಅಲ್ಲಿಂದ ಬೆಂಗಳೂರಿಗೆ ಬಂದಿತು. ಬೆಂಗಳೂರಿನಿಂದ ಗುಂತಕಲ್ಲಿಗೆ ಬಂದು ಶ್ರೀ ಮುನಿಸ್ವಾಮಿಯವರಿಗೆ ತಲುಪಲು ಮೂರು ತಿಂಗಳುರುಳಿತು. ಕೊನೆಗೂ ರೈಲ್ವೆಯವರು ನಮ್ಮ ಲಗೇಜನ್ನು ನಮಗೆ ಮುಟ್ಟಿಸಿದರು. ಗಾರ್ಡನ ಕರ್ತವ್ಯಲೋಪದ ಬಗೆಗೆ ನಾವೇನೂ ಪ್ರಶ್ನಿಸುವಂತಿರಲಿಲ್ಲ. ಸರಕಾರಿ ಮೂಲದಿಂದ ನಾವು ಸಾಕಷ್ಟು ಹಕ್ಕು ಬಾಧ್ಯತೆಯ ಪ್ರಶ್ನೆಗಳನ್ನು ಮುಂದಿರಿಸಿ ಸವಾಲು ಹಾಕಿದ್ದೆವು. ರೇಲ್ವೆಯಂತಹ ದೊಡ್ಡ ಸಾಗರದಲ್ಲಿ ಒಬ್ಬ ಪ್ರಯಾಣಿಕನಿಗಾಗಿ ಅವನ ಬಾಧ್ಯತೆಯನ್ನು ಯಾರು ಕಾಪಾಡಬೇಕು. ಒಂದೆರಡು ಇನ್ನೂ ನಿಮಿಷ ಹೆಚ್ಚು ಕಾಲ ಗಾಡಿ ನಿಲ್ಲಿಸಲ್ಪಟ್ಟಿದ್ದರೆ ಮಾನವೀಯತೆಯ ಪತಾಕೆಯೋ ಹಾರುತ್ತಿತ್ತು. ಆದರೆ ಆಂಗ್ಲೋ-ಇಂಡಿಯನ್ ಕರ್ತವ್ಯ ಪ್ರಜ್ಞೆ ಎಷ್ಟು ನಿಷ್ಠುರವೋ? ಒಮ್ಮೊಮ್ಮೆ ಕರ್ತವ್ಯವು ಮಾನವೀಯತೆಗಿಂತ ಹಿರಿದಾಗುತ್ತದೆ. ಅದನ್ನರಿತುಕೊಳ್ಳಲು ನಮಗೆ ತಿಂಗಳುಗಳ ಕಾಲವೇ ಬೇಕಾಯಿತು.

ರೈಲಿನಿಂದಿಳಿದು ನಮ್ಮ ಲಗೇಜು ನಾವು ಪಡೆಯದಿದ್ದರೂ ಅದನ್ನು ನಮಗೆ ಒಪ್ಪಿಸುತ್ತದೆ. ಜೀವನದ ರೈಲು ಅಂತೂ ಇದಕ್ಕೆ ತಪ್ಪುವದಿಲ್ಲ ಕರ್ಮವೆಂಬ ಪುಣ್ಯಭಾಗವನ್ನು ನಾವು ಹೊರಲೇಬೇಕು. ಜೀವನವು ಕಲಿಸುವ ಪಾಠ ಅದು. ನಮ್ಮ ಕರ್ಮದ ಗಂಟು ನಮ್ಮ ಹಿಂದೆಯೇ. ರೈಲು ಬದಲಾಗಬಹುದು, ಗುರಿ ಬದಲಾಗಬಹುದು, ಕಂಪಾರ್ಟ್‌ಮೆಂಟ್ ಬದಲಾಗಬಹುದು, ಪ್ರಯಾಣ ಮಾತ್ರ ನಡೆದೇ ಇರುತ್ತದೆ. ರೈಲು ತಪ್ಪಿದರೂ ನಮ್ಮ ಪ್ರಯಾಣ ತಪ್ಪುವುದಿಲ್ಲ. ಕೆಲವರು ಬೇಗ ಹೋಗುತ್ತಾರೆ, ನಿರಾಯಾಸವಾಗಿ ಹೋಗುತ್ತಾರೆ. ಕೆಲವರು ಹೋಗುತ್ತಾರೇನೋ ನಿಜ. ಆದರ ತಾಪತ್ರಯಗಳನ್ನು ಹೊತ್ತುಕೊಂಡೇ ಹೋಗುತ್ತಾರೆ. ಎಷ್ಟೋ ಸಲ ಅವು ನಾವಾಗಿಯೇ ನಿರ್ಮಿಸಿಕೊಂಡ ತಾಪತ್ರಯಗಳಾಗಿರುತ್ತವೆ. ನಾನು ಕೃಷಿ ಇಲಾಖೆ ಬಿಟ್ಟುಬಿಟ್ಟೆ. ಸುಮಾರು ಒಂದು ವರ್ಷ ನಂತರ ಕೂಡ ನನ್ನ ಆತ್ಮೀಯ ಮೇಲಾಧಿಕಾರಿಗಳು ವಾಪಸ್ ಬರಲು ನನಗೆ ಪತ್ರ ಬರೆದರು. ಅದಾಗಲೇ ನಾನು 'ಕರ್ಮವೀರ' ಪತ್ರಿಕೆಯನ್ನು ಸೇರಿದ್ದೆ. ನಾನು ಮರಳಿ ಹೋಗಲಿಲ್ಲ. ನನ್ನ ಜೀವನದ ರೈಲು ಬದಲಾಗಿತ್ತು. ಜೀವನವೆಂಬ ಈ ರೈಲ್ವೆಯಲ್ಲಿ ಅನೇಕ ಜಂಕ್ಷನ್‌ಗಳು ಬಂದು ಹೋಗಿವೆ. ಯಾವುದೋ ಗಾಡಿ, ಯಾವುದೋ ಪ್ರಯಾಣ. ದಾರಿಯಂತೂ ಸಾಗಿದೆ. ಆ ಮಾತಿಗೆ ಈಗ ಇಪ್ಪತ್ತು ವರ್ಷಗಳು ಸಂದಿವೆ. ಶ್ರೀ ಮುನಿಸ್ವಾಮಿ ಆಗಿನ್ನೂ ಇನ್‌ಛಾರ್ಜ್ ಗೆಝೆಡೆಟ್ ಅಧಿಕಾರಿ. ಈಗ ಬಹುಶಃ ಕೃಷಿ ಇಲಾಖೆಯ ಉನ್ನತ ಅಧಿಕಾರದಲ್ಲಿರಬಹುದು. ಅದು ಅವರ ಪುಣ್ಯ ಭಾಗ್ಯ. ನನ್ನ ಪ್ರಯತ್ನ ಫಲಿಸಿದ್ದರೆ ನಾನೂ ಒಬ್ಬ ಅಧಿಕಾರಿಯಾಗಬಹುದಾಗಿತ್ತು. ಆದರೆ ಸರಕಾರಿ ಸೇವೆಯೆಂಬ ಒಂದು ನಿರ್ದಿಷ್ಟ ರೈಲ್ವೆಯಿಂದ ನಾನು ಇಳಿದು ಬಿಟ್ಟಿದ್ದೆ. ❀

# ಮಧ್ಯಯುಗದ ಧರ್ಮ ಹಾಗೂ ರಾಜಕಾರಣ

ಶ್ರೀ ಸೇತುಮಾಧವ ಪಗಡಿಯವರು ನಿವೃತ್ತ ಐ.ಏ.ಎಸ್. ಅಧಿಕಾರಿ. ಮೊದಲಿನಿಂದಲೂ ಅವರಿಗೆ ಆಸಕ್ತಿಯ ವಿಷಯವಾದ ಭಾರತೀಯ ಇತಿಹಾಸದಲ್ಲಿ, ನಿವೃತ್ತಿಯ ನಂತರ ಅವರು ವಿಶೇಷ ಆಸ್ಥೆ ತಳೆದು ಅಧ್ಯಯನ ನಿರತರಾಗಿದ್ದಾರೆ. ಈ ಅಧ್ಯಯನದ ಫಲವಾಗಿ ಅನೇಕ ಲೇಖನಗಳು ಗ್ರಂಥಗಳು, ಮರಾಠಿ, ಇಂಗ್ಲಿಷ್-ಎರಡರಲ್ಲೂ ಅವರ ಪ್ರಭಾವೀ ಲೇಖನಿಯಿಂದ ಹರಿದುಬಂದಿವೆ. ಭಾರತೀಯ ಮುಸಲ್ಮಾನರ ಸಮಸ್ಯೆಯ ಕುರಿತ ಅವರ ಗ್ರಂಥಕ್ಕೆ ಇತ್ತೀಚೆ ಪುಣೆಯ ಕೇಳಕರ ಸಂಸ್ಥೆಯಿಂದ ಬಹುಮಾನ ಬಂದಿದೆ. ಅದರಿಂದ ಆಯ್ದುಕೊಳ್ಳಲಾದ ಕೆಲ ಅಂಶಗಳಿಂದ ಈ ಲೇಖನ ರೂಪಿತವಾಗಿದೆ.

ಸೂಫೀಪಂಥದ ಸಂತರು ರಾಜಕಾರಣದಿಂದ ದೂರವಿದ್ದು ಜನಸಾಮಾನ್ಯರೊಂದಿಗೆ ಒಂದಾಗಿ ಬೆರೆತು ತಮ್ಮ ಧರ್ಮಪ್ರಚಾರ ಕಾರ್ಯದಲ್ಲಿ ತೊಡಗಿದವರು. ಮುಸಲ್ಮಾನ ಸಮಾಜದಲ್ಲಿ ಬಹುಕಾಲದಿಂದ ಉಲೇಮಾ ಹಾಗೂ ಸೂಫಿ ಎಂಬ ಪ್ರಭೇದಗಳು ಬೆಳೆದು ಬಂದಿರುವವು. ಉಲೇಮಾ ಎಂಬುದು ಆಲಿಮ್ ಎಂಬ ಪದದ ಬಹುವಚನವಾಗಿದೆ. ಆಲಿಮ್ ಎಂದರೆ ವಿದ್ವಾಂಸರೆಂದು ಅರ್ಥ. ಯಾರು ಕುರಾನ್, ಹದಿಸ್ ಹಾಗೂ ಶರಾ, ಅಂದರೆ ಪೈಗಂಬರರಿಂದ ಪ್ರಣೀತವಾದ ಆದೇಶ–ನೆನಪುಗಳನ್ನು ಹಾಗೂ ಧರ್ಮಶಾಸ್ತ್ರವನ್ನು ಸ್ವಲ್ಪವೂ ಬಿಡದೆ ಅತ್ಯಂತ ಕರ್ಮಠರಾಗಿ ರಾಜ್ಯಸೂತ್ರಗಳನ್ನಾಧರಿಸಿ ಜೀವನ ಸಾಗಿಸುತ್ತಾರೋ ಅಂಥವರನ್ನು ಉಲೇಮಾ ಎಂದು ಕರೆಯುವುದು ರೂಢಿಯಲ್ಲಿತ್ತು.

ಇಸ್ಲಾಂ ಧರ್ಮ ಅದ್ವೈತವನ್ನು ಎಂದೂ ಅಂಗೀಕರಿಸುವುದಿಲ್ಲ. ಸೂಫೀಗಳು ಧ್ಯಾನ, ಧಾರಣೆ, ಅನುಷ್ಠಾನ, ಭಜನೆ, ಪೂಜೆ, ಯೋಗಸಾಧನೆ ಮೊದಲಾದ ಕ್ರಿಯೆಗಳಿಗೆ ಬದ್ಧರು. ಈ ಸೂಫೀ ಪಂಥದವರಲ್ಲಿ ಕೆಲವೇ ಜನರು ಅದ್ವೈತವಾದವನ್ನು ಅಂಗೀಕರಿಸಿದುದುಂಟು. ಆ ಬಗ್ಗೆ ಪ್ರತ್ಯೇಕವಾಗಿ ವಿಚಾರ ಮಾಡುವುದು ವಿಹಿತ. ಇನ್ನು ಇಸ್ಲಾಂ ಧರ್ಮವು ಶಾಂತಮಯ ವಾತಾವರಣದಲ್ಲಿ ಬೆಳೆಯಿತೆಂಬ ವಾದವು ಅರ್ಧಸತ್ಯದಿಂದ ಕೂಡಿದೆ. ಪ್ರಾಧ್ಯಾಪಕ ಅರ್ನಾಲ್ಡರಿಂದ ರಚಿತವಾದ 'ದ ಪ್ರೀಚಿಂಗ್ ಆಫ್ ಇಸ್ಲಾಮ್' ಎಂಬ ಗ್ರಂಥದಲ್ಲಿ ಈ ವಿಚಾರವನ್ನು ಅವರು ಚರ್ಚೆ ಮಾಡಿದ್ದಾರೆ, ಅವರಿಂದ ರಚಿತವಾದ ಈ ಗ್ರಂಥದ ವಿಮರ್ಶೆ ಸಾಕಷ್ಟು ಬಂದಿದೆ. ಭಾರತದ ಮುಸಲ್ಮಾನರು ಅದಕ್ಕೆ ಮನ್ನಣೆಯನ್ನಿತ್ತರಾದರೂ ಇತ್ತೀಚೆಗೆ ಅರ್ನಾಲ್ಡ್‌ರ ಗ್ರಂಥದ ಬಗ್ಗೆ ಅಲ್ಲಲ್ಲಿ ಸಾಕಷ್ಟು ಚರ್ಚೆಗಳು ಪ್ರಾರಂಭವಾಗಿವೆ.

### ಆದ್ಯ ರಾಮಾನುಜಾಚಾರ್ಯ

### ತೊಡಕಿನ ವಿಚಾರ

ಭಾರತದಲ್ಲಿ ಅರಬರು ಹಾಗೂ ತುರ್ಕರು ರಾಜ್ಯವನ್ನಾಳಿದರು. ಇದರಿಂದಾಗಿ ಇಸ್ಲಾಂ ಧರ್ಮದ ಪ್ರಸಾರವು ಇಲ್ಲಿ ಸಾಕಷ್ಟು ಪ್ರಮಾಣದಲ್ಲಾಗಿರುವುದು ಸಹಜ ಎಂದು ಕೆಲವರ ಭಾವನೆ. ಈ ವಿಚಾರವನ್ನು ಕುರಿತು ಪ್ರಾಂತಗಳ ರೀತಿಯಲ್ಲಿ ವಿಚಾರಮಾಡಿದಾಗ ನಿಜವಾದ

ನೋಟವು ನಮ್ಮ ಕಣ್ಮುಂದೆ ಬಂದು ನಿಲ್ಲುವವು. ಭಾರತದಲ್ಲಿ ತುರ್ಕರ ರಾಜ್ಯವು ಎಲ್ಲ ಕಡೆಗೂ ಒಂದೇ ರೀತಿಯಾಗಿರಲಿಲ್ಲ, ಅಲ್ಲದೆ ಅದು ಬಹುಕಾಲ ನಡೆಯಲಿಲ್ಲ. ಅಲ್ಪಾವಧಿಯ ವರೆಗೆ ಮಾತ್ರ ದಿಲ್ಲಿಯನ್ನು ಅದು ತನ್ನ ಕೇಂದ್ರವನ್ನಾಗಿ ಮಾಡಿಕೊಂಡಿತ್ತು. ಆದುದರಿಂದ ನಾವು ಪ್ರತಿಯೊಂದು ಪ್ರಾಂತದಲ್ಲಿಯ ಅಂಕಿ ಸಂಖ್ಯೆಗಳನ್ನು ಅಭ್ಯಾಸ ಮಾಡುವುದು ಉಚಿತ.

| ಕ್ರ. ಸಂ. | ಪ್ರಾಂತ | ಇ. ಸ. | ಒಟ್ಟು ಕಾಲಾವಧಿ |
|---|---|---|---|
| ೧. | ಸಿಂಧ | ೭೦೦—೧೮೫೩ | ೧೦೦೦ ವರ್ಷ |
| ೨. | ಮೊದಲಿದ್ದ ಶಿವಾ ಪ್ರಾಂತ | ೧೦೦೦—೧೮೧೨ | ೮೦೦ ವರ್ಷ |
| ೩. | ಪಂಜಾಬ | ೧೦೨೭—೧೮೦೦ | ೭೭೫ ವರ್ಷ |
| ೪. | ದಿಲ್ಲೀಪ್ರಾಂತ | ೧೧೯೬—೧೭೮೪ | ೬೦೦ ವರ್ಷ |
| ೫. | ಕಾಶ್ಮೀರ ಕಣಿವೆ | ೧೩೨೬—೧೮೧೨ | ೫೦೦ ವರ್ಷ |
| ೬. | ಲಡಾಖ | ೧೬೬೦—೧೮೨೦ | ೧೭೫ ವರ್ಷ |
| ೭. | ಹಿಮಾಚಲ ಪ್ರದೇಶ | ೧೬೫೦—೧೮೦೦ | ೧೫೦ ವರ್ಷ |
| ೮. | ಉತ್ತರ ಪ್ರದೇಶ . | ೧೨೦೦—೧೮೦೦ | ೬೦೦ ವರ್ಷ |
| ೯. | ಬಿಹಾರ | ೧೨೦೦—೧೮೦೦ | ೫೫೦ ವರ್ಷ |
| ೧೦. | ಬಂಗಾಲ | ೧೨೦೬—೧೭೫೭ | ೫೫೦ ವರ್ಷ |
| ೧೧. | ಓಡಿಸಾ | ೧೫೬೮—೧೭೫೦ | ೧೭೫ ವರ್ಷ |
| ೧೨. | ಮಧ್ಯಪ್ರದೇಶ ಮಾಳವಾ | ೧೩೦೦—೧೭೪೦ | ೪೫೦ ವರ್ಷ |
| ೧೩. | ಆಸ್ಸಾಮ | ೧೬೬೦—೧೬೭೦ | ೧೦ ವರ್ಷ |
| ೧೪. | ಮಧ್ಯಪ್ರದೇಶ ಛತ್ತೀ-ಸಗಡ, ಮಾಂಡಲೀಕರ ದ್ವಾರಾ. | ೧೬೪೦—೧೭೧೫ | ೭೫ ವರ್ಷ |
| ೧೫. | ಗುಜರಾತ | ೧೩೦೦—೧೭೪೦ | ೪೪೦ ವರ್ಷ |
| ೧೬. | ಮಹಾರಾಷ್ಟ್ರ | ೧೩೧೭—೧೬೬೪ | ೩೫೦ ವರ್ಷ |
| ೧೭. | ಕರ್ನಾಟಕ ಉತ್ತರ | ೧೩೨೦—೧೭೬೦ | ೪೪೦ ವರ್ಷ |
| ೧೮. | ದಕ್ಷಿಣ ಕರ್ನಾಟಕ ಮೈಸೂರು | ೧೭೬೦—೧೮೦೦ | ೪೦ ವರ್ಷ |
| ೧೯. | ಆಂಧ್ರ ಪಶ್ಚಿಮ | ೧೩೪೦—೧೮೦೦ | ೪೬೦ ವರ್ಷ |
| ೨೦. | ಆಂಧ್ರ ದಕ್ಷಿಣ | ೧೬೪೦—೧೮೦೦ | ೧೫೦ ವರ್ಷ |
| ೨೧. | ಆಂಧ್ರ ಪೂರ್ವ | ೧೫೭೫—೧೭೫೨ | ೧೭೦ ವರ್ಷ |
| ೨೨. | ತಮಿಳುನಾಡು | ೧೬೫೦—೧೭೭೫ | ೧೨೫ ವರ್ಷ |
| ೨೩. | ಕೇರಳ ಉತ್ತರ | ೧೭೬೪—೧೭೯೨ | ೨೮ ವರ್ಷ |
| ೨೪. | ಕೇರಳ ದಕ್ಷಿಣ, ತ್ರಾವಣಕೋರ ಕೊಚ್ಚಿಗಳಲ್ಲಿ ಇಲ್ಲವೇ ಇಲ್ಲ. | | |

ಬಹುಕಾಲದಿಂದ ಯಾವ ಭಾಗದಲ್ಲಿ ತುರ್ಕರ ರಾಜ್ಯವಿತ್ತೋ ಆ ಭಾಗಗಳಲ್ಲಿ ಮುಸಲ್ಮಾನರ ಸಂಖ್ಯೆ ಹೆಚ್ಚಾಗಿರುವುದು ಸಹಜ ಎಂಬ ಭಾವನೆ ಅನೇಕರಲ್ಲಿರಬಹುದು. ಆದರೆ ಅಭ್ಯಾಸ ಮಾಡಿದಾಗ ವಸ್ತುಸ್ಥಿತಿಯ ಅರಿವಾಗುತ್ತದೆ. ಸಮಗ್ರ ಭಾರತವು ಇಬ್ಭಾಗವಾಗುವ ಮೊದಲಿನ ಅಂಕಿಸಂಖ್ಯೆಗಳು ಈ ರೀತಿಯಾಗಿವೆ.

೧. ಪಂಜಾಬದಲ್ಲಿ ನೂರಕ್ಕೆ ಐವತ್ತೆಂಟು
೨. ಸೀಮಾ ಪ್ರದೇಶದಲ್ಲಿ ನೂರಕ್ಕೆ ತೊಂಬತ್ತೈದು.
೩. ಸಿಂಧದ ಸಮಗ್ರ ಪ್ರಾಂತ ನೂರಕ್ಕೆ ಎಪ್ಪತ್ತರಷ್ಟು.
೪. ಬಂಗಾಲ ನೂರಕ್ಕೆ ಐವತ್ನಾಲ್ಕು.

ಇನ್ನು ಭಾರತವು ಇಬ್ಭಾಗವಾದ ನಂತರದ ಅಂಕಿ ಸಂಖ್ಯೆಗಳು ಹೀಗಿವೆ.

೧. ಅಸ್ಸಾಮು ನೂರಕ್ಕೆ ೨೪.೩
೨. ಪಶ್ಚಿಮ ಬಂಗಾಲ ನೂರಕ್ಕೆ ೨೦.೪೬
೩. ಉತ್ತರ ಪ್ರದೇಶ ನೂರಕ್ಕೆ ೧೫.೪೮
೪. ಬಿಹಾರ ನೂರಕ್ಕೆ ೧೭.೪೮
೫. ಕರ್ನಾಟಕ ನೂರಕ್ಕೆ ೧೧.೬೩
೬. ಗುಜರಾತ್ ನೂರಕ್ಕೆ ೮.೪೨
೭. ಮಹಾರಾಷ್ಟ್ರ ನೂರಕ್ಕೆ ೮.೪೦
೮. ಆಂಧ್ರ ಪ್ರದೇಶ ನೂರಕ್ಕೆ ೮.೯
೯. ರಾಜಸ್ಥಾನ ನೂರಕ್ಕೆ ೭.೯
೧೦. ತ್ರಿಪುರಾ ನೂರಕ್ಕೆ ೬.೭೮
೧೧. ಮಧ್ಯಪ್ರದೇಶ ನೂರಕ್ಕೆ ೪.೩೬
೧೨. ಹಿಮಾಚಲ ಪ್ರದೇಶ ನೂರಕ್ಕೆ ೧.೮೫
೧೩. ಜಮ್ಮು ಮತ್ತು ಕಾಶ್ಮೀರ ನೂರಕ್ಕೆ ೬೫.೮೫
೧೪. ಕೇರಳ ನೂರಕ್ಕೆ ೧೯.೫೦
೧೫. ಮಣಿಪುರ ನೂರಕ್ಕೆ ೬.೬೧
೧೬. ತಮಿಳುನಾಡು ನೂರಕ್ಕೆ ೫.೧೧
೧೭. ಹರಿಯಾಣ ನೂರಕ್ಕೆ ೪.೨೪
೧೮. ಓಡಿಸಾ ನೂರಕ್ಕೆ ೧.೪೯
೧೯. ದಿಲ್ಲಿ ನೂರಕ್ಕೆ ೬.೪೭
೨೦. ಪಾಂಡಿಚೇರಿ ನೂರಕ್ಕೆ ೬.೧೮
೨೧. ಗೋವಾ ನೂರಕ್ಕೆ ೩.೭೬
೨೨. ಅಂದಮಾನ ನೂರಕ್ಕೆ ೧೦.೧೨
೨೩. ಚಂಡೀಗಡ ನೂರಕ್ಕೆ ೧.೮೫
೨೪. ದಾದರಾನಗರ ಹವೇಲಿ ನೂರಕ್ಕೆ ೧
೨೫. ಪಂಜಾಬದಲ್ಲಿ ಇಲ್ಲವೇ ಇಲ್ಲ.

ಮೇಲೆ ವಿವರಿಸಿದ ಅಂಕಿ ಸಂಖ್ಯೆಗಳನ್ನು ಗಮನಿಸಿದಾಗ ಎಂಥವರಿಗೂ ಆಶ್ಚರ್ಯವಾಗದಿರದು. ಆ ಸಮಯದಲ್ಲಿ ಮೊಗಲರು ಗೌಹಾತಿಯಿಂದ ಮುಂದೆ ಹೋಗಲೇ ಇಲ್ಲ. ಹೀಗಿದ್ದರೂ ಆ ಭಾಗದಲ್ಲಿ ಮುಸಲ್ಮಾನರ ಸಂಖ್ಯೆಯು ನೂರಕ್ಕೆ ಇಪ್ಪತ್ನಾಲ್ಕರಷ್ಟಿದೆ. ಪೂರ್ವ ಬಂಗಾಲದ ಕೃಷಿಕರನ್ನು ದೂರ ಮಾಡಿದ ಪರಿಣಾಮದಿಂದ ಈ ಸಂಖ್ಯೆಯು ಬೆಳೆಯುವಂತಾಯಿತು. ಇದರ ಹೊರತಾಗಿ ಮತಾಂತರವಾಗಲಿ ಧರ್ಮ ಪ್ರಚಾರವಾಗಲಿ ಈ ಬೆಳವಣಿಗೆಗೆ ಕಾರಣವಲ್ಲ. ಕೇರಳದ ಉತ್ತರ ಭಾಗದಲ್ಲಿ ಮಾತ್ರ ಮುಸಲ್ಮಾನರ ಜನಸಂಖ್ಯೆ ಇದೆ. ಹೈದರಾಲಿ ಹಾಗೂ ಟೀಪು ಇಬ್ಬರೂ ಎಪ್ಪತ್ತೈದು ವರುಷ ಈ ಭಾಗವನ್ನಾಳಿದರು. ಆದರೂ ಇಂದು ಕೇರಳದಲ್ಲಿ ಮುಸಲ್ಮಾನರ ಸಂಖ್ಯೆಯು ನೂರಕ್ಕೆ ಹತ್ತೊಂಬತ್ತರಷ್ಟಿದೆ. ಇದು ಕೇವಲ ರಾಜಕೀಯ ಒತ್ತಡದಿಂದಾಗಿ ಬೆಳೆದು ಬಂದ ಸಂಖ್ಯೆಯಾಗಿದೆ. ರಾಜಕೀಯ ಪ್ರಭಾವಗಳಿಂದಾಗಿಯೇ ಪಂಜಾಬ, ಸಿಂಧ, ಸೀಮಾ ಪ್ರಾಂತ ಈ ಪ್ರದೇಶಗಳಲ್ಲಿ ಮುಸಲ್ಮಾನರ ಸಂಖ್ಯೆಯು ಹೆಚ್ಚಾಗಿ ಬೆಳೆಯುವಂತಾಯಿತು. ಕ್ರಿಸ್ತಶಕ ೧೨೦೦ರ ನಂತರವಂತೂ ಆರ್ಯಾವರ್ತದೊಂದಿಗೆ ಕಾಶ್ಮೀರದ ಸಂಬಂಧವು ಕಡಿದು ಹೋಯಿತು. ೧೩೭೩ರಲ್ಲಿ ಹಮದಾನಿಯವರಂಥ ಸೂಫೀ ಸಂತರು ಧರ್ಮ ಪ್ರಚಾರದೊಂದಿಗೆ ಮತಾಂತರದ ಪ್ರಯತ್ನಗಳನ್ನಾರಂಭಿಸಿದರು.

ಬಹುಸಂಖ್ಯಾತರಾಗಿ ಹಿಂದುಗಳಿರುವುದರಿಂದಲೂ ಹಾಗೂ ಹಿಂದೂ ರಾಜರುಗಳಲ್ಲಿ ಅಲ್ಲಲ್ಲಿ ಸರಿಯಾದ ರೀತಿಯ ಪ್ರತಿಭಟನೆ ಮೂಡಿದುದರಿಂದಲೂ ತುರ್ಕರಿಗೆ ತಮ್ಮ ರಾಜ್ಯವನ್ನು ಮನ ಬಂದಂತೆ ವಿಸ್ತರಿಸಲು ಸಾಧ್ಯವಾಗಲಿಲ್ಲ, ಯಾವುದೇ ಧರ್ಮಪ್ರಚಾರ ಮಾಡಲು

ಸರಿಯಾದ ಯೋಜನೆ ಬೇಕು. ತಕ್ಕ ಸಾಧನ ಸೌಕರ್ಯಗಳಿರುವುದೂ ಅಗತ್ಯ. ಅಲ್ಲದೆ ಶಾಸ್ತ್ರಸೂತ್ರಗಳನ್ನಾಧರಿಸಿದವರ ಸಹಾಯವೂ ಈ ಕಾರ್ಯದಲ್ಲಿ ಬಹು ಅಗತ್ಯ. ತುರ್ಕರ ಕಾಲದಲ್ಲಿ ಕೇವಲ ಎರಡೇ ಎರಡು ಸಲ ದಿಲ್ಲಿಯನ್ನು ಅವರು ತಮ್ಮ ಕೇಂದ್ರವನ್ನಾಗಿ ಮಾಡಿಕೊಂಡಿದ್ದರು. ಮೊದಲನೆ ಕಾಲವನ್ನು ೧೩೦೦ರಿಂದ ೧೩೫೦ ಎಂದು ಭಾವಿಸಿದಲ್ಲಿ, ೧೫೫೬ ರಿಂದ ೧೭೨೦ರ ಕಾಲವನ್ನು ಎರಡನೆಯ ಹಂತದ ಕಾಲವೆಂದು ಗುರುತಿಸಬಹುದು. ಈ ಕಾಲಖಂಡವು ಕಾಶ್ಮೀರ, ದಿಲ್ಲಿ, ಮಾಳವಾ, ಗುಜರಾತ, ಜೋಧಪುರ, ಬಂಗಾಲ, ಖಾನದೇಶ, ಬಹಮನಿ, ವಿಜಯನಗರ, ಚಿತ್ತೋಡ, ಓಡಿಸಾ, ಅಸ್ಸಾಮ, ಮೊದಲಾದ ಭಾಗಗಳಲ್ಲಿ ಹಿಂದೂರಾಜರ ಇತಿಹಾಸದ ಕಾಲವೆಂದೆನಿಸುವುದು. ಗುಜರಾತ, ಕೊಂಕಣ, ಮಲಬಾರ, ಈ ಪ್ರದೇಶದಲ್ಲಿರುವ ಸಮುದ್ರ ಕರಾವಳಿಗುಂಟ ಬಹುಕಾಲದಿಂದ ಅರಬರು ಹಾಗೂ ಇರಾಣಿಗಳ ವಸಹಾತುಗಳಿದ್ದವು. ಅಂದಿನ ಭಾರತೀಯ ರಾಜರಿಂದ ಅವರಿಗೆ ಯಾವ ತರಹದ ತೊಂದರೆಗಳಿರಲಿಲ್ಲ. ಮಹಮ್ಮದ ಘಜನಿಯ ದಾಳಿಗಳು ಪ್ರಾರಂಭವಾದಾಗಿನಿಂದ ಕಟ್ಟಾ ಧರ್ಮಾಭಿಮಾನಿಗಳು ಜೆಹಾದ್ (ಧರ್ಮಪ್ರಚಾರದ) ಹೆಸರಿನಿಂದ ತಂಡ ತಂಡವಾಗಿ ಭಾರತಕ್ಕೆ ಬರತೊಡಗಿದರು. ಹೊರಗಿನಿಂದ ಬಂದ ಈ ಧರ್ಮಪ್ರಚಾರಕರ ವಿಷಯವನ್ನು ಅಭ್ಯಾಸ ಮಾಡುವುದೂ ಉಚಿತ. ಹೀಗೆ ಬಂದವರಲ್ಲಿ ಸೂಫೀ ಹಾಗೂ ಉಲೇಮಾಗಳ ಪಾತ್ರವು ಬಹು ಹಿರಿದಾಗಿರುವದು. ದಿಲ್ಲಿಯಲ್ಲಿಯ ನಿಜಾಮುದ್ದೀನ ಅವಲಿಯಾ ನಿಜವಾಗಿಯೂ ಮಹಾನುಭಾವರಾದ ಸಂತರೆಂದೆನಿಸುತ್ತಾರೆ. ಅವರ ಮಠವು ಅಂದಿನಿಂದಲೂ ಸಾವಿರಾರು ಶಿಷ್ಯರಿಗೆ ಆಶ್ರಯವನ್ನೀಯುವ ಕೇಂದ್ರವೆಂದೆನಿಸಿಕೊಂಡಿದೆ. ಇನ್ನು ಬೇರೆ ಕೆಲವು ಸೂಫೀ ಸಂತರನ್ನು ಮಹಾಯೋಧ್ಧಾ ಎಂದು ಸಂಭೋಧಿಸಲಾಗಿದೆ.

ರಿಚರ್ಡ್ ಮ್ಯಾಕ್ಸ್‌ವೆಲ್ ಈಟನ್‌ರಿಂದ ರಚಿತವಾದ (ಸೂಫೀಜ್ ಆಫ್ ಬಿಜಾಪುರ) 'ವಿಜಾಪುರದ ಸೂಫೀಸಂತರು' ಎಂಬ ಕೃತಿಯು ೧೩೦೦ ರಿಂದ ೧೭೦೦ ಹಾಗೂ ೧೯೭೮ ರ ಕಾಲಾವಧಿಯಲ್ಲಿ ವೆಸ್ಟರ್ನ್ ನ್ಯೂಜರ್ಸಿಯಲ್ಲಿರುವ ಪ್ರಿನ್ಸ್‌ಟನ್ ವಿದ್ಯಾಪೀಠದ ಮುದ್ರಣಾಲಯದಲ್ಲಿ ಪ್ರಕಟವಾಯಿಸಿತು. ಲೇಖಕರು ವಿಜಾಪುರ, ಗುಲಬುರ್ಗಾ, ಹೈದರಾಬಾದ್ ಮೊದಲಾದ ಭಾಗಗಳಲ್ಲಿರುವ ಮಠ(ದರ್ಗಾ)ಗಳಲ್ಲಿ ದೊರೆಯುವ ನೂರಾರು ಕಾಗದಪತ್ರಗಳನ್ನೆಲ್ಲ ಅಭ್ಯಾಸ ಮಾಡಿದ್ದಾರೆ. ಆ ಲೇಖನಕ್ಕೆ ಸಂಬಂಧಿಸಿದಂತೆ ಕೆಲವು ಗ್ರಂಥಗಳನ್ನೂ ಅವರು ಅವಲೋಕನ ಮಾಡಿದ್ದಾರೆ. ಹೀಗೆ ಗ್ರಂಥಗಳು ಮತ್ತು ಕಾಗದ ಪತ್ರಗಳ ಅಭ್ಯಾಸಾನಂತರ ಅವರಿಂದ ರಚಿತವಾದ ಗ್ರಂಥವನ್ನು ವಿಜಾಪುರದ ಸೂಫೀಸಂತರೆಂಬ ಹೆಸರಿನಿಂದ ಕರೆಯಲಾಗಿದೆ. ಈ ಗ್ರಂಥದಲ್ಲಿ ಮೂಲಲೇಖಕರು ಇಸ್ಲಾಂ ಧರ್ಮಪ್ರಚಾರದ ವಿಷಯವನ್ನು ಕುರಿತು ತಮ್ಮ ಕೋಪಾಟೋಪಗಳನ್ನೆಲ್ಲ ಹೊರಚೆಲ್ಲಿದ್ದಾರೆ. ಆ ಗ್ರಂಥದಲ್ಲಿರುವ ವಿಷಯವನ್ನೇ ಇಲ್ಲಿ ಕೊಡಲಾಗಿದೆ.

೧. ಸೂಫೀ ಸರಮದ್ ಕೊಲ್ಲಲ್ಪಟ್ಟ (೧೩೧೫)

೨. ಪೀರ್ ಮಾಖರಿ ಖಂಡಾಯತ್ ವಿಜಾಪುರದಲ್ಲಿ ಕೊಲ್ಲಲ್ಪಟ್ಟ (೧೩೨೦)

೩. ಶೇಖ್ ಅಲಿ ಮಹೆಲವಾನ್ ಕರ್ನೂಲಿನಲ್ಲಿ ಕೊಲ್ಲಲ್ಪಟ್ಟ (೧೩೨೭)

೪. ಶೇಖ್ ಶಹೀದ ತಾಳೀಕೋಟೆಯಲ್ಲಿ ಕೊಲ್ಲಲ್ಪಟ್ಟ (೧೨೭೩)

೫. ಪೀರ್ ಜಮನಾ ವಿಜಾಪುರದಲ್ಲಿ ಕೊಲ್ಲಲ್ಪಟ್ಟ (೧೩೦೪)

ಹೀಗೆ ರೊಚ್ಚಿಗೆದ್ದ ಜನರಿಂದ ಕೊಲ್ಲಲ್ಪಟ್ಟ ಈ ಸಂತರಲ್ಲಿ ಕೆಲವರಾದರೂ ಮಲಿಕ್‌ಕಾಫರ್ ಹಾಗೂ ಮುಬಾರಕ್ ಖಿಲಜಿ ಇವರೊಂದಿಗೆ ಬಂದಿರಬಹುದು ಎಂಬುದು ಈಟನ್ನರ ಅಭಿಪ್ರಾಯ. ಇವರೆಲ್ಲರೂ ಧರ್ಮಯುದ್ಧದ ಕಲ್ಪನೆಯಿಂದ ಕೂಡಿದವರಾಗಿದ್ದರು. ಆದುದರಿಂದ ಸ್ಥಾನಿಕ ಜನತೆಯ ಮೇಲೆ ಸಾಕಷ್ಟು ಪ್ರಮಾಣದಲ್ಲಿ ಅತ್ಯಾಚಾರಗಳನ್ನು ನಡೆಸಿದರು. ವಿರೋಧಿಸಿದವರನ್ನೆಲ್ಲ ಕಡಿದು ಚೆಲ್ಲಿದರು. ಬಲಾತ್ಕಾರದಿಂದ ಧರ್ಮಾಂತರ ಕಾರ್ಯವನ್ನು ಮುಂದುವರಿಸಿದರು. ವಿಜಾಪುರ ಭಾಗದಲ್ಲಿಯ ಅನೇಕ

ಕೃಷಿಕರನ್ನು ಸಂಹಾರಮಾಡಿದ ಹುಸಾಮುದ್ದೀನ್ ಸಯ್ಯದನಂತೂ ತನ್ನ ಹೆಸರನ್ನು 'ನಾಗಸರ್ಪ-ದಂತಿರುವ ಖಡ್ಗ' ಎಂದಿಟ್ಟುಕೊಂಡಿದ್ದ. ೧೨೮೩ ರಲ್ಲಿ ಈತನನ್ನು ಗುಲ್ಬುರ್ಗಾ ಭಾಗದಲ್ಲಿ ಕಡಿದು ಚೆಲ್ಲಲಾಯಿತು. ಈ ಘಟನೆಯನ್ನು ನಾವು ಸೂಫೀಗಳ ಕಾಗದ ಪತ್ರಗಳಿಂದ ತಿಳಿದುಕೊಳ್ಳಬಹುದು. ವಿಜಾಪುರ, ಗೋಗಿ, ಶಹಾಪುರ, ಸಗರ, ತಾಳಿಕೋಟಿ, ಗುಲ್ಬುರ್ಗಾ, ಯಾದಗಿರಿ, ರಾಯಚೂರು ಮೊದಲಾದವುಗಳೆಲ್ಲ ಒಂದು ಕಾಲದಲ್ಲಿ ಯಾದವರು ರಾಜ್ಯವಾಳಿದ ಪ್ರದೇಶಗಳೆಂದು ಗುರುತಿಸಲ್ಪಡುತ್ತಿದ್ದವು. ಈ ಮಾತನ್ನು ಸೂಫೀಗಳನ್ನು ಕುರಿತು ಅಭ್ಯಾಸ ಮಾಡುವಾಗ ಲಕ್ಷ್ಯದಲ್ಲಿಡುವುದು ವಿಹಿತ.

ಯಾದವರ ಕೊನೆಯ ಭಾಗದಲ್ಲಿ ಮತ್ತು ಅನಂತರದಲ್ಲಿ ಮಹಾರಾಷ್ಟ್ರದ ಮೇಲೆ ತುರ್ಕರ ಹಾವಳಿ ಆರಂಭವಾಯಿತು. ಇದೇ ಸುಮಾರಿನಲ್ಲಿ ಸೂಫೀಗಳು ಹಾಗೂ ಕರ್ಮಠರಾದ ಧರ್ಮ ಪ್ರಚಾರಕರ ಓಡಾಟಗಳೂ ಹೆಚ್ಚಾಗತೊಡಗಿದವು. ಸ್ಥಾನೀಯ ನಿವಾಸಿಗಳೊಂದಿಗೆ ನಡೆಸಿದ ಅವರ ಹೋರಾಟಗಳೆಲ್ಲ ರಾಜಕೀಯ ಹಾಗೂ ಧಾರ್ಮಿಕ ನೀತಿಗಳನ್ನೇ ಅವಲಂಬಿಸಿದ್ದವು. ದೇವಮಂದಿರಗಳ ನಾಶ, ಸ್ಥಾನೀಯರ ಧರ್ಮಗ್ರಂಥಗಳನ್ನೆಲ್ಲ ಧ್ವಂಸಪಡಿಸುವುದು, ಬಲಾತ್ಕಾರದಿಂದ ಮತಾಂತರಗೊಳಿಸುವ ಪ್ರಯತ್ನಗಳೆಲ್ಲ ಈ ಕಾಲದಲ್ಲಿಯೇ ಹೆಚ್ಚಿನ ಪ್ರಮಾಣದಲ್ಲಾದವು. ಈ ಮಾತನ್ನು ಸೂಫೀಗಳ ಬಖರ ಅಥವಾ ಕಾಗದ ಪತ್ರಗಳಿಂದಲೇ ತಿಳಿದುಕೊಳ್ಳಬಹುದು.

ಕರ್ಮಠರೂ ಕಟ್ಟಾ ಧರ್ಮಾಭಿಮಾನಿಗಳೂ ಎಂದೆನಿಸಿಕೊಳ್ಳುತ್ತಿದ್ದ ಪ್ರಚಾರಕರಿಗೆಲ್ಲ ಅಂದಿನ ರಾಜಸತ್ತೆಯ ಬೆಂಬಲವಿತ್ತು, ಮುಂದೆ ಬಹಮನಿಯವರ ಕಾಲದಲ್ಲಿ ಮತ್ತು ಅನಂತರದಲ್ಲಿ ಬೆಳೆದು ಬಂದ ಶಾಹೀ ಮನೆತನದವರ ಕಾಲದಲ್ಲಿ ಸ್ವಲ್ಪ ಬದಲಾವಣೆಗಳಾದವು. ದಕ್ಷಿಣದಲ್ಲಿ ತಲೆಯೆತ್ತಿದ ವಿಜಯನಗರ ಸಾಮ್ರಾಜ್ಯದಿಂದಾಗಿ ಈ ವಿಪರೀತಗಳಿಗೆಲ್ಲ ಸ್ವಲ್ಪ ಕಡಿವಾಣ ಹಾಕಿದಂತಾಯಿತು. ಈ ಕಾಲಾವಧಿಯಲ್ಲಿ ಖಾನ್‌ದೇಶದ ಫರೂಕಿ ರಾಜರು, ಗುಜರಾತ್, ಮಾಳವಾ ಹಾಗೂ ದಿಲ್ಲಿಯ ಸುಲ್ತಾನರು, ಅನಂತರದಲ್ಲಿ ಬಂದ ಮೊಗಲ್ ಬಾದಶಹರು ಇವರಲ್ಲಿ ನಡೆದ ಶಿಯಾ ಸುನ್ನಿ ಹಾಗೂ ಪರದೇಶಿ ಮತ್ತು ದಖನಿ ಎಂಬ ಅನೇಕ ತರಹದ ಭೇದ ಭಾವಗಳಿಂದಾಗಿ ಮತ್ತು ಮಾನವ ಬಲದ ಅರಿವುಗಳಿಂದಾಗಿ ಈ ಶಾಹೀ ಮನೆತನಗಳು ತಮ್ಮ ತಮ್ಮಲ್ಲಿಯೇ ಜರ್ಜರಿತವಾಗತೊಡಗಿದವು. ಇಂಥ ಪರಿಸ್ಥಿತಿಗಳಿಂದ ತುರ್ಕರು ಹೇಗಾದರೂ ಮಾಡಿ ತಮ್ಮ ರಾಜಸತ್ತೆಗಳನ್ನುಳಿಸಿಕೊಳ್ಳಲು ಧಡಪಡಿಸತೊಡಗಿದರು. ಅವರಿಗೆ ಹೇಗಾದರೂ ಮಾಡಿ ಪ್ರಜೆಗಳ ಮನೋರ್ದಾಢ್ಯವು ಕುಸಿಯುವಂತಾಗಬೇಕು, ಸ್ವದೇಶಿಯರೆಲ್ಲ ಎರಡನೇ ದರ್ಜೆಯ ನಾಗರಿಕರೆಂಬ ಭಾವವು ಬೇರೂರುವಂತಾಗಬೇಕು, ನಾವೇ ವಿಜಯಿಗಳು ಎಂಬ ಪ್ರಭಾವವು ಅವರ ಮನದಿಂದ ದೂರಾಗಬಾರದು ಈ ವಿಷಯದಲ್ಲಿ ಅಂದಿನ ಸುಲ್ತಾನರು ಹೆಚ್ಚು ಗಮನವನ್ನೀಯತೊಡಗಿದರು.

## ಸೂಫೀಗಳ ಪ್ರಚಾರ

ಮುನ್ನೂರಾಐವತ್ತು ವರುಷಗಳ ದೀರ್ಘಕಾಲದ ತುರ್ಕರ ರಾಜ್ಯಾಡಳಿತದಲ್ಲಿ ನಮಗೆ ಕಾಣುವಂತಾದುದು ಉತ್ತರ ಭಾರತಕ್ಕಿಂತ ದಕ್ಷಿಣ ಭಾರತದಲ್ಲಿ ಮುಸಲ್ಮಾನರ ಸಂಖ್ಯೆ ತೀರ ಕಡಿಮೆ ಎಂಬ ಮಾತು. ಉತ್ತರ ಪ್ರದೇಶ, ಬಿಹಾರಗಳಲ್ಲಿಯೂ ಇದೇ ರೀತಿಯಾಗಿರುವುದು. ದಕ್ಷಿಣದಲ್ಲಿ ತುರ್ಕರಿಗೆ ರಾಜ್ಯವಾಳಲು ಸಾಧ್ಯವಾಗಲಿಲ್ಲ. ಆದರೂ ಹದಿನಾರನೆಯ ಶತಮಾನದಲ್ಲಿ ದಕ್ಷಿಣದಲ್ಲಿ ನಡೆದ ಯುದ್ಧಗಳ ಸಂಖ್ಯೆಗೇನೂ ಕಡಿಮೆಯಿಲ್ಲ, ಸುಮಾರು ನೂರು ಯುದ್ಧಗಳಾಗಿವೆ, ಲೆಕ್ಕ ಹಾಕಿದಲ್ಲಿ ವರುಷಕ್ಕೊಂದು ಯುದ್ಧವೆಂಬಂತಾಗುತ್ತದೆ. ಹೀಗಿರುವಲ್ಲಿ ಅಂದಿನ ಆರ್ಥಿಕ ಹಾಗೂ ಸಾಮಾಜಿಕ ಜೀವನದ ಮೇಲೆ ಈ ಯುದ್ಧಗಳು ಎಂಥ ಪರಿಣಾಮವನ್ನುಂಟುಮಾಡಿರಲಿಕ್ಕಿಲ್ಲ ಎಂದೆನಿಸುತ್ತದೆ.

ದಕ್ಷಿಣದಲ್ಲಿ ಇಸ್ಲಾಂ ಧರ್ಮದ ಪರಿಚಯವಾದುದು ಸೂಫೀಸಂತರಿಂದ. ತುರ್ಕರ ರಾಜ್ಯವು ಈ ಭಾಗದಲ್ಲಿ ಇಲ್ಲದಿದ್ದರೂ ಸೂಫೀಸಂತರ ದಾಳಿಗಳಿಗೇನೂ ಕೊರತೆ ಇರಲಿಲ್ಲ. ಈ ಸೂಫೀ

ಗಳಲ್ಲಿ ಅನೇಕರು ಬಹುಶಾಸ್ತ್ರಿಕರಾಗಿಯೂ ಧರ್ಮನಿರತರಾಗಿಯೂ ಶಾಂತಸ್ವಭಾವದವರಾಗಿಯೂ ಇದ್ದರು. ಈ ಗುಂಪಿನಲ್ಲಿ ಚಿಸ್ತಿ, ಸುಹರಾವರ್ದಿ, ಕಾದ್ರಿ, ನಕಬಂಧಿ, ಶುತಾರಿ ಎಂಬ ಐದು ಪ್ರಭೇದಗಳಿದ್ದವು. ಇವರಲ್ಲಿ ಹೆಚ್ಚಿನವರು ಅಹಮ್ಮದಾಬಾದಿನಿಂದ ಬಂದಿದ್ದರೆ, ಮಾತ್ರ ಕೆಲವರು ಸಮುದ್ರ ಮಾರ್ಗವಾಗಿಯೂ ಬಂದಿರುವುದುಂಟು. ಒಟ್ಟಿನಲ್ಲಿ ಇವರೆಲ್ಲರೂ ಇರಾಣ ಹಾಗೂ ಅರಬಸ್ತಾನ ಮೂಲ ನಿವಾಸಿಗಳು. ಈ ವಿಚಾರದಲ್ಲಿ ಈ ಜನರು ತಮ್ಮ ಗ್ರಂಥಗಳಲ್ಲಿ ವಿಸ್ತಾರವಾದ ಮಾಹಿತಿಗಳನ್ನೊದಗಿಸಿದ್ದಾರೆ. ಅಂದು ರಾಜ್ಯವನ್ನಾಳುತ್ತಿದ್ದವರು ಮುಕ್ತಮನಸ್ಸಿನಿಂದ ಇವರಿಗೆ ಸ್ವಾಗತ ನೀಡಿದರು. ಮುಂತಜಬುದ್ದೀನ್ ಜರಜರಿಬಕ್ಷ್, ಬುರಹಾಣುದ್ದೀನ್ ಗರೀಬಶಹಾ, ಜೈನುದ್ದೀನ್ ಶಿರಾಜಿ (ಇವರು ಬಂದೇನವಾಜರ ತಂದೆ) ಇವರೆಲ್ಲ ಔರಂಗಬಾದ ಸಮೀಪದಲ್ಲಿರುವ ಖುಲ್ದಾಬಾದದಲ್ಲಿದ್ದವರು. ಹಾಜಿಅಲಿ ಹಾಗೂ ಮಾಹಿಮದಲ್ಲಿಯ ಪೀರ (ಮುಂಬಯಿ) ಬಾದಿಲಶಹಾನಾಶಿಕ, ಶೇಖ್ ಮುಹ್ಮದಬಾಬಾ, ಶ್ರೀಗೊಂದೇಕರ ಇವರೆಲ್ಲ ಬಹು ದೊಡ್ಡ ಪಂಡಿತರೆಂದೆನಿಸಿಕೊಳ್ಳುತ್ತಿದ್ದರು. ಅವರ ಶಿಷ್ಯರ ಮಠಗಳು (ಖಾನಕೆ) ಕರ್ನಾಟಕ ಹಾಗೂ ಮಹಾರಾಷ್ಟ್ರದ ಅನೇಕ ಸ್ಥಳಗಳಲ್ಲಿರುವುವು, ಮುಂದೆ ಇವರೆಲ್ಲರ ವಂಶಜರಿಂದ ಮಠಾಧಿಪತಿಗಳಂತಹ ಪರಂಪರೆಯೂ ಆರಂಭಗೊಂಡಿತು. ಕೆಲವು ಕಡೆಗಳಲ್ಲಿ ಈ ಸಂತರು ಗ್ರಾಮದೇವತೆಯ ಸ್ಥಳವನ್ನೇ ಆಕ್ರಮಿಸಿಕೊಂಡರು. ಜನರು ಇವರ ಸಮಾಧಿಗಳಿಗೆ ಹರಕೆಯನ್ನು ಸಲ್ಲಿಸುವುದು, ಉತ್ಸವ, ಜಾತ್ರೆ ಮೊದಲಾದವುಗಳನ್ನು ಮಾಡುವುದು ಆರಂಭವಾಯಿತು. ಸಂತ ಏಕನಾಥರು ಹಾಗೂ ಸಮರ್ಥ ರಾಮದಾಸರಿಂದ ರಚಿತವಾದ ಸಾಹಿತ್ಯದಲ್ಲಿಯೂ ಈ ಸಂತರ ವಿಚಾರವಾಗಿ ವರ್ಣನೆಗಳಿರುವುದನ್ನು ಕಾಣಬಹುದು.

ಮುಸಲ್ಮಾನ ಸಮಾಜದಲ್ಲಿ ಅನೇಕ ಭಿನ್ನ ಭಿನ್ನ ಜಾತಿಗಳಿರುವುದನ್ನು ಹಿಂದಿನ ಗ್ಯಾಜೆಟಿಯರುಗಳನ್ನು ಪರಿಶೀಲಿಸಿದಾಗ ತಿಳಿದು ಬರುವುದು. ಹಿಂದಿನ ಕಾಲದಲ್ಲಿ ಧರ್ಮಾಂತರ ಹೊಂದಿದವರನ್ನು ನಾವು ಇಂದಿಗೂ ಸುಲಭವಾಗಿ ಕಂಡು ಹಿಡಿಯಬಹುದು. ಬಾಗವಾನ್, ಮೌಳಿ, ಬೇಪಾರಿ, ಕಸಾಯಿ, ಮಾಹೂತ, ಕೋಳಿ ಹೀಗೆ ಈ ಮನೆತನಗಳ ಕುಟುಂಬ ವರ್ಗವೆಲ್ಲ ಮತಾಂತರ ಹೊಂದಿದುದನ್ನು ಅವರು ಇಟ್ಟುಕೊಂಡು ಬಂದಿರುವ ಅಡ್ಡ ಹೆಸರುಗಳಿಂದ ತಿಳಿಯಬಹುದು. ಇದು ಸಾಮಾನ್ಯ ಜನರು ಪರಿವರ್ತನೆಗೊಂಡ ಸ್ಥಿತಿಯಾಗಿರುವುದು. ಇನ್ನು ಸಮಾಜದಲ್ಲಿ ಗಣ್ಯರೆಂದೆನಿಸಿಕೊಳ್ಳುತ್ತಿದ್ದ ಕುಟುಂಬ ವರ್ಗದವರು, ಜಹಗೀರಿಗಳ ಆಸೆಗಾಗಿಯೋ ಇಲ್ಲವೆ ಹುದ್ದೆಗಳನ್ನು ಗಿಟ್ಟಿಸುವುದಕ್ಕಾಗಿಯೋ ಮತಾಂತರಗೊಂಡಿರುವುದುಂಟು.

ಈ ಧರ್ಮಕ್ರಾಂತಿಯಲ್ಲಿ ಕರ್ನಾಟಕ ಹಾಗೂ ಮಹಾರಾಷ್ಟ್ರಗಳಲ್ಲಿ ಸ್ಥಿರವಾಗಿ ಎದೆಗೊಟ್ಟು ನಿಂತವರೆಂದರೆ ಭಕ್ತಿ ಪಂಥದವರು. ಈ ಜನರು



"ಯಾರೋ ಹುಡುಗಿ ನಿನ್ನ ಹಲ್ಲು ಉದಿರಿಸಿ ಕೋಳು? ಆಕೆ ಇನ್ನೂ ಎರಡು ಹೆಚ್ಚಿಗೆ ಉದುರಿಸಬಾರದಿತ್ತೇ?"

ತಮ್ಮ ದೇವತೆಗಳ ಉತ್ಸವ ಹಾಗೂ ಆ ದೇವನ ದರ್ಶನಕ್ಕಾಗಿ ದಿಂಡೀಯಾತ್ರೆಯಿಂದ ಹೊರಡು ವದು, ಯಾತ್ರೆಗೆಂದು ಹೊರಟಾಗ ದಾರಿ-ಯುದ್ದಕ್ಕೂ ನಡೆಸುವ ಕೀರ್ತನೆ, ಭಜನಾದಿಗಳು ಜನಸಾಮಾನ್ಯರ ಮೇಲೆ ತಮ್ಮದೇ ಆದ ಪ್ರಭಾವವನ್ನು ಬೀರಿದವು. ಇಲ್ಲಿ ರಚಿತವಾದ ಶರಣಸಾಹಿತ್ಯ, ಸಂತಸಾಹಿತ್ಯ, ದಾಸಸಾಹಿತ್ಯ ಮೊದಲಾದ ಪ್ರಕರಣಗಳೆಲ್ಲ ಸೂಫೀಪಂಥಕ್ಕೆ ಸ್ಪರ್ಧೆಯ ಆಹ್ವಾನವನ್ನಿತ್ತವು.

ಪಂಢರಪುರ, ತುಳಜಾಪುರ, ಕೊಲ್ಲಾಪುರ, ಬಾದಾಮಿ, ಸವದತ್ತಿ, ಹುಲಗಿ, ಕೊಕಟ-ನೂರು, ಆಳಂದಿ, ದೇಹೂ, ಪೈಠಣ, ಸಜ್ಜನ ಗಡ, ಸಿರ್ಡಿ, ಅಕ್ಕಲಕೋಟ, ಗಾಣಗಾಪುರ, ತಿರುಪತಿ ಮೊದಲಾದ ಸ್ಥಳಗಳಿಗೆ ನಮ್ಮ ಜನರು ಸಾವಿರಾರು ಸಂಖ್ಯೆಯಲ್ಲಿ ಯಾತ್ರೆ ಗೆಂದು ಹೋಗಿಬರುತ್ತಿದ್ದರು. ಇದು ಹಿಂದು ಗಳ ಪದ್ಧತಿಯಾಗಿತ್ತು. ಇದೇ ರೀತಿಯಲ್ಲಿ ಮುಸಲ್ಮಾನರು ಹಾಜಿಮಲಂಗ, ಮಿರಜಿನ ಶಮಸುದ್ದೀನ, ಪುಣೆಯ ಸಲಾಹುದ್ದೀನ, ನಾಶಿಕದ ಸಾದಿಕ್‌ಶಹಾ, ಕಂದಹಾರದ ಸುಲ್ತಾನ ಸಾಂಗಡೆ, ನಾಗಪುರದ ತಾಜುದ್ದೀನ, ಗುಲ ಬುರ್ಗಾದ ಬಂದೇನವಾಜ ಮೊದಲಾದವರ ಸ್ಥಳಗಳಿಗೆ ಹೆಚ್ಚಿನ ಸಂಖ್ಯೆಯಲ್ಲಿ ಇವರು ಯಾತ್ರೆ ಹೋಗುತ್ತಿದ್ದರು. ಈ ಎಲ್ಲ ಸ್ಥಳಗಳಲ್ಲಿ ಜಾತ್ರೆ (ಉರುಸು)ಗಳಾಗುತ್ತಿದ್ದವು. ಈ ನೆಪ ದಿಂದ ಸೂಫೀಗಳು ಜನಸಾಮಾನ್ಯರನ್ನಾಕರ್ಷಿ ಸುತ್ತಿದ್ದರು.

## ಸೂಫೀಗಳ ಪತನ

ಸೂಫೀಸಾಧುಸಂತರು ಅದರಲ್ಲಿಯೂ ವಿಶೇಷ ವಾಗಿ ಚಿಸ್ತಿಪಂಥದವರು ಭಾರತದ ಸಂಸ್ಕೃತಿ ಹಾಗೂ ಇತಿಹಾಸಗಳ ಮೇಲೆ ವಿಶೇಷ ಪರಿ ಣಾಮವನ್ನುಂಟುಮಾಡಿದ್ದಾರೆ. ಅದರಲ್ಲಿಯೂ ವಿಶೇಷವಾಗಿ, ಅಜಮೀರದ ಮುಯಿನುದ್ದೀನ ಚಿಸ್ತಿ, ದಿಲ್ಲಿಯ ಕುತುಬುದ್ದೀನ, ಬಖತ್ಯಾರ ಕಾಕಿ, ನಿಜಾಮುದ್ದೀನ ಅವಲಿಯಾ, ನಸೀ ರುದ್ದೀನ ಚಿರಾಗ. (ಎಲ್ಲರೂ ದಿಲ್ಲಿಯವರು) ಇವರೇ ಮೊದಲಾದ ಮಹಾತ್ಮರ ಹೆಸರುಗಳು ಇಂದಿಗೂ ಆಬಾಲವೃದ್ಧರ ನಾಲಿಗೆಯಲ್ಲಿರು ವುದು ವಿಶೇಷದ ಸಂಗತಿ. ಈ ಮಹನೀಯರು ಗಳೆಲ್ಲ ರಾಜಕೀಯ ವಾತಾವರಣದಿಂದ ಬಲು ದೂರಿದ್ದವರು. ಅಂದಿನ ರಾಜರಿಗೂ ಈ ಮಹನೀಯರನ್ನು ಕಂಡರೆ ಹೆದರಿಕೆ ಇತ್ತು.

ಉತ್ತರದಂತೆ ದಕ್ಷಿಣದಲ್ಲಿಯೂ ಅನೇಕ ಸೂಫೀಸಂತರು ಕೆಲಸಮಾಡುತ್ತಿದ್ದರು. ಆದರೆ ದಿನಗಳೆದಂತೆಲ್ಲ ಅವರು ರಾಜಕೀಯ ವಾತಾವರ ಣಕ್ಕೆ ಬಲಿಯಾಗಬೇಕಾಯಿತು. ಆಡಳಿತಗಾರ ರಿತ್ತ ಜಹಗೀರಿಯ ಆಸೆಗೆ ಬಲಿಯಾಗಿ ತಮ್ಮ ಪತನವನ್ನೇ ಅವರು ಕಾಣುವಂತಾದರು. ಇದ ರಿಂದಾಗಿ ಅವರಂಟಿಕೊಂಡು ಬಂದಿದ್ದ ತತ್ವಕ್ಕೆ ತಿಲಾಂಜಲಿಯನ್ನೀಯಬೇಕಾಯಿತು.

ಗುಲ್ಬುರ್ಗಾದ ಖ್ವಾಜಾ ಬಂದೇನವಾಜರು ೧೩೨೧ರಲ್ಲಿ ಜನಿಸಿದರು. ಇವರು ಕಾಲ ವಾದುದು ೧೪೨೨ರಲ್ಲಿ. ಈ ಮಹನೀಯ ರನ್ನು ದಕ್ಷಿಣದ ಸರ್ವಶ್ರೇಷ್ಠ ಸಂತರೆಂದು ಗುರುತಿಸಲಾಗುವುದು. ಇವರು ಹುಟ್ಟಿದ್ದು ದಿಲ್ಲಿಯಲ್ಲಿ. ಮಹಮ್ಮದ ತಘಲಕನ ಅಪ್ಪಣೆಯ ಮೇರೆಗೆ ಬಾಲ್ಯದಲ್ಲಿ ತಂದೆಯೊಂದಿಗೆ ದೌಲತಾ ಬಾದಿಗೆ ಆಗಮಿಸಿದರು, ತಂದೆಯ ಮರಣಾ ನಂತರ ಪುನಃ ದಿಲ್ಲಿಗೆ ಮರಳಿದರು. ಅಲ್ಲಿ ಅವ ರಿಗೆ ಚಿಸ್ತಿಸಂತರೊಬ್ಬರು ಗುರುಗಳಾಗಿ ದೊರೆ ತರು. ಇವರು ಬಹುದೊಡ್ಡ ವಿದ್ವಾಂಸರಾಗಿ ದ್ದರು. ಜೀವನದಲ್ಲಿ ಸುಮಾರು ನೂರು ಗ್ರಂಥ ಗಳನ್ನು ರಚಿಸಿದರು.

ಸೂಫೀಸಾಧುಗಳಲ್ಲಿ ಅವರೊಬ್ಬ ನಿಷ್ಠಾವಂತ ಸಂತರೆಂದೆನಿಸಿಕೊಂಡಿದ್ದರು. ತೈಮೂರಲಂಗನ ದಾಳಿಯ ಸುಳಿವಿನಿಂದಾಗಿ ೧೩೯೮ರಲ್ಲಿ ದಿಲ್ಲಿ ಯನ್ನು ತ್ಯಜಿಸಿ ಅವರು ದಕ್ಷಿಣಕ್ಕೆ ಹೊರಟರು. ಬಹಮನಿರಾಜ್ಯದಲ್ಲಿ ಸಕ್ರಿಯ ಪಾತ್ರವನ್ನು ವಹಿ ಸಿದರು. ಫಿರೋಜಶಹನ ವಿರುದ್ಧವಾಗಿ ಆತನ ಸೋದರನಾಗಿದ್ದ ಅಹಮ್ಮದಶಹಾ ಪಟ್ಟಕ್ಕೆ ಬರುವಂತೆ ಮಾಡಿದರು. ಸಂತುಷ್ಟನಾದ ಬಾದ ಶಹನು ಇವರಿಗೆ ಜಹಗೀರಿಯನ್ನು ಹಾಕಿಕೊಟ್ಟ. ಬಂದೇನವಾಜರು ತಮ್ಮ ತತ್ವವನ್ನು ಬದಿ ಗಿರಿಸಿ ಅದನ್ನು ಸ್ವೀಕರಿಸಿದರು.

ಮಹಾನುಭಾವರಾದ ಬಂದೇನವಾಜರು

ಕಾಲವಾದನಂತರ ಬಹಮನಿ ಸುಲ್ತಾನರು ಅವರ ಸಮಾಧಿಯನ್ನು ಭವ್ಯವಾಗಿ ರಚಿಸುವಂತೆ ನೋಡಿಕೊಂಡರು. ಅದೇ ರೀತಿ ವಿಜಾಪುರದ ಆದಿಲ್‌ಶಾಹಿ ಮನೆತನದವರು ೧೬೪೦ರಲ್ಲಿ ಆ ಮಹನೀಯರ ದರ್ಗಾದ ಭಾಗಗಳೆಲ್ಲ ಇನ್ನಷ್ಟು ಚೆನ್ನಾಗಿ ಕಾಣುವಂತೆ ಅವುಗಳನ್ನು ವಿಸ್ತಾರಗೊಳಿಸಿದರು. ವಿಜಾಪುರದವರಂತೂ ಬಂದೇನವಾಜರ ಮನೆತನದವರನ್ನು ತಮ್ಮ ಗುರುಮನೆತನವೆಂದು ನಿಷ್ಠೆಯಿಂದ ನಡೆಯ ತೊಡಗಿದರು. ಇದರಿಂದಾಗಿ ಗುಲ್ಬುರ್ಗಾ ಮುಸಲ್ಮಾನ ಬಂಧುಗಳಿಗೆ ದಕ್ಷಿಣಕಾಶಿಯಾಗಿ ಪರಿಣಮಿಸಿತು. ವಿಜಾಪುರವನ್ನಾಳಿದ ಪ್ರತಿಯೊಬ್ಬ ಸುಲ್ತಾನರೂ ಬಂದೇನವಾಜರ ಸಮಾಧಿಗೆ ಮನ ಸೋಕ್ತ ದಾನ ಮಾಡುತ್ತಾ ಬಂದಿದ್ದಾರೆ, ಅಲ್ಲದೆ ಅಂದಿನ ಕಾಲದಲ್ಲಿ ವಿಜಾಪುರದವರಿಂದ ಹೊರಡಿಸಲಾದ (ಫರ್ಮಾನ್) ರಾಜಾಜ್ಞೆಗಳನ್ನು ಇಂದಿಗೂ ನಾವು ಹೈದರಾಬಾದಿನಲ್ಲಿರುವ ಪ್ರಾಚೀನ ಗ್ರಂಥಾಗಾರದಲ್ಲಿ ನೋಡಬಹುದು.

ಅಂದಿನ ಕಾಲದಲ್ಲಿ ಸುಪ್ರಸಿದ್ಧ ಫ್ರೆಂಚ್ ಪ್ರವಾಸಿ ಎಂದೆನಿಸಿಕೊಂಡ ಆಬೇ ಕ್ಯಾರ್ ಎಂಬಾತನು ಮದ್ರಾಸಿಗೆ ಪ್ರಯಾಣ ಮಾಡುವಾಗ ೧೬೭೨ರಲ್ಲಿ ಗುಲ್ಬುರ್ಗಾ ನಗರಕ್ಕೆ ಭೇಟಿಯಿತ್ತಿದ್ದ. ಇಲ್ಲಿ ನಡೆದ (ಉರುಸು) ಜಾತ್ರೆಯ ವಿಚಾರವನ್ನು ಆತನು ಬಹುಚೆನ್ನಾಗಿ ವಿವರಿಸಿದ್ದಾನೆ. ಅದರ ವಿವರವು ಹೀಗಿದೆ:

'ಬಂದೇನವಾಜರಿಗೆ ಅಂದಿನ ಆಳರಸರಿಂದ ಜಹಗೀರುಗಳು ಪ್ರಾಪ್ತವಾದುದರಿಂದ ಅವರ ನಂತರ ಮುಂದೆ ಬಂದ ಅವರ ಸಂತಾನರೆಲ್ಲ ಆ ಜಹಗೀರುಗಳ ಆದಾಯಗಳಿಂದಲೇ ಜೀವಿಸ ಬೇಕಾಯಿತು. ಇದರಿಂದಾಗಿ ತತ್ವ ಅಥವಾ ಸಿದ್ಧಾಂತವು ದೂರ ಸರಿಯುವಂತಾಯಿತು, ಅವರೆಲ್ಲರೂ ಸರ-ಕಾರದ ಗುಲಾಮರಂತಾದರು. ಕಳ್ಳತನ, ಚಾಡಿ-ಕೋರತನ, ವಿಷಯಲಂಪಟತನ ಮೊದಲಾದ ದುರ್ಗುಣಗಳು ಅವರಲ್ಲಿ ಕಾಣುವಂತಾದವು, ಅಂದಿನ ಸುಲ್ತಾನರು ಇವರ (ಮಠಗಳ) ಆಂತರಿಕ ಕಲಹಗಳನ್ನು ಬಿಡಿಸಬೇಕಾದ ಪ್ರಸಂಗಗಳೂ ಬರತೊಡಗಿದವು. ತಮ್ಮ ತರುವಾಯ ಈ ಪೀಠಕ್ಕೆ ಯಾರು ಬರಬೇಕೆಂಬ ವಿಚಾರದಲ್ಲಿ ಪ್ರಭುತ್ವದವರ ಮಾತೇ ಕಡೆಯಮಾತಾಗಿ ಹೋಯಿತು. ಈ ಪರಂಪರೆಯನ್ನಾರಂಭಿಸಿದವರು ಮಹಾನುಭಾವರಾಗಿದ್ದರು, ಆದರೆ ಮುಂದೆ ಆ ತಪಸ್ಸು ಕಡಿಮೆಯಾಗಿಹೋಯಿತು. ಕಾಲಾಂತರದಲ್ಲಿ ಸಮಾಧಿ ಹಾಗೂ ದರ್ಗಾಗಳಲ್ಲಿ ನಡೆಯುವ ಚಮತ್ಕಾರಿಕ ಕಥೆಗಳು ಮಾತ್ರ ಕೇಳಿ ಬರುವಂತಾಯಿತು. ಬಂದೇನವಾಜರ ಸಂತತಿಯವರಂತೂ ಅಂತರಂಗದಲ್ಲಿ ಕಲಹಾದಿಗಳೊಂದಿಗೆ ಶಿಷ್ಯ-ಶಿಷ್ಯೆಯರ ಗುಂಪುಗಳಲ್ಲಿ ದಿನಗಳೆಯಲಾರಂಭಿಸಿದರು.' ಈ ಮಾತನ್ನು ಬರೆದಿಟ್ಟವನು ಭಾರತೀಯನಾಗಿರದೆ ಫ್ರೆಂಚ್ ಪ್ರವಾಸಿಯೊಬ್ಬ ಎಂಬುದನ್ನಾರೂ ಮರೆಯಬಾರದು.

## ಸಂಭಾಜಿಯ ಸಂಹಾರದ ಸಾಕ್ಷಾತ್ಕಾರ

ಸಂಬಾಜಿ ರಾಜನನ್ನು ಕೈದು ಮಾಡಲಾಗುವುದು ಎಂಬ ವಾರ್ತೆಯು ನಾಲ್ಕೂ ದಿಕ್ಕಿನಲ್ಲಿ ಹರಡಿಕೊಂಡಿತ್ತು. ಹಾಗೆಯೇ ಈ ಮಾತು ಎಂದೂ ಕೈಗೂಡಲು ಸಾಧ್ಯವಿಲ್ಲ ಎಂದು ಜನರಾಡಿಕೊಳ್ಳುತ್ತಿದ್ದರು. ಆದರೆ ಗುಲ್ಬುರ್ಗಾದ ಬಂದೇನವಾಜರ ವಂಶದಲ್ಲಿ ಫತೇ ಮುಹಮ್ಮದ ಎಂಬುವವರೊಬ್ಬರಿದ್ದರು. ಆತ ಅನೇಕ ವರುಷಗಳವರೆಗೆ ಸೇನಾಸಿಪಾಹಿಯಾಗಿ ಕೆಲಸಮಾಡಿದ ನಂತರ ಮರಳಿ ಬಂದು ಗುಲ್ಬರ್ಗಾದಲ್ಲಿ ವಾಸ ಮಾಡುತ್ತಿದ್ದರು. ಮುಸಲ್ಮಾನ ಬಾದಶಹರಿಗೆಲ್ಲ ಹಿಂದೆ ಆಗಿಹೋದ (ಅವಲಿಯಾ) ಸಾಧುಗಳ ಬಗ್ಗೆ ವಿಶೇಷ ಆದರ, ಭಕ್ತಿ-ವಿಶ್ವಾಸಗಳಿದ್ದವು. ಆದು-ದರಿಂದ ಪರಂಪರಾಗತವಾಗಿ ಬಂದ ಅಂಥ ಮನೆತನದವರನ್ನು ಸ್ವಾಭಾವಿಕವಾಗಿಯೇ ಅವರು ಗೌರವಿಸುತ್ತಿದ್ದರು. ಸಯ್ಯದ ಫತೇ ಮುಹ-ಮ್ಮದರಿಗೆ ಸಯ್ಯದ ಯಾದುಲ್ಲ ಎಂಬ ಹೆಸರಿನ ಮಗನೊಬ್ಬನಿದ್ದ. ಈತನಿಗೆ ಬಾಲ್ಯದಿಂದಲೇ ವೈರಾಗ್ಯ ಪ್ರವೃತ್ತಿ ಬೆಳೆದುಬಂದಿತ್ತು. ಆದುದರಿಂದ ಗುಲ್ಬುರ್ಗಾದಲ್ಲಿರುವ ಚಿಕ್ಕ ದರ್ಗಾದ (ಸಜ್ಜಾದಾಸಿನೀನ) ಮಠಾಧಿಪತ್ಯವನ್ನು ಔರಂಗಜೇಬ ಬಾದಶಹನು ಈತನಿಗೆ ದಯಪಾಲಿಸಿದ್ದ. ಕೆಲವು ಗ್ರಾಮಗಳನ್ನೂ ದಾನವನ್ನಿಯಲಾಗಿತ್ತು. ಆ ಭೂಮಿಗಳಲ್ಲಿ ಯಾವುದೇ ತರಹದ

ಕರಗಳನ್ನು ವಸೂಲಿ ಮಾಡಬಾರದಾಗಿ ರಾಜಾಜ್ಞೆಯನ್ನು ಹೊರಡಿಸಲಾಗಿತ್ತು. ಒಂದುದಿನ ಇದ್ದಕ್ಕಿದ್ದಂತೆ ಫತೇ ಮುಹಮ್ಮದ ಬಾದಶಹರ ಸೇನಾ ಛಾವಣಿಯಲ್ಲಿ ಕಾಣಿಸಿಕೊಂಡರು. ಇವರಿಗೆ ಬಹು ಬೇಗನೇ ಬಾದಶಹರ ದರ್ಶನವು ಲಭಿಸಿತು. ಆಗ ಅವರು ಔರಂಗಜೇಬನ ಸಮ್ಮುಖದಲ್ಲಿ ಈ ರೀತಿ ಯಾಗಿ ನುಡಿದರು:

"ಆ ಕಾಫರನಿಗೆ (ಸಂಭಾಜಿ ರಾಜನಿಗೆ) ಕೊನೆ ಗಾಲವು ಹೇಗೆ ಪ್ರಾಪ್ತವಾಗಬಹುದು ಎಂಬು ದನ್ನು ತಿಳಿದುಕೊಳ್ಳಲು ಪ್ರತಿದಿನವೂ ಬಂದೇ ನವಾಜರ ಸನ್ನಿಧಿಯಲ್ಲಿ ನಾನು ಪ್ರಾರ್ಥನೆ ಮಾಡಿಕೊಳ್ಳುತ್ತಿದ್ದೆ. ಎಷ್ಟೋ ದಿನಗಳಾದಮೇಲೆ ಒಂದು ಸ್ವಪ್ನವನ್ನು ಕಂಡೆ. ಆ ಸ್ವಪ್ನದಲ್ಲಿ ಬಂದೇನವಾಜರು ಪರಿವಾರ ಸಮೇತರಾಗಿ ಯಾತ್ರೆಗೆ ಹೊರಟಿರುವುದನ್ನು ಕಂಡೆ. ಅವರ ಪ್ರವಾಸವು ಪರ್ವತಗಳ ಸಾಲಿನಲ್ಲಿ ಸಾಗಿತ್ತು. ನನ್ನನ್ನು ನೋಡಿದೊಡನೆ ಆ ಪೂಜ್ಯರು ನೀನೆಲ್ಲಿಗೆ ಹೊರಟಿರುವೆ ಎಂದು ಪ್ರಶ್ನೆಮಾಡಿದರು. ಆಗ ನಾನು ನನ್ನ ಮನದಿಂಗಿತವನ್ನು ಅರಿಕೆ ಮಾಡಿಕೊಂಡೆ. ಆಗ ಪೂಜ್ಯರು ಹೇಳಿದರು. 'ಅಗೋ ನೋಡು, ಈ ಗುಡ್ಡಗಾಡಿನಲ್ಲಿ ಅನೇಕ ವರ್ಷ ಗಳಿಂದ ಒಂದು ಹಂದಿಯು ಬಿಡಾರಮಾಡಿಕೊಂಡಿದೆ. ಅದನ್ನು ಹಿಡಿಯುವುದಕ್ಕಾಗಿ ನೀನು ನಮ್ಮೊಂದಿಗೆ ಇರು, ಹಾಗೂ ಅದನ್ನು ಹಿಡಿಯಲು ಪ್ರಯತ್ನಪಡು' ಎಂದು ಹೇಳಿದಂತಾಯಿತು. ಎಚ್ಚರವಾದೊಡನೆ ತಮ್ಮ ಸೇನಾ ಛಾವಣಿಯತ್ತ ಹೊರಟುಬಿಟ್ಟೆ. ಆ ಹಂದಿಯು ಸಂಹಾರವಾಗುವವರೆಗೆ ತಮ್ಮೊಂದಿಗೆ ಇದ್ದು ಯುದ್ಧನಿರತನಾಗಬೇಕೆಂದು ಸಂಕಲ್ಪ ಮಾಡಿದ್ದೇನೆ."

ಸಯ್ಯದ ಫತೇ ಮುಹಮ್ಮದರಿಂದ ಬಂದ ಈ ಸಾಕ್ಷಾತ್ಕಾರದ ಮಾತುಗಳನ್ನು ಕೇಳಿ ಔರಂಗ ಜೇಬನ ಮನಸ್ಸಿಗೆ ಬಹು ಸಮಾಧಾನವೆನಿಸಿತು, ಆತನು ಆ ಸಂತರಿಗೆ ಮಾನಸನ್ಮಾನಗಳನ್ನು ಮಾಡಿದ. ಈ ಘಟನೆಯು ನಡೆದುಹೋದ ಹತ್ತೇ ದಿನಗಳಲ್ಲಿ ಅಲ್ಲಾಹನು ಬಾದಶಹರ ಬಹುದಿನದ ಮನೋರಥವನ್ನು ಪೂರ್ಣಮಾಡಿದ. ಸಂಭಾಜಿ ಯನ್ನು ಬಂಧಿಸಲಾಗಿದೆ ಎಂಬ ವರದಿಯು (೧೬೮೯ ಫೆಬ್ರುವರಿ) ಯಾವ ದಿನ ಆತನ ಛಾವಣಿ ಯನ್ನು ತಲಪಿತ್ತೋ, ಅದೇ ದಿನ ಬಾದಶಹನು ಸಯ್ಯದ ಫತೇ ಮುಹಮ್ಮದರನ್ನು ತನ್ನ ಸಮ್ಮುಖಕ್ಕೆ ಬರಮಾಡಿಕೊಂಡ. ಅವರಲ್ಲಿ ತನ್ನ ವಿಶ್ವಾಸವನ್ನು ವ್ಯಕ್ತಪಡಿಸಿದ. ಮರಳಿಹೋಗಲು ಅವರಿಗೆ ದಾರಿಯಖರ್ಚಿಗೆಂದು ಹಣವನ್ನಿತ್ತ-ನಲ್ಲದೆ, ಬಂದೇನವಾಜ ದರ್ಗಾದಲ್ಲಿ ಕೆಲಸ ಮಾಡುವವರಿಗೂ ಹಾಗೂ ಅಲ್ಲಿ ವಾಸಿಸುತ್ತಿರುವ ಯಾಚಕರಿಗೂ ದಾನಮಾಡಲು ಹತ್ತುಸಾವಿರ ರೂಪಾಯಿಗಳನ್ನು ಅವರೊಂದಿಗೆ ಕಳುಹಿಸಿದ. ಇದು ದೈನ್ಯತೆಯ ಧರ್ಮ ಹಾಗೂ ಪ್ರಭಾವಿ ರಾಜಸತ್ತೆಯ ಒಂದು ಮಾದರಿಯಾಗಿತ್ತು. ✡



'ದಿ ಸ್ಟೇಟ್ಸ್‌ಮನ್' ಪತ್ರಿಕೆಯಲ್ಲಿ ಪ್ರಕಟವಾದ ಸುದ್ದಿ- "ಒಡಿಸಾದ ಮದ್ಯಪಾನ ನಿಷೇಧ ಶಾಖೆಯ ಸಚಿವ ಜಸಕೇತನ ಸಾಹು ಅವರು ಇಲ್ಲಿಂದ ಸುಮಾರು ೧೪೦ ಕಿಲೋ ಮೀಟರ್ ದೂರದ ಪರದೀಪ ಎಂಬಲ್ಲಿ ನಿನ್ನೆ ಮೂರುವರೆ ಕೋಟಿ ರೂಪಾಯಿ ವೆಚ್ಚದ ಸರಾಯಿ ಉತ್ಪಾದನಾ ಕಾರ್ಖಾನೆಯೊಂದನ್ನು ಉದ್ಘಾಟಿಸಿದರು."

—ಸೆಬೆಸ್ಟಿಯನ್ ಮಾರಿಸ್

# ಕ್ರಾಂತಿವೀರ ವೆಂಕಣ್ಣ ಮಾಸ್ತರರು



ಗುರುನಾಥ ಇನಾಮದಾರ

ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದವರಿಗೆಲ್ಲ ನಮ್ಮ ಸರಕಾರ ಮಾಸಾಶನ ನೀಡುತ್ತಲಿದೆ. ಆದರೆ ದೇಶಸೇವೆಗೆ ಪ್ರತಿಫಲವಾಗಿ ಮಾಸಾಶನ ಪಡೆದರೆ ಅದೊಂದು ಪಾಪವೆಂದು ಭಾವಿಸಿ ಅದನ್ನು ತಿರಸ್ಕರಿಸಿದಂತಹ ಮಹನೀಯರೂ ಅಲ್ಲಲ್ಲಿ ಕಾಣಸಿಗುತ್ತಾರೆ. ಅಂಥವರಲ್ಲಿ ಬೆಳಗಾವಿ ಜಿಲ್ಲೆಯ ವೆಂಕಣ್ಣ ಮಾಸ್ತರರೂ ಒಬ್ಬರು.

ಮೂಲತಃ ಗೋಕಾಕ ತಾಲೂಕಿನ ಯಾದವಾಡ ಗ್ರಾಮದವರಾದ ವೆಂಕಣ್ಣ ಮಾಸ್ತರರ ಪೂರ್ಣ ಹೆಸರು ವೆಂಕಟೇಶ ಕೃಷ್ಣಾಜಿ ಖಾಸನೀಸ. ಉದ್ಯೋಗ ವ್ಯವಸಾಯ. ತಾಯಿ ಗೋದೂಬಾಯಿ. ಈ ದಂಪತಿಗಳಿಗೆ ಹನ್ನೆರಡು ಜನ ಮಕ್ಕಳು. ವೆಂಕಟೇಶ ಜನಿಸಿದ್ದು ೧೯೨೧ರ ಡಿಸೆಂಬರ್ ಹತ್ತರಂದು.

ಯಾದವಾಡದ ಚೌಕಿಮಠದ ಶಾಲೆಯಲ್ಲಿ ಮುಲ್ಕಿ ವರೆಗೆ ಕಲಿತ ವೆಂಕಟೇಶನಿಗೆ, ಶಾಲೆಯ ಪಾಠಗಳಿಗಿಂತಲೂ, ಗೆಳೆಯರೊಂದಿಗೆ ಗರಡಿ ಮನೆಗೆ ಹೋಗಿ ವ್ಯಾಯಾಮ ಮಾಡುವುದು,

ಲಾರಿ ತಿರುವುವುದು, ಕತ್ತಿವರಸೆ, ಕುದುರೆ ಸವಾರಿ ಮುಂತಾದವುಗಳಲ್ಲೇ ಹೆಚ್ಚು ಆಸಕ್ತಿ. ಆದ್ದರಿಂದ ಹದಿನೈದು ವರ್ಷದವನಾಗುವಷ್ಟರಲ್ಲಿ ವೆಂಕಟೇಶ, 'ಪೈಲ್ವಾನ್ ವೆಂಕಣ್ಣ' ಎಂದು ಪ್ರಸಿದ್ಧಿ ಪಡೆದಿದ್ದ.

ಮುಲ್ಕಿ ಪರೀಕ್ಷೆಯ ನಂತರ ನಾಲ್ಕೈದು ವರ್ಷ ಈ ಗರಡಿ ಸಾಧನೆ ಇನ್ನೂ ತೀವ್ರವಾಗಿ ನಡೆಯಿತು. ಅಷ್ಟರಲ್ಲಿ ಶಿಕ್ಷಕ ವೃತ್ತಿ ದೊರೆಯಿತು. ವಿಜಾಪುರ ಜಿಲ್ಲೆಯ ಮುಧೋಳ ತಾಲೂಕಿನ ಚಿಂಚಖಂಡಿ ಮತ್ತು ಚೆನ್ನಾಳ ಗ್ರಾಮಗಳಲ್ಲಿ ಒಂದೆರಡು ವರ್ಷ ಕೆಲಸ ಮಾಡಿದರು. ನಂತರ ಆರಂಭವಾಯಿತು ಇವರ ಸ್ವಾತಂತ್ರ್ಯ ಹೋರಾಟ. ಇವರಿಗೆ ಸ್ಫೂರ್ತಿ ನೀಡಿದವರು ಗಾಂಧೀಜಿಯಾದರೂ, ಅವರ ಅಹಿಂಸಾ ತತ್ವ ವೆಂಕಣ್ಣನವರ ಮೇಲೆ ಪ್ರಭಾವ ಬೀರಲಿಲ್ಲ. ಬದಲಾಗಿ ವೆಂಕಣ್ಣ ಮಾಸ್ತರರು, ಭಗತ್‌ಸಿಂಗ, ವೀರ ಸಾವರಕರಂತೆ ಕ್ರಾಂತಿಮಾರ್ಗವನ್ನು ಅನುಸರಿಸಿದರು. ತಮ್ಮಂತೆ ದೇಶಾಭಿಮಾನಿಗಳಾಗಿದ್ದ ನೂರಾರು ಯುವಕರನ್ನು ಕಲೆ ಹಾಕಿ 'ಕ್ರಾಂತಿಕಾರಿ ದಳ' ವನ್ನು ರಚಿಸಿದರು. ಎಂ. ಎಸ್. ಮುರಗೋಡ ಎನ್ನುವವರು ಈ ದಳದ ಮುಖಂಡ. ದಳದ ಇನ್ನಿತರ ಕೆಲ ಪ್ರಮುಖರೆಂದರೆ ಸತ್ಯಪ್ಪ ಪಾಟೀಲ, ಬಸಪ್ಪ ಉಪ್ಪಾರ, ಬಸಪ್ಪ ಬೆನಕಟ್ಟಿ, ಭೀಮಶಿ, ಬಡಿಗೇರ ಸಿದ್ಧೇಶ್ವರ ಮುಂತಾದವರು.



ತಾರುಣ್ಯದಲ್ಲಿ

ಈ ಕ್ರಾಂತಿಕಾರಿ ದಳ ಮಾಡಿದ ಮೊದಲ ಕೆಲಸವೆಂದರೆ, ಜಮಖಂಡಿ, ಮುಧೋಳ, ಬಾಗಲಕೋಟೆ ಮತ್ತು ಮಹಾಲಿಂಗಪುರ ನಡುವಣ ತಂತಿ ಕಂಬಗಳನ್ನು ಕಿತ್ತೊಗೆದದ್ದು. ಇದರಿಂದ ಜಮಖಂಡಿ ಮತ್ತು ಮುಧೋಳ ಸಂಸ್ಥಾನಿಕರಿಗೆ ಬಹಳ ತೊಂದರೆಯಾಯಿತು. ಅವರು ಈ ಕ್ರಾಂತಿಕಾರಿ ದಳವನ್ನು ನಾಶಗೊಳಿಸಲು ಮದ್ದು ಗುಂಡುಗಳ ಸಮೇತ ಪೋಲೀಸ್ ಪಡೆಯನ್ನು ಕಳುಹಿಸಿದರು. ಪೋಲೀಸರನ್ನೆದುರಿಸಲು ಕ್ರಾಂತಿಕಾರಿ ದಳದವರು ಸಾವಳಗಿ ಪೋಲೀಸ್ ಠಾಣೆಗೆ ಮುತ್ತಿಗೆ ಹಾಕಿ ಮದ್ದು ಗುಂಡು, ಬಂದೂಕುಗಳನ್ನು ವಶಪಡಿಸಿಕೊಂಡು ಸನ್ನದ್ಧರಾದರು. ಮರುದಿನ ವೆಂಕಣ್ಣ ಮಾಸ್ತರರು ಹೊಲದಲ್ಲಿ ಪೂಜೆಗೆ ಕುಳಿತಿದ್ದಾಗ ಪೋಲೀಸರು ಮುತ್ತಿಗೆ ಹಾಕಿದರು. ಆದರೆ ವೆಂಕಣ್ಣ ಮಾಸ್ತರರು ತನ್ನ ಹೆಸರು ರಾಮಪ್ಪನೆಂದು ಸುಳ್ಳು ಹೇಳಿ ಪಾರಾದರು. ಅಷ್ಟರಲ್ಲಿ ಸುತ್ತಲೂ ಅಡಗಿ ಕುಳಿತಿದ್ದ ಕ್ರಾಂತಿಕಾರಿ ದಳದ ಕಾರ್ಯಕರ್ತರು ಪೋಲೀಸರ ಮೇಲೆ ಗುಂಡು ಹಾರಿಸಲಾರಂಭಿಸಿದರು. ಈ ಗುಂಡಿನ ಚಕಮಕಿ ಮೂರು ನಾಲ್ಕು ಗಂಟೆಗಳ ವರೆಗೆ ನಡೆಯಿತು. ಕೊನೆಗೆ ಪೋಲೀಸರ ಮದ್ದು ಗುಂಡುಗಳ ಸಂಗ್ರಹ ಬರಿದಾದಾಗ

ಅವರು ವಿಧಿಯಿಲ್ಲದೆ ಓಡಿಹೋಗಬೇಕಾಯಿತು.

ವೆಂಕಣ್ಣ ಮಾಸ್ತರರ ಚಾಣಾಕ್ಷತನಕ್ಕೆ ಒತ್ತು ಕೊಡುವ ಇನ್ನೊಂದು ಘಟನೆ ಈ ರೀತಿಯಿದೆ. ಕ್ರಾಂತಿಕಾರಿ ದಳದವರು ಒಮ್ಮೆ ತಮ್ಮ ನಿತ್ಯದ ಆಹಾರಕ್ಕಾಗಿ ಮೂವತ್ತು ಚಕ್ಕಡಿಗಳಲ್ಲಿ ಜೋಳ ಹೇರಿಕೊಂಡು ಬರುತ್ತಿದ್ದರು. ದಾರಿಯಲ್ಲಿ ಕಡರಕೊಪ್ಪ ಎಂಬ ಗ್ರಾಮವನ್ನು ದಾಟಿ ಬರ-ಬೇಕಿತ್ತು. ಆದರೆ ಅಲ್ಲಿಯ ಗೌಡ ದೇಶ-ದ್ರೋಹಿ. ಅವನು ಇವರನ್ನು ಪೋಲೀಸರಿಗೆ ಹಿಡಿದು ಕೊಡಲು ನಿರ್ಧರಿಸಿದ್ದ. ಆಗ ವೆಂಕಣ್ಣ ಮಾಸ್ತರರು ಒಬ್ಬರಿಗೆ ಪೋಲೀಸ್ ವೇಷ ಹಾಕಿ ಕೈಯಲ್ಲಿ ಬಂದೂಕು ಕೊಟ್ಟು ಮೊದಲ ಚಕ್ಕಡಿಯಲ್ಲಿ ಕೂಡಿಸಿದರು. ತಾವು ಹಿಂದಿನ ಚಕ್ಕಡಿಯಲ್ಲಿ ಫೌಜದಾರರ ವೇಷ ಹಾಕಿ ಠೀವಿಯಿಂದ ಕುಳಿತುಕೊಂಡರು. ಚಕ್ಕಡಿಗಳು ಕಡರಕೊಪ್ಪದ ಬಳಿ ಬಂದಾಗ ಊರಿನ ತಳವಾರ ಅವುಗಳನ್ನು ತಡೆದ. ಆಗ ವೆಂಕಣ್ಣ ಮಾಸ್ತರರು ಇಳಿದು ಬಂದು ದರ್ಪದಿಂದ "ಈ ಜೋಳವನ್ನು ಬೆಳ-ಗಾವಿ ಪೋಲೀಸ್ ಕ್ಯಾಂಪಿಗೆ ತೆಗೆದುಕೊಂಡು ಹೋಗಬೇಕಾಗಿದೆ, ನಿಮ್ಮ ಗೌಡ ಎಲ್ಲಿದ್ದಾನೆ, ಕರೆ," ಎಂದು ಗದರಿಸಿದರು. ಆ ತಳವಾರ ಹೆದರಿ ಓಡುತ್ತ ಹೋಗಿ ಗೌಡನಿಗೆ ಸುದ್ದಿ ತಿಳಿಸಿದ. ಗೌಡ ತಾನು ಊರಲಿಲ್ಲವೆಂದು ತಿಳಿಸಲು ಹೇಳಿದನಲ್ಲದೆ ವೆಂಕಣ್ಣ ಮಾಸ್ತರರ ಗುಂಪಿಗೆ ತಿಂಡಿಯ ವ್ಯವಸ್ಥೆ ಮಾಡಿ ಮುಂದಿನ ಊರಿಗೆ ಕಳಿಸಿದ.

ವೆಂಕಣ್ಣ ಮಾಸ್ತರರು ಕ್ರಾಂತಿದಳವನ್ನು ಬೇರೆ ಬೇರೆ ಗುಂಪುಗಳನ್ನಾಗಿ ವಿಂಗಡಿಸಿದ್ದರು. ಒಂದು ಗುಂಪು ಜಮಖಂಡಿಯ ಬಳಿ ಕ್ರಾಂತಿಕಾರಿ ಕೃತ್ಯ ಮಾಡಿದರೆ ಮರುದಿನ ಇನ್ನೊಂದು ಗುಂಪು ಗೋಕಾಕ ಬಳಿ ಅದೇ ರೀತಿಯ ಕಾರ್ಯ ನಡೆಸುತ್ತಿತ್ತು. ಇದು ಬ್ರಿಟಿಶರಿಗೆ ಬಹಳ ತಲೆ ನೋವನ್ನುಂಟು ಮಾಡಿತು. ವೆಂಕಣ್ಣ ಮಾಸ್ತರರನ್ನು ಹಿಡಿಯಲು ಪ್ರಯತ್ನ ಮಾಡಿ ವಿಫಲರಾದ ಬ್ರಿಟಿಶರು, ಅವರನ್ನು ಹಿಡಿದು ಕೊಟ್ಟವರಿಗೆ ಅಥವಾ ಕೊಂದು ಒಪ್ಪಿಸಿದವರಿಗೆ ಐದು ಸಾವಿರ ರೂಪಾಯಿ ಬಹುಮಾನ ಕೊಡುವುದಾಗಿ ಸಾರಿದರು. ಈ ಉಪಾಯವೂ ಫಲಿಸದಾದಾಗ ವೆಂಕಣ್ಣ ಮಾಸ್ತರರ ತಂದೆ ತಾಯಿಗಳನ್ನು ಪೀಡಿಸಲಾರಂಭಿಸಿದರು. ಆದರೆ ವೆಂಕಣ್ಣ ಮಾಸ್ತರರು ಬಗ್ಗಲಿಲ್ಲ. ಅವರ ಚಟುವಟಿಕೆಗಳು ಅವ್ಯಾಹತವಾಗಿ ಮುಂದುವರಿದವು.

ಅದೇ ಸಮಯಕ್ಕೆ ಮಹಾರಾಷ್ಟ್ರದಲ್ಲಿ ಪತ್ರಿ ಸರಕಾರ ಅಥವಾ ನಾನಾ ಪಾಟೀಲರ ಗುಂಪು ಇಂಥದೇ ಕಾರ್ಯದಲ್ಲಿ ತೊಡಗಿತ್ತು. ಅವರೊಂದಿಗೆ ಮೈತ್ರಿ ಬೆಳಸಬೇಕೆಂದು ಬಯಸಿ ವೆಂಕಣ್ಣ ಮಾಸ್ತರರು ಕಿರ್ಲೋಸ್ಕರವಾಡಿಗೆ ಹೋದರು. ಆದರೆ ಪತ್ರಿ ಸರಕಾರವನ್ನು ಹಿಡಿಯಲು ಪೋಲೀಸರು ತುಂಬಾ ಬಿಗಿಯಾದ ಕ್ರಮ ಕೈಕೊಂಡಿದ್ದರು. ವೆಂಕಣ್ಣ ಮಾಸ್ತರರಿಗೆ ಪತ್ರಿ ಸರಕಾರವನ್ನು ಭೇಟಿಯಾಗುವುದು ಅಂಥ ಸಮಯದಲ್ಲ ದುಸ್ತರವೆನಿಸಿತಲ್ಲದೆ, ಅಲ್ಲಿ ಇರುವುದು ಕ್ಷೇಮವಲ್ಲವೆನಿಸಿತು. ಅಲ್ಲಿಂದ ಮರಳುವಾಗ ಅಲ್ಲಿಯೇ ಇದ್ದ ತಮ್ಮ ತಂಗಿಯನ್ನಾದರೂ ಕಂಡು ಬರೋಣವೆಂದು ಸಾಧುವೇಷದಿಂದ ಹೋದರು. ಅಲ್ಲಿ ತಮ್ಮ ಗುರುತು ಹೇಳಿ ತಂಗಿಯ ಬಗ್ಗೆ ವಿಚಾರಿಸಿದಾಗ ಅವಳು ಸತ್ತುಹೋದಳೆಂಬ ಆಘಾತಕರ ವಿಷಯ ತಿಳಿಯಿತು. ಆದರೂ ತಮ್ಮನ್ನು ತಾವೇ ಸಮಾಧಾನಪಡಿಸಿಕೊಂಡು ಅಲ್ಲಿಂದ ಹೊರಟರು. ಅಷ್ಟರಲ್ಲೇ ಬೆಳಗಾವಿಯ ಪೋಲೀಸರಿಗೆ ವೆಂಕಣ್ಣ ಮಾಸ್ತರರು ಕಿರ್ಲೋಸ್ಕರವಾಡಿಯಲ್ಲಿರುವ ಸುದ್ದಿ ಗೊತ್ತಾಗಿ ಅಲ್ಲಿಗೆ ಹೊರಟರು. ಆದರೆ ಆಗಲೇ ಅಲ್ಲಿಂದ ಹೊರಟಿದ್ದ ವೆಂಕಣ್ಣ ಮಾಸ್ತರರು ಪುಣೆಗೆ ಹೋಗುತ್ತೇನೆ ಎಂದು ಹೇಳಿ ಅದರ ವಿರುದ್ಧ ದಿಕ್ಕಿನಲ್ಲಿದ್ದ ಕುಡಚಿಗೆ ಹೊರಟಿದ್ದರು. ಪೋಲೀಸರು ಬರುತ್ತಿದ್ದ ರೈಲು ಮತ್ತು ಇವರು ಕುಳಿತಿದ್ದ ರೈಲು ತಕಾರಿ ಸ್ಟೇಶನ್ನಿನಲ್ಲಿ ಸಂಧಿಸಿದವು. ಪೋಲೀಸರು ಮಾಸ್ತರಿಗಾಗಿ ರೇಲ್ವೆಯ ಡಬ್ಬಿಗಳನ್ನೆಲ್ಲ ಶೋಧಿಸುತ್ತ ಬಂದರು. ಆಗ ಮಾಸ್ತರರು ಯಾರೂ ಇಲ್ಲದ

ಡಬ್ಬಿಯನ್ನೇರಿ ಅದರ ಪಾಯಖಾನೆಯಲ್ಲಿ ಒಳ ಚಿಲಕ ಹಾಕಿಕೊಂಡು ಕುಳಿತರು. ಪೋಲೀಸರು ನಿರಾಶರಾಗಿ ಇಳಿದುಹೋದ ನಂತರ ರೈಲು ಸ್ಟೇಶನ್ ಬಿಟ್ಟಿತು. ಮುಂದಿನ ಸ್ಟೇಶನ್ ಬರುವ ವರೆಗೂ ವೆಂಕಣ್ಣ ಮಾಸ್ತರರು ಪಾಯಖಾನೆಯಲ್ಲಿಯೇ ಕುಳಿತಿದ್ದರು.

ಈ ರೀತಿ ಪೋಲೀಸರು ಬೆನ್ನತ್ತಿದಾಗ ಮಾಸ್ತರರು ಮತ್ತು ಅವರ ಗುಂಪಿನವರು ತಕ್ಷಣವೇ ವೇಷ ಬದಲಿಸಿಕೊಂಡು ಪೋಲೀಸರಿಗೆ ಮೋಸ ಮಾಡಿ ಪಾರಾಗುತ್ತಿದ್ದರು. ಒಮ್ಮೆ ಸಂನ್ಯಾಸಿಗಳಂತೆ ವೇಷ ಹಾಕಿಕೊಂಡು ಬಂದೂಕುಗಳಿಗೆ ಧೋತರ ಸುತ್ತಿ ತಂಬೂರಿಯಂತೆ ಹಿಡಿದುಕೊಂಡು ಭಜನೆ ಮಾಡುತ್ತ ಪೋಲೀಸ್ ಸ್ಟೇಶನ್ ಎದುರಿಗೇ ಹಾಯ್ದು ಹೋದರೆ, ಮತ್ತೊಮ್ಮೆ ಪೈಲ್ವಾನರಂತೆ ಕೊರಳಲ್ಲಿ ಕರಿ ತಾಯಿತ, ಮಲ್ ಮಲ್ ಅಂಗಿ, ಮೆಂಚೆಸ್ಟರ್ ಧೋತರ, ತಲೆಗೆ ೩೭೬ ನಂಬರಿನ ಪಟಕಾ ಸುತ್ತಿಕೊಂಡು ಭುಜ ಚಪ್ಪರಿಸಿಕೊಳ್ಳುತ್ತ ಅಡ್ಡಾಡುತ್ತಿದ್ದರಂತೆ.

ತಮ್ಮ ಹಾಗೂ ಹಿಂಬಾಲಕರ ದಿನ ನಿತ್ಯದ ಖರ್ಚಿಗಾಗಿ ಮತ್ತು ಶಸ್ತ್ರಾಸ್ತ್ರಗಳಿಗಾಗಿ ಇವರು ಬ್ರಿಟಿಶ್ ಅಧಿಕಾರಿಗಳಿಗೆ, ಸರಕಾರಕ್ಕೆ ಸಹಾಯ ಮಾಡುತ್ತ, ಸ್ವಾತಂತ್ರ್ಯ ಹೋರಾಟಗಾರರನ್ನು ದೇಶದ್ರೋಹಿಗಳೆಂದು ಹೀಗಳೆಯುತ್ತಿದ್ದ ಶ್ರೀಮಂತರನ್ನು ದೋಚುತ್ತಿದ್ದರು. ಎಷ್ಟೋ ಸಲ ಹಣವಿಲ್ಲದ್ದಾಗ ತಮ್ಮ ಮನೆಯಿಂದಲೇ ದೋಚಿ ತರಸಿಕೊಂಡದ್ದುಂಟು! ದೋಚಿಕೊಂಡು ಬಂದದ್ದರಲ್ಲೇನಾದರೂ ಉಳಿದರೆ ಅದನ್ನು ಬಡವರಿಗೆ ಹಂಚುತ್ತಿದ್ದರು. ಆದ್ದರಿಂದಲೇ ವೆಂಕಣ್ಣ ಮಾಸ್ತರರು. ಬಡವರ 'ಬಂಧು' ಎನಿಸಿದ್ದರು. ಒಂದು ಸಲ ತಮಗೆ ಊಟ ನೀಡಿದ ಮಹಿಳೆಯೊಬ್ಬಳಿಗೆ, ತಮ್ಮ ಕೊರಳಲ್ಲಿದ್ದ ಎಂಟು ತೊಲೆಯ ಚಿನ್ನದ ಗೋಪಿ ಸರವನ್ನೇ ಕೊಟ್ಟು ಬಿಟ್ಟಿದ್ದರು.

ಒಮ್ಮೆ ವೆಂಕಣ್ಣ ಮಾಸ್ತರರ ಗುಂಪಿನವರು ಮುದ್ದಾಪುರ ದೇಸಾಯರ ಮತ್ತು ಹೆಬ್ಬಾಳ ಗೌಡರ ಬಂದೂಕುಗಳನ್ನು ವಶಪಡಿಸಿಕೊಂಡು ರಬಕವಿಯ ದಕ್ಷಿಣಕ್ಕೆ ಒಂದು ಮೈಲು ದೂರದಲ್ಲಿರುವ ತೋಟದಲ್ಲಿ ಬಿಡಾರ ಹಾಕಿದ್ದಾಗ 'ನಾನೂ ಕ್ರಾಂತಿಕಾರಿ' ಎಂದು ಹೇಳಿಕೊಂಡು ಬಂದ ಒಬ್ಬ ಹೊಸಬ ಇವರನ್ನು ಸೇರಿಕೊಂಡ. ಮಾಸ್ತರರಿಗೆ ಅವನ ಮೇಲೆ ಸಂಶಯ ಬಂದಿತು. ತಮ್ಮ ಜನರಿಗೆ ಅವನನ್ನು ತಾವು ಸ್ನಾನಕ್ಕೆ ಕರೆದುಕೊಂಡು ಹೋದಾಗ ಅವನ ಡೈರಿ ಹಾಗೂ ಮತ್ತಿತರ ವಸ್ತುಗಳನ್ನು ಶೋಧಿಸಬೇಕೆಂದು ಹೇಳಿದರು. ಅದರಂತೆ ಶೋಧಿಸಲಾಗಿ ಅವನು ಸಿ.ಆಯ್.ಡಿ. ಎಂದು ಗೊತ್ತಾಯಿತು. ಅವನು ಪೋಲೀಸರಿಗೆ ಈ ಗುಂಪಿನ ಬಗ್ಗೆ ರಹಸ್ಯ ವರದಿ ಕಳಿಸುತ್ತಿದ್ದು ಮುಂದೆರಡು ದಿನಗಳಲ್ಲಿ ಪೋಲೀಸರ ನಾಲ್ಕೈದು ಗಾಡಿಗಳು ರಬಕವಿಗೆ ಬಂದು ಈ ಗುಂಪನ್ನು ಮುತ್ತಲಿವೆಯೆಂದು ತಿಳಿಯಿತು. ಇದರಿಂದ ಸಿಟ್ಟಿಗೆದ್ದ ಗುಂಪಿನ ಜನರು ಅವನು ಸ್ನಾನ ಮಾಡಿ ಬರುತ್ತಿದ್ದಂತೆಯೇ ಅವನನ್ನು ಕತ್ತಿಯಿಂದ ಹೊಡೆದು ಕೊಂದುಬಿಟ್ಟರು.

ಈ ಸುದ್ದಿ ಜಮಖಂಡಿ ಪೋಲೀಸರಿಗೆ ಗೊತ್ತಾದಾಗ ಮಂಗಳವೇಢೆ ಎಂಬ ಫೌಜದಾರ ಸಂಸ್ಥಾನಿಕರ ಸಹಾಯದಿಂದ ಇವರನ್ನು ಹಿಡಿಯಲು ಪಣ ತೊಟ್ಟ. ಆಗ ಈ ಗುಂಪು ಕುಚನೂರಿನಲ್ಲಿತ್ತು. ಅದನ್ನು ತಿಳಿಯದೇ ಅಲ್ಲಿಗೆ ಇವರ ಬಗ್ಗೆ ಸುದ್ದಿ ಸಂಗ್ರಹಿಸಲು ಬಂದ ಬಾವುರುದ್ದೀನ ಎಂಬ ಹವಾಲ್ದಾರ ಮಾಸ್ತರರ ಗುಂಪಿನ ಜನರ ಕೈಗೆ ಸಿಕ್ಕಿ ಬಿದ್ದ. ಅವನು ಅತ್ಯಂತ ದುರಾಚಾರಿ ಎಂದು ಪ್ರಸಿದ್ಧನಾಗಿದ್ದ. ಅವನ ಅತ್ಯಾಚಾರದಿಂದ ರೋಷಗೊಂಡಿದ್ದ ಈ ಗುಂಪಿನವರು ಅವನನ್ನು ಬಿಡದೆ ಕತ್ತರಿಸಿ ಹಾಕಿ, ಅವನೊಂದಿಗಿದ್ದ ಪೋಲೀಸನನ್ನು ಫೌಜದಾರನಿಗೆ ಸುದ್ದಿ ತಿಳಿಸು ಎಂದು ಓಡಿಸಿದರಂತೆ!

೧೯೪೭ರ ವರೆಗೆ ಬಹಳ ರಭಸದಿಂದ ನಡೆದ ಇವರ ಕಾರ್ಯ ೪೭ರ ಕೊನೆ ಕೊನೆಗೆ ಕುಂಠಿತವಾಯಿತು. ಇದಕ್ಕೆ ಮುಖ್ಯ ಕಾರಣ ವೆಂಕಣ್ಣ ಮಾಸ್ತರರ ಪೃಷ್ಠದ ಮೇಲೆ ತತ್ರಾಣಿ ಕುರು

ವಾಯಿತು. ಅದು ತೆಂಗಿನಕಾಯಿಯಷ್ಟು ದೊಡ್ಡದಾದಾಗ ಅವರಿಗೆ ನಡೆಯುವುದೇ ಕಷ್ಟವಾಯಿತು. ಜೊತೆಗೆ ಜ್ವರವೂ ಇತ್ತು. ಆದ್ದರಿಂದ ಚಿಕಿತ್ಸೆಗಾಗಿ ಬನ್ನಟ್ಟಿಯಲ್ಲಿದ್ದ ದೇಸಾಯಿಯೆಂಬ ಡಾಕ್ಟರರ ಬಳಿ ಹೋಗಬೇಕೆಂದು ನಿರ್ಧಾರವಾಯಿತು. ಆದರೆ ಖರ್ಚಿಗೆ ಹಣವಿರಲಿಲ್ಲ. ಆದ್ದರಿಂದ ಚೆನ್ನಾಳ ಸತ್ಯಪ್ಪ ಮತ್ತು ಬಡಗೇರ ಸಿದ್ದೇಶ್ವರ ಹಣ ತರಲು ಹಳ್ಳೂರಿಗೆ ಹೋದವರು ದುರ್ದೈವದಿಂದ ಅಕಬರ ಫೌಜದಾರನ ಕೈಯಲ್ಲಿ ಸಿಕ್ಕು ಬಿದ್ದರು. ಫೌಜದಾರನು ಅವರನ್ನು ಹಳ್ಳೂರಿನ ಮನೆಯೊಂದರಲ್ಲಿ ಕಂಬಕ್ಕೆ ಕಟ್ಟಿ, ಅಪ್ಪಾಸಾಬ ಎಂಬ ಹವಾಲ್ದಾರನನ್ನು ಬಂದೂಕ ಸಹಿತವಾಗಿ ಒಳಗೆ ಕಾವಲು ಕೂಡಿಸಿ, ತಾನು ಬಾಗಿಲು ಕೀಲಿ ಹಾಕಿ ಹೊರಗೆ ಕುಳಿತು ಮಹಾಲಿಂಗಪುರ ಪೋಲೀಸ್ ಸ್ಟೇಷನ್ನಿಗೆ ಸುದ್ದಿ ಕಳಿಸಿದನು. ಅಷ್ಟರಲ್ಲೇ ಈ ಸುದ್ದಿ ಗುಂಪಿನವರಿಗೆ ಗೊತ್ತಾಯಿತು. ಅಂದು ಶ್ರಾವಣ ಮಾಸದ ಕೊನೆಯ ಸೋಮವಾರ. ಜನರು ಗುಂಪು ಗುಂಪಾಗಿ ಭಜನೆ ಮಾಡುತ್ತಾ ಊರಲ್ಲಿಯ ದೇವಸ್ಥಾನಗಳಿಗೆ ಹೋಗುತ್ತಿದ್ದರು. ವೆಂಕಣ್ಣ ಮಾಸ್ತರರ ಗುಂಪಿನ ಜನರೂ ತಮ್ಮ ಬಂದೂಕುಗಳನ್ನು ಧೋತರದಲ್ಲಿ ಸುತ್ತಿಕೊಂಡು ತಂಬೂರಿಯಂತೆ ಹಿಡಿದು ಭಜನೆ ಮಾಡುತ್ತಾ ಸತ್ಯಪ್ಪ ಮತ್ತು ಸಿದ್ದೇಶ್ವರರನ್ನು ಕಟ್ಟಿ ಹಾಕಿದ್ದ ಮನೆಯ ಹತ್ತಿರ ಬಂದರು. ಇಷ್ಟೊಂದು ಜನ ಬಂದದ್ದು ಕಂಡು ಹೆದರಿದ ಫೌಜದಾರನು ಮನೆಯ ಮಗ್ಗುಲಲ್ಲಿದ್ದ ತಿಪ್ಪೆಯನ್ನು ಕೆದರಿ ಅಡಗಿ ಕುಳಿತನು. ಆಗ ಮಾಸ್ತರರ ಗುಂಪಿನವರು ಮನೆಯ ಮಾಳಿಗೆಯನ್ನು ಅಗೆದು ಬೆಂಕಿ ಹಚ್ಚಿದರು. ಇದರಿಂದ ಹೆದರಿದ ಅಪ್ಪಾಸಾಬ ಕಿಟಕಿಯಿಂದ ಬಂದೂಕನ್ನು ಹೊರಗೆ ಬಿಸಾಕಿ, ಬಾಗಿಲು ತೆರೆದ ನಂತರ ಸತ್ಯಪ್ಪ, ಸಿದ್ದೇಶ್ವರರನ್ನು ಬಿಡಿಸಿಕೊಂಡು ಅವರೆಲ್ಲ ಜಿಂಚಲಿಯ ಕಡೆಗೆ ಹೋದರು.

ಇತ್ತ ವೆಂಕಣ್ಣ ಮಾಸ್ತರರೊಬ್ಬರೇ ಉಳಿದಾಗ, ಅವರೂ ಬನ್ನಟ್ಟಿಗೆ ಹೋಗುವ ವಿಚಾರ ಬಿಟ್ಟು ಯರಗುದ್ರಿಗೆ ಹೊರಟರು. ಭಾರಿ ಜ್ವರ ಮತ್ತು ಕುರುವಿನ ಸತತ ಹೊಡೆತದಿಂದ ನಿತ್ರಾಣರಾಗಿದ್ದ ಮಾಸ್ತರರು ಯರಗುದ್ರಿಯ ಇನಾಮದಾರರಾಗಿದ್ದ ಕೆ. ವಿ. ದೇಶಪಾಂಡೆಯವರ ಮನೆಯನ್ನು ತಲುಪಿದ್ದು ಆಶ್ಚರ್ಯವೇ ಸರಿ. ದೇಶಪಾಂಡೆಯವರ ಪತ್ನಿ ರುಕ್ಮಿಣಿಬಾಯಿಯವರು ಮಾಸ್ತರರ ಬಗ್ಗೆ ಹೆಚ್ಚಿನ ಕಾಳಜಿ ವಹಿಸಿ ಉಪಚರಿಸಿದರು. ಮಹಾಲಿಂಗಪುರದಿಂದ ಡಾಕ್ಟರ್ ಮಲ್ಲಪ್ಪ ಮುರುಗೋಡ ಮತ್ತು ಭಾಗೋಜಿಕೊಪ್ಪದ ವೈದ್ಯರಾದ ಶ್ಯಾಮಾಚಾರ್ಯ ಜೋಶಿಯವರು ಆಗಾಗ ಬಂದು ಇವರಿಗೆ ಚಿಕಿತ್ಸೆ ನೀಡುತ್ತಿದ್ದರು. ಆದರೆ ಪೋಲೀಸರಿಗೆ ಯಾರೋ



"ದೋಸೆ ತಿಂದದ್ದಕ್ಕೆ, ಎರಡು ರೂಪಾಯಿ. ಇನ್ನೆರಡು ರೂಪಾಯಿ ದೋಸೆ ಕೊಡೋವರೆಗೂ ನನ್ನ ತಲೆ ತಿಂದಿದ್ದಕ್ಕೆ."

ಸುಳಿವು ನೀಡಿದ್ದರಿಂದ ಒಂದು ದಿನ ಏಕಾಏಕಿ ಪೋಲೀಸರು ದೇಶಪಾಂಡೆಯವರ ಮನೆಯನ್ನು ಮುತ್ತಿದರು. ತಕ್ಷಣ ರುಕ್ಮಿಣಿಬಾಯಿಯವರು ಅಡಿಗೆ ಮನೆಯಲ್ಲಿದ್ದ ಹಳೆಯ ಕಾಲಿನ ಹಗೆಯಲ್ಲಿ ವೆಂಕಣ್ಣ ಮಾಸ್ತರರನ್ನು ಕೂಡ್ರಿಸಿ ಮೇಲೆ ನೀರು ತುಂಬಿದ ಹಂಡೆಗಳನ್ನು ಸರಿಸಿದರು. ಪೋಲೀಸರು ಮನೆಯನ್ನೆಲ್ಲ ಶೋಧಿಸಿ ಮಾಸ್ತರರು ಸಿಗದ್ದಕ್ಕೆ ನಿರಾಶರಾಗಿ, ಕೆ. ವಿ. ದೇಶಪಾಂಡೆಯವರ ಸೋದರ ಶ್ಯಾಮರಾವ ದೇಶಪಾಂಡೆಯವರನ್ನು ಬಂಧಿಸಿ ಕರೆದೊಯ್ದರು.

ಜ್ವರ ಮತ್ತು ಕುರುವಿನ ನೋವು ಇನ್ನೂ ಹೆಚ್ಚಾದಾಗ ತಾವು ಬದುಕುಳಿಯುವುದಿಲ್ಲವೆಂದು ವೆಂಕಣ್ಣ ಮಾಸ್ತರರಿಗೆ ಅನ್ನಿಸಿತು. ಆದ್ದರಿಂದ ತಂದೆ ತಾಯಿಗಳನ್ನಾದರೂ ಕೊನೆ ಗಳಿಗೆಯಲ್ಲಿ ಕಾಣಬೇಕೆಂದು ಯಾದವಾಡದತ್ತ ನಡೆದರು. ಆದರೆ ಅವರ ಮನೆಯ ಸುತ್ತಲೂ ಯಾವಾಗಲೂ ಪೋಲೀಸ್ ಪಹರೆ. ಆದ್ದರಿಂದ ನೇರವಾಗಿ ಮನೆಗೆ ಹೋಗದೆ ಊರಿನ ದಕ್ಷಿಣ ಭಾಗದಲ್ಲಿದ್ದ ಪುರಾತನ ನಾರಾಯಣದೇವರ ಗರ್ಭ ಗುಡಿಯಲ್ಲಿ ಹೋಗಿ ಗದ್ದುಗೆಯ ಮೇಲೆ ಮಲಗಿ ಬಿಟ್ಟರು. ಆ ಗುಡಿಗೆ ಏಳು ಬಾಗಿಲುಗಳು. (ಇಂದು ಅದು ಹಾಳಾಗಿ ಮೂರು ಬಾಗಿಲುಗಳು ಮಾತ್ರ ಉಳಿದಿವೆ.) ಗರ್ಭ ಗುಡಿಯಲ್ಲಿ ಹಗಲಿನಲ್ಲೇ ಅಮಾವಾಸ್ಯೆಯಂಥ ಕತ್ತಲು. ಒಬ್ಬರೇ ಒಳಗೆ ಹೋಗಲು ಹೆದರಿಕೆಯಾಗುತ್ತದೆ. ಜ್ವರದ ತಾಪದಿಂದ ಅವರು ಒಂದೇ ಸವನೇ ನರಳುತ್ತಿದ್ದರು. ಮೈಮೇಲೆ ಪ್ರಜ್ಞೆಯಿರಲಿಲ್ಲ. ಆ ದೇವರ ಪೂಜೆಗೆ ಬಂದ ಅಣ್ಣಾಚಾರ್ಯ ಜೋಶಿಯವರು ಮೊದಲು ನರಳುವಿಕೆಯನ್ನು ಕೇಳಿ ಹೆದರಿದರೂ ನಂತರ ಬೆಳಕಿನ ಸಹಾಯದಿಂದ ಒಳಗೆ ಹೋಗಿ ನೋಡಿದಾಗ "ಯಂಕಣ್ಣಾ ನೀನs?" ಎಂಬ ಉದ್ಗಾರ ಅವರ ಬಾಯಿಂದ ಹೊರಬಿತ್ತು. ಅಂದು ವೆಂಕಣ್ಣ ಮಾಸ್ತರರ ಪಾಲಿಗೆ ದುರ್ದಿನ. ಅವರ ಪ್ರೀತಿಯ ತಮ್ಮ ಆನಂದ ಅಂದು ತೀರಿಕೊಂಡಿದ್ದ. ಆ ವಿಷಯವನ್ನು ಅಣ್ಣಾಚಾರ್ಯರು ಮಾಸ್ತರರಿಗೆ ತಿಳಿಸಿ, ಅವನ ಹೆಣವನ್ನು ಗುಡಿಯ ಮುಂದೆ ಹೊತ್ತೊಯ್ಯುವದನ್ನು ತೋರಿಸಿದರು. ಮೊದಲೇ ಜ್ವರ, ಕುರುಗಳಿಂದ ನರಳುತ್ತಿದ್ದ ಮಾಸ್ತರರಿಗೆ ತಮ್ಮನ ಈ ಹಠಾತ್ ನಿಧನದ ನೋವು ನುಂಗಲಾರದ ತುತ್ತಾಗಿತ್ತು. ಈಗ ಪೋಲೀಸರ ಕೈಗೆ ಸಿಕ್ಕರೂ ಚಿಂತೆಯಿಲ್ಲ, ಮನೆಗೆ ಹೋಗುತ್ತೇನೆಂದು ಹಟ ಹಿಡಿದಾಗ ಅಣ್ಣಾಚಾರ್ಯರೇ ಸಮಾಧಾನಪಡಿಸಿದರಂತೆ. ನಂತರ ಅದೇ ರಾತ್ರಿ ಅವರನ್ನು ಮುದಕವಿ ವೆಂಕಟೇಶರವರ ಮನೆಯ ಮಹಡಿಯ ಮೇಲೆ ಮಲಗಿಸಿ ಮಿತ್ರರ ಸಹಾಯದಿಂದ ಗುಪ್ತವಾಗಿ ಶುಶ್ರೂಷೆ ನಡೆಸಿದರು.

ಆದರೆ ಮಾಸ್ತರರ ಸ್ನೇಹಿತನೊಬ್ಬ ಒತ್ತಡ, ಆಸೆ, ಆಮಿಷಗಳಿಗೆ ಬಲಿಯಾಗಿ ವೆಂಕಣ್ಣಮಾಸ್ತರರು ಮಲಗಿದ್ದ ಸ್ಥಳವನ್ನು ಪೋಲೀಸ್ ಅಧಿಕಾರಿಗೆ ತೋರಿಸಿಬಿಟ್ಟ. ಅವರು ನಾಲ್ಕು ವ್ಯಾನುಗಳೊಂದಿಗೆ ಬಂದು, ಮಹಡಿಯ ಮೇಲೆ ಮಲಗಿದ್ದ ವೆಂಕಣ್ಣ ಮಾಸ್ತರರನ್ನೂ ಅವರ ಜೊತೆಗಿದ್ದವರನ್ನೂ ಬಂಧಿಸಿ ಬೆಳಗಾವಿಗೆ ಕರೆದೊಯ್ದರು.

ಆಗಿನ ಕೆಲ ಪೋಲೀಸ್ ಅಧಿಕಾರಿಗಳಲ್ಲೂ ದೇಶಾಭಿಮಾನ, ದೇಶಪ್ರೇಮ, ದೇಶಕ್ಕಾಗಿ ಹೋರಾಡುವವರ ಬಗ್ಗೆ ಅನುಕಂಪ-ಸಹಾನುಭೂತಿಗಳು ಇದ್ದವೆಂಬುದಕ್ಕೆ ಡಿ. ಐ. ಜಿ. ಖೋತ ಎನ್ನುವವರು ಉತ್ತಮ ಉದಾಹರಣೆಯಾಗಿದ್ದಾರೆ. ಅವರು ವೆಂಕಣ್ಣ ಮಾಸ್ತರರನ್ನು ತಮ್ಮ ಬಂಗ್ಲೆಗೆ ಕರೆದೊಯ್ದು ತಮ್ಮ ತಂದೆ ತಾಯಿಗಳಿಗೆ ಅವರನ್ನು ತೋರಿಸಿ, "ನೀವು ನೋಡಬೇಕೆಂದಿದ್ದ ಕ್ರಾಂತಿಕಾರಿ ವೆಂಕಣ ಮಾಸ್ತರ, ಇವನೇ ನೋಡಿರಿ" ಎಂದರಂತೆ. ಅವರ ತಾಯಿ ವೆಂಕಣ್ಣಮಾಸ್ತರರ ಮೈದಡವಿ ಕಣ್ಣೀರು ಸುರಿಸುತ್ತ, "ನನಗ ಇವನೊಬ್ಬನೇ ಮಗನಿದ್ದ. ಈಗ ನೀನೂ ನನಗೆ ಮಗನೆ," ಎಂದು ಬೆನ್ನ ಮೇಲೆ ಕೈಯಾಡಿಸಿದರಂತೆ. ನಂತರ ತಮ್ಮ

ಮನಸಿಗೆ ಇವನಿಗೆ ತೊಂದರೆ ಕೊಡಬೇಡವೆಂದು ಹೇಳಿದರಂತೆ. ಡಿ. ಐ. ಜಿ.ಯವರ ಅನುಕಂಪದ ಜೊತೆಗೆ ಆಗಿನ ಕಾಲದಲ್ಲಿ ಇವರ ಪ್ರಕರಣವನ್ನು ವಿಚಾರಿಸುತ್ತಿದ್ದ ಬಿ. ಎಂ. ಲಾಡ್ ಎಂಬ ನ್ಯಾಯಾಧೀಶರೂ ಅವರ ಬಗ್ಗೆ ಸಹಾನುಭೂತಿ ಹೊಂದಿದ್ದರು. ಆದ್ದರಿಂದ ಹಿಂಡಲಗಿ ಜೈಲಿನಲ್ಲಿ ಇವರಿದ್ದಾಗ ಹೆಚ್ಚಿನ ತೊಂದರೆಯೇನೂ ಆಗಲಿಲ್ಲ. ಮುಂದೆ ಮುಧೋಳ, ಜಮಖಂಡಿಗಳಿಂದ ವಾರಂಟುಗಳು ಬಂದಿದ್ದರಿಂದ ಇವರನ್ನು ಮುಧೋಳ ಜೈಲಿಗೆ ಕಳಿಸಲಾಯಿತು. ನಾಲ್ಕಾರು ತಿಂಗಳ ನಂತರ ದೇಶಕ್ಕೆ ಸ್ವಾತಂತ್ರ್ಯ ದೊರೆಯಿತು. ೧೯೪೭ ಅಗಸ್ಟ ೧೫ರಂದು ಜೈಲಿನಲ್ಲಿದ್ದ ಕೈದಿಗಳನ್ನೆಲ್ಲ ಬಿಡುಗಡೆಗೊಳಿಸಲು ಸರಕಾರ ಆಜ್ಞೆ ಮಾಡಿತು ಆದರೆ ಸಂಸ್ಥಾನಗಳಲ್ಲಿ ಸಂಸ್ಥಾನಿಕರ ಆಜ್ಞೆಯಿಲ್ಲದೆ ಕೈದಿಗಳನ್ನು ಬಿಡುವಂತಿದ್ದಿಲ್ಲ. ಅದ್ದರಿಂದ ಅಗಸ್ಟ ೧೫ ರಂದು ಮಾಸ್ತರರಿಗೆ ಬಿಡುಗಡೆ ದೊರೆಯಲಿಲ್ಲ. ಆಗ ಬೆಳಗಾವಿ ವಿಭಾಗದಲ್ಲಿ ಪ್ರಸಿದ್ಧ ಸಾಮಾಜಿಕ ಕಾರ್ಯಕರ್ತರಾಗಿದ್ದ ನಾ. ಸು. ಹರ್ಡೀಕರರು ಮುಧೋಳ, ಜಮಖಂಡಿ, ಸಾಂಗ್ಲಿ, ಮಿರಜ, ಜತ್ತಿ ಸಂಸ್ಥಾನಗಳ ದಿವಾನರಿಗೆ ಪತ್ರ ಬರೆದು ಸ್ವಾತಂತ್ರ್ಯ ಹೋರಾಟಗಾರರನ್ನು ಬಿಡುಗಡೆಗೊಳಿಸುವಂತೆ ಕೇಳಿಕೊಂಡರು. ಅವರ ವಿನಂತಿಯ ಮೇರೆಗೆ ವೆಂಕಣ್ಣ ಮಾಸ್ತರರನ್ನು ಬಿಡುಗಡೆ ಮಾಡಲಾಯಿತಲ್ಲದೆ ಅವರ ಮೇಲಿನ ಕೊಲೆ ಪ್ರಕರಣವನ್ನೂ ಹಿಂಪಕ್ಕೆ ತೆಗೆದುಕೊಳ್ಳಲಾಯಿತು.

ಈಗ ಅರವತ್ತೈದು ವರ್ಷಗಳನ್ನು ದಾಟುತ್ತಿರುವ ವೆಂಕಣ್ಣ ಮಾಸ್ತರರಲ್ಲಿ ಸ್ವಾಭಿಮಾನ, ದೇಶಾಭಿಮಾನ ಆರಿಲ್ಲ. ಆದರೆ ಹರಯದಲ್ಲೇ ಆಯಾಸಗೊಂಡ ಅವರ ದೇಹ ಇಂದು ಪರಿಸ್ಥಿತಿಯ ಒತ್ತಡಕ್ಕೆ ಸಿಲುಕಿ ಇನ್ನೂ ಹಣ್ಣಾಗಿದೆ. ಅದು ಈಗ ವಿಶ್ರಾಂತಿಯನ್ನು ಬಯಸುತ್ತಿದೆ. ಆದರೆ ವಿಶ್ರಾಂತಿ ಪಡೆಯಲು ಒಪ್ಪದ ಜೀವ ಅವರದು. ಅವರಿಂದ ಸಹಾಯ ಪಡೆದವರು, ಅವರ ಸ್ನೇಹ ಪಡೆದವರು ಇಂದು ನಮ್ಮ ರಾಜ್ಯದ ಆಡಳಿತ ಪಕ್ಷದಲ್ಲಿ ಮಂತ್ರಿಗಳಾದವರೂ, ಶಾಸಕರಾದವರೂ ಇದ್ದಾರೆ. ಆದರೆ ಮನೆಯಲ್ಲಿ ಮದುವೆಗೆ ಬೆಳೆದು ನಿಂತ ಮಗಳಿಗಾಗಲಿ, ಗಂಡು ಮಕ್ಕಳ ನೌಕರಿಗಾಗಲಿ ಯಾರೊಬ್ಬರ ಹತ್ತಿರವೂ ವೆಂಕಣ್ಣ ಮಾಸ್ತರರು ಚಕಾರವೆತ್ತಿದವರಲ್ಲ. ತಂದೆಯ ಕಾಲದಲ್ಲಿ ದೊಡ್ಡದಾಗಿದ್ದ ಮನೆ ಇಂದು ಬಹಳಷ್ಟು ಬಿದ್ದಿದೆ. ಕೇವಲ ಮಳೆಯನ್ನೇ ಅವಲಂಬಿಸಿದ ಹೊಲಗಳಿಂದ ಬರುವ ಉತ್ಪನ್ನದಿಂದ ವರ್ಷದವರೆಗೆ ಕುಟುಂಬವನ್ನು ನಿರ್ವಹಿಸುವದೇ ಕಷ್ಟವಾಗಿರುವಾಗ ಬಿದ್ದ ಮನೆಯನ್ನು ಕಟ್ಟಿಸುವುದೆಲ್ಲಿ?

ಆದರೆ ಪಾಪ ಅವರ ಪಾಡನ್ನು ಗಮನಿಸುವವರಾದರೂ ಯಾರು? ❁

## ಭ್ರಮೆ

ಬೆಟ್ಟ ಹತ್ತಿ, ಅತ್ತ ಇಳಿದು
ನಿಂತು ಯೋಚಿಸುತ್ತೇನೆ
ಬೆಟ್ಟದ ತುದಿ ಕಾಣುತ್ತದೆ
ಮುಂದಿನ ದಾರಿ ಸ್ಪಷ್ಟ
ಆದರೂ...
ಆಕಾಶದಲ್ಲಿ ಹಾರಲಿಲ್ಲೇಕೆ?
ಆಕಾಶ ಅಲ್ಲೇ ಇದೆ
ಪಾತಾಳ ಭಯ ಅದರ ಕೆಳಗೂ ಇದೆ
ಎಂದಾಗ
ಚಿಂತೆಗಳ ಭಾರ
ಮತ್ತೆ ಹೆಗಲಿಗೆ ಏರಿ
ತಲೆ ತಗ್ಗಿ
ಬೆಟ್ಟಕ್ಕೆ ಬೆನ್ನು ಹಾಕಿ
ಸರಸರನೆ ನಡೆಯುತ್ತೇನೆ

—ಶಾಂತು ಭದ್ರಾವತಿ



ಮೂಲ ಇಂಗ್ಲಿಷ್ : **ಜಾರ್ಜ್ ಕೆಂಟ್**
ಕನ್ನಡಕ್ಕೆ : **ಅರುಣಚಂದ್ರ ಮುಧೋಳ**

# ಲಂಡನ್ನನ್ನು ರಕ್ಷಿಸಿದಾತ

ಅಕ್ಟೋಬರ್ ೧೯೪೩ ಎರಡನೆ ಮಹಾಯುದ್ಧ ಪ್ರಾರಂಭವಾಗಿ ಐದು ವರ್ಷ ಕಳೆದಿತ್ತು. ಮೈಕೆಲ್ ಹೊಲ್ಲರ್ಡ್ ಎಂಬ ಸಲವತ್ತೈದು ವರ್ಷ ಪ್ರಾಯದ, ದೃಢಕಾಯನಾದ ಫ್ರೆಂಚ್ ಪ್ರಜೆ, ಸ್ವಿಡ್ಜರ್‌ಲ್ಯಾಂಡಿನ ಸರಹದ್ದಿನೊಳಗೆ ನುಸುಳಲು ಪ್ರಯತ್ನಿಸುತ್ತಿದ್ದ.

ಹೆಗಲ ಮೇಲೊಂದು ಆಲೂಗಡ್ಡೆಯ ಮೂಟೆ, ಕೈಯಲ್ಲಿ ಒಂದು ಕೈಗೊಡಲಿ. ನೋಡುವವರಿಗೆ ಸಾಮಾನ್ಯ ಮರ ಕಡಿಯುವವನಂತೆ ತೋರುತ್ತಿದ್ದ. ಬೆಕ್ಕಿನಂತೆ ಸರಹದ್ದಿನ ಮುಳ್ಳುತಂತಿಯ ಬೇಲಿ ನುಸುಳುತ್ತಿದ್ದಂತೆ ಬೆಳಗಿನ ಬಿಸಿಲು ಗಿಡ ಬಳ್ಳಿಗಳ ನಡುವಿನಿಂದ ತೂರಿ ಬರುತ್ತಿತ್ತು. ಒಂದು ಸಣ್ಣ ಶಬ್ದ ಕೂಡ ಅವನಿಗೆ ಮೃತ್ಯುವೆ. ಕಾಡುಮೇಡು ಗುಡ್ಡದಾಚೆಯೂ ಕೇಳುವ ಕಿವಿಗಳು ಸಾವಿರ ಜರ್ಮನ್ ಕಾವಲು ಪೋಲಿಸ್ ನಾಯಿಗಳ ಚುರುಕು ಕಿವಿಗಳು.

ಕಾರ್ಖಾನೆಯೊಂದರ ನಕ್ಷೆಗಾರನಾದ ಹೊಲ್ಲರ್ಡ್ ತನ್ನ ದೇಶಕ್ಕೆ ಸಹಾಯ ಮಾಡಲು ಬಯಸಿ, ಸ್ವಪ್ರೇರಣೆಯಿಂದ ಗೂಢಚಾರನಾಗಿದ್ದ. ಈಗಾಗಲೇ ಅವನು ಸ್ವಿಜರ್‌ಲ್ಯಾಂಡಿಗೆ ನಲವತ್ತೊಂಭತ್ತು ಬಾರಿ ಈ ರೀತಿ ಹೋಗಿಬಂದಿದ್ದ. ಪ್ರತಿ ಸಲವೂ ಬ್ರಿಟನ್ನಿಗೆ ಕಳಿಸಬೇಕಾದಂತಹ ಅತಿ ಮುಖ್ಯವಾದ ಸೇನೆಯ ವಿವರ-ಗಳನ್ನು ಕೊಂಡೊಯ್ಯುತ್ತಿದ್ದ. ಆದರೆ ಈಗ ಅವನ ಬಳಿಯಿದ್ದ ರಹಸ್ಯ

ಹಿಂದಿನದೆಲ್ಲವನ್ನೂ ಹೇಳಿದ್ದ. ಅವನು ಹೊತ್ತಿದ್ದ ಆಲೂಗಡ್ಡೆಗಳ ಮೂಟೆಯಲ್ಲಿ ಒಂದು ನೀಲಿ ಕಾಗದವಿತ್ತು. ಈ ಕಾಗದ ಎಷ್ಟು ಮಹತ್ವ-ದ್ದಾಗಿತ್ತೆಂದರೆ, ಲಂಡನ್ನನ್ನು ಸಂಪೂರ್ಣವಾಗಿ ನಾಶ ಮಾಡಲು ಹಿಟ್ಲರ್ ತಯಾರಿಸಿದ್ದ V-1 ಎಂಬ ಹಾರುವ ಬಾಂಬನ್ನು ಉಡಾ-ಯಿಸುವ ತಾಣಗಳ ವಿವರದ ನೀಲನಕ್ಷೆ ಅದು.

ಪ್ರತಿ ತಿಂಗಳಿಗೆ ೫೦೦೦ದಂತೆ ಇಂತಹ ೫೦,೦೦೦ V-1 ಬಾಂಬುಗಳನ್ನು ಲಂಡನ್ನಿನ ಮೇಲೆ ಹಾಕುವ ಉದ್ದೇಶ ಹಿಟ್ಲರನದಾಗಿತ್ತು. ಅವುಗಳನ್ನು ಉಡಾಯಿಸುವ ತಯಾರಿ ಕಾರ್ಯ-ಗಳನ್ನು ಗುಪ್ತವಾಗಿಡಲಾಗಿತ್ತು. ಫ್ರೆಂಚ್ ಭಾಷೆಯನ್ನು ಮಾತನಾಡಲೂ ಬಾರದ, ಬಲ-ವಂತದಿಂದ ಸೇನೆಗೆ ಸೇರಿಸಿಕೊಂಡಂತಹ ಡಚ್ ಹಾಗೂ ಪೋಲಿಷ್ ಕೂಲಿಕಾರರನ್ನು ಈ ಉಡಾವಣಾ ಸ್ಥಳಗಳ ನಿರ್ಮಾಣಕ್ಕೆಂದು ನೇಮಿಸಲಾಗಿತ್ತು. ಈ ನಿರ್ಮಾಣ ಕಾರ್ಯಗಳು ಈಗಾಗಲೆ ನೂರಕ್ಕಿಂತ ಹೆಚ್ಚು ಸ್ಥಳಗಳಲ್ಲಿ ಮುಕ್ತಾಯದ ಹಂತದಲ್ಲಿದ್ದವು.

ಜರ್ಮನ್ನರನ್ನು ಹೊರತುಪಡಿಸಿದರೆ, ಮೈಕೆಲ್ ಹೊಲ್ಲರ್ಡ್, ಈ ನಕ್ಷೆಯ ವಿವರ ಗಳನ್ನು ತಿಳಿದಂತಹ ಏಕೈಕ ವ್ಯಕ್ತಿ. ಅವನು ಸ್ವಿಜರ್‌ಲ್ಯಾಂಡ್ ಗಡಿಯನ್ನು ಸಮೀಪಿಸಿ ಓಡಲಾರಂಭಿಸಿದ. ಕೆಲ ಕ್ಷಣಗಳಲ್ಲೇ ಫ್ರಾನ್ಸ್ ಹಾಗೂ ಸ್ವಿಜರ್‌ಲ್ಯಾಂಡ್‌ನ್ನು ಬೇರ್ಪಡಿಸಿದ ಮುಳ್ಳುತಂತಿಯ ಬೇಲಿಯ ಹತ್ತಿರ ಬಂದು ತನ್ನ ಮೂಟೆಯನ್ನೂ ಕೊಡಲಿಯನ್ನೂ ತಂತಿಯ ಆಚೆಯ ಕಡೆಗೆಸೆದ. ಅಷ್ಟರಲ್ಲೇ ಯಾರೋ ತನ್ನ ಮಂಡಿಯನ್ನು ಬಿಗಿಯಾಗಿ ಹಿಡಿದೆಳೆದಂತಹ ಅನುಭವ!! ಒಂದು ಜರ್ಮನ್ ಪೋಲೀಸ್ ನಾಯಿ ಹೊಲ್ಲರ್ಡನನ್ನು ಗಟ್ಟಿ ಯಾಗಿ ಕಚ್ಚಿ ಹಿಡಿದಿತ್ತು. ಅವನಿಗೆ ಅಲು ಗಾಡಲೂ ಸಾಧ್ಯವಾಗುತ್ತಿರಲಿಲ್ಲ. ಆದರೆ, ನಾಯಿಯೊಡನೆ ಬಂದ ಜರ್ಮನ್ ಕಾವಲು ಗಾರರು ಹತ್ತಿರದಲ್ಲೇ ಇರುವರೆಂದೂ ಅತ ಬಲ್ಲ.

ಯಾರಾದರೂ ತಪಾಸಣೆ ನಡೆಸಿದಲ್ಲಿ ತನ್ನಲ್ಲಿ ಆಯುಧಗಳಿದ್ದರೆ ಅವರಿಗೆ ಅನುಮಾನ ಬಂದೀ ತೆಂದು ಹೊಲ್ಲರ್ಡ್ ಯಾವುದೇ ಆಯುಧ ಇಟ್ಟುಕೊಂಡಿರಲಿಲ್ಲ. ಭೀತಿಯಿಂದ ಹೊಲ್ಲರ್ಡ್ ತನ್ನ ಸುತ್ತಮುತ್ತಲೂ ನೋಡಿದ, ನಾಯಿಯ ಬಾಯಿಯನ್ನು ಬಿಗ್ಗಿಸಲು ಅನುಕೂಲವಾಗುವಂಥ ವಸ್ತು ಸಿಕ್ಕೀತೆ ಎಂದು. ಅದೃಷ್ಟವಶಾತ್ ಅಲ್ಲೇ ಒಂದು ದಪ್ಪನಾದ ಉದ್ದನೆಯ ಕೋಲು ಸಿಕ್ಕಿತು. ಆ ಕೋಲನ್ನು ನಾಯಿಯ ದವಡೆಯ ಮಧ್ಯದಲ್ಲಿ ಬಲವಾಗಿ ತೂರಿಸಿ ಅದರ ಗಂಟಲಿನೊಳಕ್ಕೆ ಜೋರಾಗಿ ತಿವಿದ. ಆಗ ನಾಯಿ ತನ್ನ ಹಿಡಿತವನ್ನು ಸಡಲಿಸಿ ಹಾಗೆಯೇ ಸತ್ತು ಬಿತ್ತು.

ಹೊಲ್ಲರ್ಡ್ ಬೇಲಿಯೊಳಗಿಂದ ನುಸುಳಿ ಕೊಂಡು ಹೋಗಿ ತನ್ನ ಮೂಟೆಯನ್ನು ಎತ್ತಿ ಕೊಂಡು ಹೆಗಲಿಗೇರಿಸಿದೊಡನೆಯೇ ಒಬ್ಬ ಸ್ವಿಸ್ ಕಾವಲುಗಾರ ಬಂದೂಕನ್ನು ತೋರಿಸುತ್ತಿದ್ದು ದನ್ನು ಕಂಡ. ಆದರೆ ಆ ಕಾವಲುಗಾರನ ಗುರಿ ಹೊಲ್ಲರ್ಡನಾಗಿರಲಿಲ್ಲ. ಹೊಲ್ಲರ್ಡನನ್ನು ಇನ್ನೇನು ಬಂದೂಕಿನಿಂದ ಹೊಡೆಯಲೆಣಿಸಿದ ಇಬ್ಬರು ಜರ್ಮನ್ ಸಿಪಾಯಿಗಳಾಗಿದ್ದರು. ಅದನ್ನು ಕಂಡ ಜರ್ಮನ್ ಕಾವಲುಗಾರರು ತಮ್ಮ ಬಂದೂಕುಗಳನ್ನು ಕೆಳಗಿಳಿಸಿ ಏನೋ ವಟಗುಟ್ಟುತ್ತ ತಮ್ಮ ಹಾದಿ ಹಿಡಿದರು.

ಮುಂದೆ ಐದೇ ವಾರಗಳಲ್ಲಿ ಮಿತ್ರ ರಾಷ್ಟ್ರ ಗಳು ೭೩ V-I ಬಾಂಬ್ ಉಡವಣಾ ತಾಣ ಗಳನ್ನು ಸಂಪೂರ್ಣವಾಗಿ ನಾಶ ಮಾಡಿದವು. ಲಂಡನ್ನನ್ನು ಸಂಪೂರ್ಣ ನಾಶ ಮಾಡುವ ಹಿಟ್ಲರನ ಯೋಜನೆಯು ನುಚ್ಚುನೂರಾಯಿತು. ನಂತರ ಅವನು ಚಿಕ್ಕ ಉಡಾವಣಾ ತಾಣ ಗಳನ್ನು ನಿರ್ಮಿಸಿ ಲಂಡನ್ನಿನ ಮೇಲೆ ಎರಡು ಸಾವಿರ V-I ಬಾಂಬುಗಳನ್ನು ಎಸೆದನಾದರೂ ಅವುಗಳ ಪರಿಣಾಮ ಗಂಭೀರವಾಗಿರಲಿಲ್ಲ.

"ಜರ್ಮನ್ನರೇನಾದರೂ ಆರು ತಿಂಗಳು

ಮುಂಚೆಯೇ ಈ ಹೊಸ ಬಾಂಬುಗಳನ್ನು ಉಪಯೋಗಿಸುವಲ್ಲಿ ಯಶಸ್ವಿಯಾಗಿದ್ದರೆ, ಯುರೋಪಿನ ಮೇಲೆ ನಮಗೆ ದಾಳಿ ಮಾಡಲು ಅಸಾಧ್ಯವೇ ಆಗುತ್ತಿತ್ತು" ಎಂದು ನಂತರ ಡ್ವೈಟ್ ಐಸನ್‌ಹಾವರ್ 'ಕ್ರುಸೇಡ್ ಇನ್ ಯುರೋಪ್' ಎಂಬ ತಮ್ಮ ಪುಸ್ತಕದಲ್ಲಿ ಬರೆದರು.

ಹೀಗೆ ಲಂಡನ್ನನ್ನು ರಕ್ಷಿಸಿದ ಮೈಕೆಲ್ ಹೊಲ್ಲಾರ್ಡ್ ಸರಳಜೀವಿ. ಮೊದಲು ಕಡಿಮೆ ಸಂಬಳದಲ್ಲಿ ಒಂದು ಸಂಶೋಧನಾ ಸಂಸ್ಥೆಯಲ್ಲಿ ದುಡಿಯುತ್ತಿದ್ದ. ಪ್ಯಾರಿಸ್ಸಿಗೆ ಜರ್ಮನ್ನರು ನುಗ್ಗಿದಾಗ ಆ ಸಂಸ್ಥೆಯವರೆಲ್ಲರೂ ಜರ್ಮನ್ನರ ಸೆರೆಯಾಳಾದರು. ಅವರ ಕೈಕೆಳಗೆ ದುಡಿಯಲು ಪ್ರಾರಂಭಿಸಿದರು. ಆದರೆ ಹೊಲ್ಲರ್ಡ್ ಇದನ್ನು ವಿರೋಧಿಸಿ ತನ್ನ ಹುದ್ದೆಗೆ ರಾಜೀನಾಮೆ ಕೊಟ್ಟ. ನಂತರ ಅವನಿಗೆ ಕಾರುಗಳಿಗೆ ಬೇಕಾಗುವಂಥ ಅನಿಲವನ್ನು ಉತ್ಪಾದಿಸುವ ಇದ್ದಿಲು ಕಾರ್ಖಾನೆಯಲ್ಲಿ ಏಜೆಂಟನ ಕೆಲಸ ದೊರೆಯಿತು.

ಮುಂದೆ ಒಂದು ದಿನ ಬ್ರಿಟಿಶರಿಗೆ ತನ್ನ ಗೂಢಚರ್ಯೆಯ ಸೇವೆಯನ್ನು ನೀಡಬೇಕೆಂದು ಹೊಲ್ಲರ್ಡ್ ಆಲೋಚಿಸಿದ. ವಿಶಿಷ್ಟ ರೀತಿಯಲ್ಲಿ ಕಾವಲಿರಿಸಿದ ಗಡಿಯನ್ನು ದಾಟಿ ನುಸುಳಿ ಹೋಗಲು ಪ್ರಯತ್ನಿಸಿ ಜರ್ಮನರ ಕೈಗೆ ಸಿಕ್ಕು-ಬಿದ್ದ. ಆದರೆ ತನ್ನ ಮಾತಿನ ಚಾಣಾಕ್ಷತೆಯಿಂದ ತಪ್ಪಿಸಿಕೊಂಡು ಬಂದ. ಎರಡನೆ ಬಾರಿಗೆ ಗಡಿ ದಾಟಲು ಪ್ರಯತ್ನಿಸಿದಾಗ ಯಶಸ್ವಿಯಾದ. ಬ್ರಿಟಿಶರು, ಜರ್ಮನ್ ಸೇನೆಯ ಪಡೆಗಳನ್ನು ಗುರುತಿಸಿ ಅವುಗಳ ಚಲನವಲನಗಳನ್ನು ತಮಗೆ ತಿಳಿಸಲು ಹೇಳಿದರು. ಮೂರು ವರ್ಷಗಳ ಕಾಲ ಹೊಲ್ಲರ್ಡ್ ಈ ಕಾರ್ಯವನ್ನು ಎಡೆಬಿಡದೆ



ಮಾಡಿದ. ತಿಂಗಳುಗಳು ಕಳೆದಂತೆಲ್ಲಾ ತನ್ನ ಸಹಾಯಕ್ಕೆಂದು ಎಷ್ಟೋ ಜನ ಫ್ರೆಂಚರನ್ನು ನೇಮಿಸಿಕೊಂಡ. ಅವರಲ್ಲಿ ರೇಲ್ವೆ ಕಾರ್ಮಿಕರು, ಲಾರಿ ಚಾಲಕರು, ಸರಾಯಿ ಅಂಗಡಿಯ ಮಾಲಿಕರು, ಮುಂತಾದವರೇ ಹೆಚ್ಚಾಗಿದ್ದರು.

ಪ್ರಾರಂಭದಲ್ಲಿ ಐದು ಜನರಿದ್ದ 'ರಾಸುಗಿ' ಎಂಬ ಅವನ ಗುಪ್ತಚಾರ ಸಂಸ್ಥೆ ಕೊನೆಗಾಲದಲ್ಲಿ ೧೨೦ ಜನರಿರುವಷ್ಟು ಬೆಳೆಯಿತು. ಆದರೆ ಅವರಲ್ಲಿ ಇಪ್ಪತ್ತು ಜನ ಜರ್ಮನ್ ಸೈನಿಕರ ಕೈಗೆ ಸಿಕ್ಕು ಮರಣಹೊಂದಿದರು.

ಹೊಲ್ಲರ್ಡನಿಗೆ ಹೆಂಡತಿ ಹಾಗೂ ಮೂವರು ಮಕ್ಕಳಿದ್ದರು. ಅವನು ಅವರನ್ನು ಬಹಳ ಪ್ರೀತಿಸುತ್ತಿದ್ದ. ಆದರೆ ತನ್ನ ಗೂಢಚರ್ಯೆಯ ಕಾರ್ಯದಿಂದ ಅವರಿಗೇನಾದರೂ ತೊಂದರೆಯುಂಟಾಗಬಹುದೆಂದು ಯೋಚಿಸಿ ಅವರಿಂದ ದೂರವಿರಲು ಯತ್ನಿಸುತ್ತಿದ್ದ.

ಹೊಲ್ಲರ್ಡನ ಮುಖ್ಯ ಸಾಧನೆಯಾದ V–I ಬಾಂಬುಗಳ ಉಡಾವಣಾ ಸ್ಥಳಗಳ ನಕ್ಷೆಯನ್ನು ಪತ್ತೆಹಚ್ಚುವ ಕಾರ್ಯ ರುಯೇ ಎಂಬ ಗ್ರಾಮದ ಚಿಕ್ಕ ಉಪಹಾರಗೃಹವೊಂದರಲ್ಲಿ ಆಗಸ್ಟ್ ೧೯೪೩ ರಲ್ಲಿ ಪ್ರಾರಂಭವಾಯಿತು. ಆ ಗ್ರಾಮದಲ್ಲಿದ್ದ ಹೊಲ್ಲರ್ಡನ ಸಹಾಯಕನೊಬ್ಬ ತಾನು, ಇಬ್ಬರು ಗುತ್ತಿಗೆದಾರರು ಒಂದು ವಿಶೇಷ ರೀತಿಯ ಕಟ್ಟಡಗಳ ವಿಚಾರದ ಬಗ್ಗೆ ಮಾತನಾಡುತ್ತಿದ್ದುದನ್ನು ಕೇಳಿಸಿಕೊಂಡಿದ್ದು, ಜರ್ಮನ್ನರು ಅವುಗಳನ್ನು ಕಟ್ಟುತ್ತಿರುವುದಾಗಿ ಹೇಳಿದ.

ಮರುದಿನ ಹೊಲ್ಲರ್ಡ್ ರುಯೇಗೆ ಹೋದ. ಕರಿಯ ಬಟ್ಟೆ ಧರಿಸಿ, ಕೈಗಳಲ್ಲಿ ಬೈಬಲ್ಲಿನ ಪ್ರತಿಗಳನ್ನು ಹಿಡಿದುಕೊಂಡು, ಆಳುಗಳಿಗೆ ಕೆಲಸ ಒದಗಿಸುತ್ತಿದ್ದ ಕಚೇರಿಗೆ ಹೋಗಿ, ತಾನೊಬ್ಬ ಪ್ರೊಟೆಸ್ಟೆಂಟ್ ಪ್ರತಿನಿಧಿಯಾಗಿದ್ದು, ಕೆಲಸದಾಳುಗಳ ಆಧ್ಯಾತ್ಮಿಕ ಒಳಿತನ್ನು ಹೆಚ್ಚಿಸಲು ಬಂದಿರುವುದಾಗಿ ಹೇಳಿ ಸಮೀಪದಲ್ಲೇ ಯಾವುದಾದರೂ ಕಟ್ಟಡ ಕಾರ್ಯ ನಡೆಯುತ್ತಿದೆಯೇ ಎಂದು ಕೇಳಿದ. ಅಲ್ಲಿಂದ ೨೦ ಮೈಲಿಗಳಷ್ಟು ದೂರದ ಓಫ್ಫೆ ಎಂಬ ಗ್ರಾಮದ ಬಳಿ ಕಟ್ಟಡ ಕಾರ್ಯ ನಡೆಯುತ್ತಿದೆಯೆಂದು ಅವನಿಗೆ ತಿಳಿಯಿತು.

ಒಂದು ಗಂಟೆಯ ನಂತರ, ಹೊಲ್ಲರ್ಡ್ ಓಫ್ಫೆಯಲ್ಲಿದ್ದ. ಕೆಲಸದಾಳುಗಳ (ನೀಲಿ ಬಟ್ಟೆಯ) ವೇಷ ಧರಿಸಿ ಒಂದು ನೂಕು ಬಂಡಿಯನ್ನು ತೆಗೆದುಕೊಂಡ. ಇಟ್ಟಿಗೆಗಳನ್ನು ಅದರಲ್ಲಿ ತುಂಬಿ, ತಾನೂ ಕೆಲಸಕ್ಕೆ ಇಳಿದ. ಯಾರೂ ಅವನನ್ನು ತಡೆಯಲಿಲ್ಲ. ಬಹುಪಾಲು ಕಾರ್ಮಿಕರಿಗೆ ಫ್ರೆಂಚ್ ಮಾತನಾಡಲು ಬರುತ್ತಿರಲಿಲ್ಲ. ಫ್ರೆಂಚ್ ಬರುವ ಕೆಲವರು ತಾವು ಮೋಟಾರು ಗ್ಯಾರೇಜುಗಳನ್ನು ಕಟ್ಟುತ್ತಿರುವುದಾಗಿ ಹೇಳಿದರು.

ಅಲ್ಲಿ ಹೊಲ್ಲರ್ಡನನ್ನು ಮುಖ್ಯವಾಗಿ ಆಕರ್ಷಿಸಿದ್ದು ವಿಮಾನ ನಿಲ್ದಾಣದಲ್ಲಿರುವಂಥ ಐವತ್ತು ಗಜ ಉದ್ದದ ಒಂದು ಜಲ್ಲಿ ಗಾರೆಯ ಪಟ್ಟಿ. ತನ್ನಲ್ಲಿದ್ದ ದಿಕ್ಸೂಚಿಯನ್ನು ತೆಗೆದು ಗಮನಿಸಿದ. ಅದು ನೇರ ಲಂಡನ್ನಿನ ದಿಕ್ಕಿಗೆ ಚಾಚಿತ್ತು. ಅವನು ಸಾಕಷ್ಟು ವಿಷಯಗಳನ್ನು ತಿಳಿದುಕೊಂಡು, ಬ್ರಿಟಿಶರಿಗೆ ಎಲ್ಲವನ್ನೂ ಹೇಳಬೇಕೆಂದು ಅಲ್ಲಿಂದ ಹೊರಟ.

ಆ ವೇಳೆಗಾಗಲೇ ಜರ್ಮನ್ನರ ವಿಚಿತ್ರ ಕಟ್ಟಡ ನಿರ್ಮಾಣದ ಸುಳಿವು ಮಿತ್ರರಾಷ್ಟ್ರಗಳಿಗೆ ಸಿಕ್ಕಿತ್ತು. ಪೀನ್‌ಮೂಂಡ್ ಎಂಬ ಸ್ಥಳದಿಂದ ವಿಚಿತ್ರ ರೀತಿಯ 'ಚಾಲಕರಿಲ್ಲದ ವಿಮಾನ'ಗಳ ನಿರ್ಮಾಣದ ಬಗ್ಗೆ ಸೂಚನೆಗಳು ಬಂದಿದ್ದವು. ಬಾಲ್ಟಿಕ್ ಸಾಗರದ ಬಾರ್ನ್‌ಹೋಮ್ ಎಂಬ ದ್ವೀಪದ ತೀರದಲ್ಲಿ ಆಕಾಶದಿಂದ ಹಾರಿ ಬಂದು ಬಿದ್ದಂತಹ ವಿಚಿತ್ರವಾದ ಆಯುಧದ ತುಣುಕೊಂದು ಒಬ್ಬ ಡಚ್ಚನಿಗೆ ದೊರೆತಿತ್ತು. ಹೀಗೆ ಬಾಂಬ್ ದಾಳಿಯೊಂದರ ಸನ್ನಾಹಗಳು ಕಂಡುಬಂದಿದ್ದರೂ, ಅದರ ಪ್ರಮಾಣ ಎಷ್ಟು, ದಾಳಿ ಯಾವಾಗ ಆದೀತೆಂಬುದರ ಅರಿವು ಯಾರಿಗೂ ಇರಲಿಲ್ಲ. ಆದ್ದರಿಂದ ಅವರು ಇನ್ನೂ ಹೆಚ್ಚಿನ ವಿವರ ಸಂಗ್ರಹಿಸುವಂತೆ ಹೊಲ್ಲರ್ಡನಿಗೆ ತಿಳಿಸಿದರು. ಆಗ ಹೊಲ್ಲರ್ಡ್ ಹಾಗೂ ಅವನ ನಾಲ್ಕು ಜನ

ಸಹಾಯಕರು ಸೈಕಲ್ ಮೇಲೆ ಉತ್ತರ ಫ್ರಾನ್ಸಿನ ಪ್ರವಾಸ ಆರಂಭಿಸಿದರು. ವಿವಿಧ ಪ್ರದೇಶಗಳಲ್ಲೆಲ್ಲ ಓಡಾಡಿ ಅಲ್ಲಿಯ ಜನರೊಡನೆ ಮಾತನಾಡಿ ವಿಷಯಗಳನ್ನು ತಿಳಿದುಕೊಳ್ಳುತ್ತ ಮೂರು ವಾರಗಳಲ್ಲಿ ಅರವತ್ತಕ್ಕೂ ಹೆಚ್ಚು ಉಡಾವಣಾ ತಾಣಗಳನ್ನು ಗುರುತಿಸಿದರು. ಮುಂದಿನ ಕೆಲವು ವಾರಗಳಲ್ಲಿ ಇಂತಹದೇ ಇನ್ನೂ ನೂರವತ್ತು ಸ್ಥಳಗಳನ್ನು ಪತ್ತೆಹಚ್ಚಲಾಯಿತು. ಎಲ್ಲವೂ ಕಡಲ ದಂಡೆಗೆ ಸಮಾನಾಂತರವಾಗಿ ೨೦೦ ಮೈಲಿ ಉದ್ದ ಹಾಗೂ ೩೦ ಮೈಲಿ ಅಗಲ ಪ್ರದೇಶದಲ್ಲಿದ್ದು, ಅವೆಲ್ಲ ಲಂಡನ್ನಿಗೆ ಅಭಿಮುಖವಾಗಿದ್ದವು.

ನಂತರ ಪ್ಯಾರಿಸ್ಸಿನಲ್ಲಿ ಹೊಲ್ಲರ್ಡ್ ತಾನು ಮತ್ತು ತನ್ನ ಸಂಸ್ಥೆಯ ಸದಸ್ಯರು ಶೇಖರಿಸಿದ್ದ ನಕ್ಷೆ, ಟಿಪ್ಪಣಿಗಳ ಮೂಲಕ ಉಡಾವಣಾ ತಾಣಗಳ ಸಂಪೂರ್ಣ ಮತ್ತು ವ್ಯಾಪಕವಾದ ನಕ್ಷೆಯನ್ನು ತಯಾರಿಸಿ ಬ್ರಿಟಿಷರಿಗೆ ತಲಪಿಸಿದ.

ಇದಾದ ಕೆಲ ತಿಂಗಳುಗಳ ನಂತರ ಜರ್ಮನ್-ರಿಗೆ ಹೊಲ್ಲರ್ಡನ ಚಟುವಟಿಕೆಗಳ ಸುಳಿವು ಸಿಕ್ಕು ಅವನನ್ನು ಬಂಧಿಸಿದರು. ಅವನಿಗೆ ಅತೀವ ಚಿತ್ರಹಿಂಸೆ ಕೊಡಲಾಯಿತು. ಆದರೂ ಜರ್ಮನರಿಗೆ ಯಾವ ವಿಷಯವನ್ನೂ ಆತ ಬಿಟ್ಟುಕೊಡಲಿಲ್ಲ. ಅವನ ವಿರುದ್ಧ ಸಾಬೀತುಪಡಿಸಲು ಯಾವುದೇ ಬಲವಾದ ಆಧಾರ ದೊರೆಯದಿದ್ದುದರಿಂದ ಅವನನ್ನು ಕೊಲ್ಲದೆ, ಯುದ್ಧ ಕೈದಿಗಳ ಶಿಬಿರಕ್ಕೆ ಕಳಿಸಲಾಯಿತು.

ಯುದ್ಧವು ಕೊನೆಗೊಳ್ಳುತ್ತಿದ್ದಂತೆಯೆ ಜರ್ಮನರು ಇಂಥ ಶಿಬಿರಗಳನ್ನು ಖಾಲಿ ಮಾಡುತ್ತ ಹೊರಟರು. ಎಲ್ಲರನ್ನೂ ಜರ್ಮನ್ ನೌಕೆಗಳಲ್ಲಿ ತುಂಬಿ ಕಡಲಲ್ಲಿ ತೇಲಿಬಿಡುತ್ತಿದ್ದರು. ಮಿತ್ರ ರಾಷ್ಟ್ರಗಳ ಸೇನೆ ಈ ನೌಕೆಗಳಲ್ಲಿ ಜರ್ಮನ್ ಸೈನಿಕರಿದ್ದಾರೆಂದು ಭಾವಿಸಿ ಅವುಗಳನ್ನು ನಾಶ ಮಾಡುತ್ತಾರೆಂಬುದು ಜರ್ಮನ್‌ರಿಗೆ ಗೊತ್ತಿತ್ತು. ಹೀಗೆ ನೂರಾರು ಜನರೊಡನೆ ಹೊಲ್ಲರ್ಡ್‌ನನ್ನು ಕಟ್ಟಿ ಹಾಕಲಾಗಿತ್ತು. ಆದರೆ ಕೊನೆಯ ಕ್ಷಣದಲ್ಲಿ ಅದೃಷ್ಟವಶಾತ್ ಅವನನ್ನು ಇಂಥ ಒಂದು ನೌಕೆಯಲ್ಲಿ ಹಾಕುವುದರ ಬದಲು ಸ್ವೀಡಿಶ್ ರೆಡ್ ಕ್ರಾಸ್ ನೌಕೆಯೊಂದರಲ್ಲಿ ನೂಕಿದರು.

ಹೊಲ್ಲರ್ಡನಿಗೆ ಚೇತರಿಸಿಕೊಳ್ಳಲು ಸುಮಾರು ಆರು ವಾರಗಳು ಬೇಕಾದವು. ಅವನನ್ನು ಲಂಡನ್ನಿಗೆ ಕರೆದುಕೊಂಡು ಹೋಗಲು ಆರ್. ಎ. ಎಫ್.ನವರು ಒಂದು ವಿಮಾನವನ್ನು ಕಳಿಸಿಕೊಟ್ಟರು. ಲಂಡನ್ನಿನಲ್ಲಿ ಬ್ರಿಟಿಶ್ ಸರಕಾರ ವಿದೇಶಿಯನೊಬ್ಬನ ವಿಶಿಷ್ಟ ಸೇವೆಗೆಂದು ಮೀಸಲಾದ ಪುರಸ್ಕಾರವನ್ನು ಅವನಿಗೆ ಕೊಡುವುದಿತ್ತು. ಆದರೆ ಅಷ್ಟರಲ್ಲಾಗಲೇ ಹೊಲ್ಲರ್ಡ್ ತನ್ನ ಊರಿಗೆ ವಾಪಸಾಗಿದ್ದ. ಅನಂತರ ಅವನನ್ನು ಪ್ಯಾರಿಸಿನಲ್ಲಿ ಸನ್ಮಾನಿಸಲಾಯಿತು.

ಸರ್ ಬ್ರಿಯಾನ್ ಹಾರಕ್ಸ್ ನುಡಿದಂತೆ, "ಆ ದೊಡ್ಡ ಪುರಸ್ಕಾರಕ್ಕೆ ಹೊಲ್ಲರ್ಡನ ಅರ್ಹತೆಯನ್ನು ಯಾರೂ ಶಂಕಿಸುವಂತಿಲ್ಲ. ಅವನೇ ಅಲ್ಲವೇ ನಿಜವಾಗಿಯೂ ಲಂಡನ್ನನ್ನು ರಕ್ಷಿಸಿದ್ದು!" ❁



ನೆರೆಮನೆಯಲ್ಲಿ ಎದ್ದಿರುವ ಕಿಚ್ಚನ್ನು ಅಲ್ಲಿಯೇ ಕೆಡಿಸದಿದ್ದರೆ ಅದು ತನ್ನ ಮನೆಯನ್ನೂ ಹೇಗೆ ಸುಡುವುದೋ ಹಾಗೆಯೇ ಸಾಮಂತರು ಪ್ರಬಲರಾಗಿರುವಲ್ಲಿ ಅವರನ್ನು ನಿಗ್ರಹಿಸದಿದ್ದರೆ ನಮ್ಮ ದೇಶಗಳನ್ನು ಒತ್ತಿಕೊಳ್ಳದೇ ಇರುವರೆ?

–ಕೆಂಪುನಾರಾಯಣನ 'ಮುದ್ರಾಮಂಜೂಷ'ದಿಂದ

# ಜನಮನ ಜೀವನ ಜನ ಜೀವನ

ಶಿಕ್ಷಕ ತರಬೇತಿ ಮುಗಿದಮೇಲೆ ನಾನು ಕೆಲಸಕ್ಕಾಗಿ ಪ್ರಯತ್ನಿಸುತ್ತಿದ್ದೆ. ಅದರ ನಡುವೆ ನನ್ನ ಸ್ನೇಹಿತರ ಸಹಾಯದಿಂದ ಒಂದು ಟ್ಯುಟೋರಿಯಲ್‌ನಲ್ಲಿ ಪಾಠ ಹೇಳುವ ಕೆಲಸವನ್ನು ಗಿಟ್ಟಿಸಿಕೊಂಡಿದ್ದೆ. ಮೊದಲನೇ ದಿನ ಅಲ್ಲಿಯ ಪ್ರಿನ್ಸಿಪಾಲರು "ನೀವು ತರಗತಿಗೆ ಹೋಗಿರಿ. ನಾನು ಈಗ ಬಂದು ನಿಮ್ಮ ಪರಿಚಯ ಮಾಡಿಕೊಡುತ್ತೇನೆ" ಎಂದರು. ನಾನು ಕ್ಲಾಸ್‌ರೂಮ್‌ಗೆ ಹೋದೆ. ಒಬ್ಬ ವಿದ್ಯಾರ್ಥಿ ಕೇಳಿದ: "ನೀವು ಹೊಸಬರಾ?" ಇನ್ನೊಬ್ಬ: "ಎಷ್ಟು ಪಾರ್ಟು ಇದೆ?" ನನಗೆ ತಕ್ಷಣ ಏನೂ ಹೊಳೆಯಲಿಲ್ಲ. ನನಗೆ ಅವಕಾಶವನ್ನೇ ಕೊಡದೆ ಅವರೇ ಮಾತಾಡಿಕೊಳ್ಳತೊಡಗಿದರು. "ಅಷ್ಟೂ ಹೋಗಿದಾವೆ ಕಣೋ, ಅದ್ಕೇ ಅವರು ಏನೂ ಮಾತಾಡ್ತಾ ಇಲ್ಲ." ಅಂತ ಒಬ್ಬ ಅಂದ. "ಪಾಪ ಎಷ್ಟನೇ ಅಟೆಮ್ಟೋ (ಪ್ರಯತ್ನ) ಏನೋ?" ಇನ್ನೊಬ್ಬ ಕರುಣೆ ತೋರಿದ. ನನಗೆ ಅವರ ಮಾತಿನ ಅರ್ಥವಾಯಿತಾದರೂ, ಆ ಸಂದರ್ಭದಲ್ಲಿ ನಾನು ಏನು ಹೇಳುವುದೂ ಸರಿಯಲ್ಲವೆಂದು ಪ್ರಿನ್ಸಿಪಾಲರು ಬರುವುದನ್ನು ಎದುರು ನೋಡುತ್ತಿದ್ದೆ.

ಪ್ರಿನ್ಸಿಪಾಲರು ಬಂದವರೇ ನನ್ನನ್ನು ವೇದಿಕೆಯ ಮೇಲೆ ಕರೆದು, "ಇವರು ರಾಮಸುಬ್ರಾಯ ಶೇಟ್; ಇವರು ನಿಮಗೆ ಇಂದಿನಿಂದ ಸೋಶಿಯಲ್ ಪಾಠ ಮಾಡ್ತಾರೆ." ಅಂತ ನನ್ನ ಪರಿಚಯಿಸಿದರು. ವಿದ್ಯಾರ್ಥಿಗಳಿಗೆ ಆಶ್ಚರ್ಯ, ಜೊತೆಗೆ ತಪ್ಪು ಮಾಡಿದವರ ಮನೋಭಾವನೆ. ಮುಖ ತಗ್ಗಿಸಿದರು. ಗುಸುಗುಸು ಮಾತಾಡಿದರು. ಪ್ರಿನ್ಸಿಪಾಲರಿಗೆ ಆಶ್ಚರ್ಯ. ಪಾಠ ಮುಗಿದ ಮೇಲೆ "ಎಕ್ಸ್‌ಕ್ಯೂಸ್ ಸರ್" ಎಂದರು. "ಪರವಾಯಿಲ್ಲ" ಎಂದೆ. ನನ್ನ ಪರಿಚಯವಿಲ್ಲದುದು ಹಾಗೂ ನಾನು ಅವರಿಗಿಂತ ಸಣ್ಣ ಹುಡುಗನಂತೆ ಕಾಣುತ್ತಿದ್ದುದು ಇದಕ್ಕೆ ಕಾರಣವಾಗಿರಬೇಕು.

—ರಾಮಸುಬ್ರಾಯ ಶೇಟ್

ನಾನಾಗ ಎಂ. ಎಸ್‌ಸಿ. ಮುಗಿಸಿ ಕೆಲಸ ಹುಡುಕುತ್ತಿದ್ದೆ. ಎಲ್ಲೂ ನೌಕರಿ ಸಿಗದೆಯೇ ನಿರಾಶಳಾಗಿದ್ದ ಸಂದರ್ಭದಲ್ಲಿ ನನಗೆ ಪೂಜ್ಯ ನರಸಿಂಹಾಚಾರ್ಯರ ಪರಿಚಯವಾಯಿತು. ಅವರಲ್ಲಿ ಸಂಸ್ಕೃತದ ಅಭ್ಯಾಸಕ್ಕೆ ತೊಡಗಿದೆ. ಅವರ ಪ್ರೀತಿ-ವಾತ್ಸಲ್ಯ, ಹಿತವಾದಗಳು ನಾನು ಹೆಚ್ಚು ಆಸಕ್ತಿಯಿಂದ ಸಂಸ್ಕೃತಾಧ್ಯಯನಕ್ಕೆ ತೊಡಗಲು ಕಾರಣವಾದುವು.

ಮುಂದೆ ಕೆಲ ದಿನಗಳಲ್ಲಿಯೇ ನನಗೊಂದು ಕೆಲಸವೂ ದೊರೆಯಿತು. ಜೊತೆಗೆ ಸಂಸ್ಕೃತ ಪರೀಕ್ಷೆಯಲ್ಲಿ ಪ್ರಥಮ ದರ್ಜೆಯೂ ಬಂತು. ಇದೆಲ್ಲ ಆ ಹಿರಿಯರ ಅಂತಃಕರಣದ ಫಲ ಎಂದು ನನ್ನ ನಂಬಿಕೆ. ಅವರಿಗೆ ಕೃತಜ್ಞತೆಯನ್ನರ್ಪಿಸಲೆಂದು ನಾನು ತಟ್ಟೆಯೊಂದರಲ್ಲಿ ಹಣ್ಣು, ತಾಂಬೂಲಗಳೊಂದಿಗೆ ಗುರುದಕ್ಷಿಣೆಯನ್ನೂ ಇಟ್ಟುಕೊಂಡು ಅವರ ಮನೆಗೆ ಹೋದೆ.

ಆದರೆ ಆಚಾರ್ಯರು ಅದನ್ನು ಪಡೆಯಲೊಪ್ಪಲಿಲ್ಲ. "ನಾನೇನೂ ನಿನಗೆ ಅಂಥ ಉಪಕಾರ ಮಾಡಿಲ್ಲವಮ್ಮ. ನೀನೇ ನನಗೆ ಉಪಕರಿಸಿದ್ದೀಯಾ. ಮೂವತ್ತು ವರ್ಷಗಳಿಂದ ಉತ್ತಮ ಗ್ರಂಥಗಳನ್ನೆಲ್ಲ ಮೂಲೆಗೆ ಸೇರಿಸಿದ್ದ ನನಗೆ ಅವನ್ನೆಲ್ಲ ಮತ್ತೆ ಓದುವ-ಮನನ ಮಾಡುವ ಅವಕಾಶವನ್ನೊದಗಿಸಿಕೊಟ್ಟೆ. ನಿನ್ನ ಉಪಕಾರವನ್ನು ಹೇಗೆ ಮರೆಯಲಿ ತಾಯಿ?" ಎಂದವರೆ ಒಂದು ಬೆಳ್ಳಿಯ ಲೋಟವನ್ನು ನನ್ನ ಕೈಗಿತ್ತು ಆಶೀರ್ವದಿಸುತ್ತ "ನೀನು ಪ್ರಥಮ ದರ್ಜೆಯಲ್ಲಿ ಉತ್ತೀರ್ಣಳಾದುದಕ್ಕೆ ಇದು ನಿನಗೆ ನನ್ನ ಬಹುಮಾನ" ಎಂದರು.

"ಗುರುದಕ್ಷಿಣೆಯನ್ನಾದರೂ ಸ್ವೀಕರಿಸಿ," ಎಂದು ಮತ್ತೆ ಕೇಳಿದರೆ, "ಮುಂದಿನ ಪೀಳಿಗೆಗೆ ಈ ಭಾಷೆಯನ್ನು ಕಲಿಸು. ಅದೇ ನನಗೆ ನೀನು ಕೊಡಬಹುದಾದ ಗುರುದಕ್ಷಿಣೆ," ಎಂದರು.

—ಎಸ್. ಹೇಮಲತಾ

ನವೆಂಬರ್ ತಿಂಗಳ ೨೧ ನೆಯ ತಾರೀಖು. ಬಸವನಬಾಗೇವಾಡಿಯಿಂದ ಲಂಬಾಣಿ ಕೂಲಿಗಳು ಲಾರಿಯಲ್ಲಿ ಪ್ರಯಾಣಿಸುತ್ತ ಬಂದು ಸತ್ತಿಗೇರಿ ಗ್ರಾಮದ ಮುಖ್ಯ ರಸ್ತೆಯ ಬದಿಯಲ್ಲಿ ಬಿದ್ದು ಮೂವತ್ತು ಜನ ಪ್ರಾಣ ತೆತ್ತ ದುರಂತ

ಕೇಳಿ ಇಡೀ ಪ್ರಪಂಚವೇ ದುಃಖಿಸಿದ್ದು ಈಗ ಹಳೆಯ ಕತೆ. ಈ ಭೀಕರ ದುರಂತವನ್ನು ಕಂಡವರಲ್ಲಿ ನಾನೂ ಒಬ್ಬ. ಅಪಘಾತ ಸ್ಥಳಕ್ಕೆ ನಾವು ಹೋದಾಗ ಇನ್ನೂ ಬೆಳಗಾಗಿರಲಿಲ್ಲ. ನಾಲ್ಕು ಮಕ್ಕಳನ್ನು ಹಾಗೂ ಹೆಂಡತಿಯನ್ನು ಕರೆದುಕೊಂಡು ಆ ನಾಲ್ಕೂ ಕಂದಮ್ಮಗಳ ಶವವನ್ನು ಸಾಲಾಗಿ ತನ್ನೆದುರು ಇಟ್ಟುಕೊಂಡು ಒಂದೆಡೆ ಅಳುತ್ತ ಕುಳಿತಿದ್ದ ತಂದೆಯೊಬ್ಬ. ಇನ್ನೊಂದೆಡೆಗೆ ಮಿದುಳಿಗೆ ಪೆಟ್ಟು ತಗಲಿ ಸ್ಮೃತಿ ಕಳೆದುಕೊಂಡು ಚೀರಾಡುತ್ತಿದ್ದ ಹೆಂಡತಿಯನ್ನು ತೊಡೆಯ ಮೇಲೆ ಹಾಕಿಕೊಂಡು ಕುಳಿತಿದ್ದ ಮತ್ತೊಬ್ಬ ಲಮಾಣಿ ಗಂಡಸು. ಬದುಕಿ ಉಳಿದವರ ಮುಖಗಳಲ್ಲೆಲ್ಲ ಭೀತಿಯ ಛಾಯೆ ಆವರಿಸಿತ್ತು. ಅಲ್ಲಲ್ಲಿ ಎಳೆದು ಹಾಕಿದ ಶವಗಳು, ನಿದ್ದೆಯಲ್ಲಿ ಮಲಗಿದಂತೆ ಬಿದ್ದಿದ್ದವು. ಮಾರನೆಯ ದಿನದ ಒಡಲ ಬೇಗೆಯನ್ನು ತೀರಿಸಿಕೊಳ್ಳಲೋಸುಗ ತಂದ ಬುತ್ತಿ ಹಾಗೂ ರೊಟ್ಟಿಯ ಗಂಟುಗಳು ಚೆಲ್ಲಾಪಿಲ್ಲಿಯಾಗಿ ಹರಡಿದ್ದುವು. ಜೊತೆಗೆ ದೇವರಿಗೆಂದು ಒಡೆಸಿದ ತೆಂಗಿನಕಾಯಿಯ ಹೋಳುಗಳು, ಕುಂಕುಮ, ಪ್ರಸಾದ ಎಲ್ಲವೂ ಎತ್ತೆತ್ತಲೋ ಬಿದ್ದುದೆಲ್ಲವನ್ನೂ ನೋಡುತ್ತ, ಮಾತೇ ಹೊರಡದ ಮೂಕ ಪ್ರೇಕ್ಷಕನಾಗಿ ಇತರ ಗ್ರಾಮಸ್ಥರೊಡನೆ ನಾನೂ ನಿಂತಿದ್ದೆ. ಬೆಳದಿಂಗಳ ರಾತ್ರಿ, ತಣ್ಣಗಿನ ವಾತಾವರಣದಲ್ಲೂ ಬದುಕಿದ ಜನಕ್ಕೆ ಬಾಯಾರಿಕೆಯನ್ನುಂಟುಮಾಡಿತ್ತು. ಸ್ವಯಂಪ್ರೇರಿತರಾಗಿ ಗ್ರಾಮದ ಜನ, ಅವರೆಲ್ಲರಿಗೆ ನೀರಿನ ಹಾಗೂ ಚಹದ ಸರಬರಾಜು ಮಾಡುತ್ತಿದ್ದರು. ಭೀಕರ ದುರಂತದಲ್ಲಿ ಸುಮಾರು ಒಂದು ಒಂದೂವರೆ ವರ್ಷದ ಮಗುವೊಂದು ತಾಯಿಯನ್ನು ಕಳೆದುಕೊಂಡು ಅನಾಥವಾಗಿ ಬದುಕುಳಿದಿತ್ತು. ಹಸಿದ ಮಗು ತಾಯಿಗಾಗಿ ಹಂಬಲಿಸಿ ಕರುಳು ಕಿತ್ತಿ ಬರುವಂತೆ ಅಳುತ್ತಿತ್ತು. ಆ ಮಗುವಿನ ಆಕ್ರಂದನವನ್ನು ಕಂಡ ಒಬ್ಬ ಮಹಿಳೆಗೆ ತನ್ನ ತಾಯ್ತನ ಜಾಗ್ರತವಾಯಿತೋ ಏನೋ, ಆ ಮಗುವನ್ನು ಎತ್ತಿಕೊಂಡು ಎದೆಗೆ ಅವಚಿಕೊಂಡೊಡನೆಯೆ ಮಗುವು ತನ್ನ ಸುತ್ತಲಿನ ಅಂಧಃಕಾರವನ್ನೇ ಮರೆತು ಸ್ತನಪಾನಮಾಡತೊಡಗಿತ್ತು. ಆ ಹೃದಯಸ್ಪರ್ಶಿ ದೃಶ್ಯವನ್ನು ನೋಡುತ್ತಿದ್ದ ಹಾಗೆ ಇನ್ನೂ ಮಾನವರಲ್ಲಿ ಮಾನವೀಯತೆ ಉಳಿದಿದೆಯಲ್ಲ ಎಂಬ ಭಾವ ನನ್ನಲ್ಲಿ ಬಂತು.

— ಶಶಿಸೋದರ

ಉತ್ತರ ಕನ್ನಡ ಜಿಲ್ಲೆಯ ಸುಪಾ ತಾಲೂಕಿನಲ್ಲಿ 'ಚಾಂದೇವಾಡಿ' 'ಅಸು' ಮುಂತಾದ ಹಳ್ಳಿಗಳಿವೆ. ಹೆದ್ದಾರಿಯಿಂದ ಒಳಮೂಲೆಯಲ್ಲಿರುವ ಈ ಹಳ್ಳಿಯ ಜನರಿಗೆ ನೇರ ಬಸ್ಸಿನ ವ್ಯವಸ್ಥೆ ಇಲ್ಲದ ಪ್ರಯುಕ್ತ ಮುಖ್ಯ ರಸ್ತೆಯಿಂದ ೮–೧೦ ಮೈಲು ನಡೆದೇ ಪ್ರಯಾಣಿಸಬೇಕು. ಸ್ಥಳೀಯ ಶಾಸಕರೊಬ್ಬರ ಪ್ರಯತ್ನದಿಂದ ದಿನದಲ್ಲಿ ಒಂದೋ ಎರಡೋ ಬಸ್ಸುಗಳು ಈ ಹಳ್ಳಿಗಳನ್ನು ಹಾದು ಹೋಗುವ ವ್ಯವಸ್ಥೆ ಇತ್ತೀಚೆಗೆ ಆಗಿದೆ. ಬೆಳಗಾವಿ-ಅಂಬಿಕಾನಗರ ಬಸ್ಸು 'ಅಸು' ವಿನ ಮಾರ್ಗವಾಗಿ ಹೊರಟಿತ್ತು, ನಾನೂ ಆ ಬಸ್ಸಿನಲ್ಲಿ ಪ್ರಯಾಣಿಸುತ್ತಿದ್ದೆ. ಲೋಂಡಾದಲ್ಲಿ ಹಾಗೂ ರಾಮನಗರದಲ್ಲಿ ಅಂದು ಭಾನುವಾರದ ಸಂತೆಗೆ ಬಂದ ಹಳ್ಳಿಯ ಜನ ತುಂಬಿಕೊಂಡಿದ್ದರು. ನನ್ನ ಪಕ್ಕದಲ್ಲಿ ಕುಳಿತ ಮಹನೀಯರೊಬ್ಬರು ಆ ಜನರನ್ನೂ, ಅವರು ಸಂತೆಯಿಂದ ತಂದ ಜೀನಸಿನ ಗಂಟು ಮೂಟೆಯನ್ನು ನೋಡಿ ವ್ಯಂಗ್ಯವಾಗಿ ಮಾತಾಡಹತ್ತಿದರು. ಹಳ್ಳಿಯಲ್ಲಿ ಸಂಚರಿಸಿದ ಬಸ್ಸಿಗೂ ಅದರ ಇಲಾಖೆಗೂ ತಮ್ಮ ಸಹಸ್ರನಾಮ ಸಲ್ಲಿಸಿದರು. 'ಅಸು' ಬರುತ್ತಲೂ ಜನ ಇಳಿಯತೊಡಗಿದರು. ನನ್ನ ಪಕ್ಕದ ಮಹನೀಯರಿಗೆ ಅಲ್ಲಿನ ಶಾಲೆಯ ಫಲಕ ಕಣ್ಣಿಗೆ ಬಿದ್ದಿರಬೇಕು, "ಈ ಊರಿಗೂ ಒಂದು ಶಾಲೆ ಬೇರೆ ಇದೆಯಾ!" ಎಂದು ಹಾಸ್ಯಾಸ್ಪದವಾಗಿ ನಗಹತ್ತಿದರು. ಆಗಷ್ಟೇ ಇಳಿಯುತ್ತಿದ್ದ ಹಳ್ಳಿಯವನೊಬ್ಬ ಅವರತ್ತ ತಿರುಗಿ, "ಸ್ವಾಮೀ ...ನಿಮಗೇನೋ ವಯಸ್ಸು ಸುಮಾರು ಮೂವತ್ತೈದು ಇರಬಹುದು. ಆದರೆ ಈ ಶಾಲೆ ಪ್ರಾರಂಭವಾಗಿ ನೂರಾಹತ್ತು ವರ್ಷಗಳೇ ಆಯ್ತು," ಎಂದು ಅಷ್ಟೇ ತಿರಸ್ಕಾರದಿಂದ ಹೇಳಿ ಇಳಿದುಹೋದ.

- ಸುರೇಶ ಹೆಗಡೆ

# ಕಂಪ್ಯೂಟರ್ ಜೋಡಿ

ಮೂಲ : ಪಿ. ಎಸ್. ನೆರುಳಕರ
ಕನ್ನಡಕ್ಕೆ : ಶ್ಯಾಮಸುಂದರ ದೇಶಪಾಂಡೆ

ನಾನು ಪ್ರದ್ಯುಮ್ನ. ವಯಸ್ಸು ೨೫. ವ್ಯವಸಾಯ ಕಂಪ್ಯೂಟರ್ ಸಾಫ್ಟ್‌ವೇರ್ ಇಂಜಿನಿಯರ್. ಒಂದು ಹೆಸರಾಂತ ಕಂಪ್ಯೂಟರ್ ಸಲಹಾ ಸಂಸ್ಥೆಯಲ್ಲಿ ಜ್ಯೂನಿಯರ್ ಎಕ್ಸಿಕ್ಯುಟಿವ್ ಆಗಿದ್ದೇನೆ. ನಮ್ಮ ಕಂಪನಿ ಈ ಕ್ಷೇತ್ರದಲ್ಲಿ ಅಗ್ರಗಣ್ಯ ಸಂಸ್ಥೆಯೆಂದು ಹೆಸರು ಪಡೆದಿದೆ. ನಾವು ದೊಡ್ಡ ದೊಡ್ಡ ಕಾರ್ಖಾನೆಗಳಿಂದ ಹಿಡಿದು ಶ್ರೀಸಾಮಾನ್ಯನಿಗೂ ಅವಶ್ಯವಿರುವ ಎಲ್ಲ ಕಂಪ್ಯೂಟರ್ ಸಾಫ್ಟ್‌ವೇರ್‌ಗಳನ್ನು ಒದಗಿಸುತ್ತೇವೆ. ವಿವಾಹೇಚ್ಛುಗಳಿಗೆ ಜೊತೆಗಾರ ಅಥವಾ ಜೊತೆಗಾರ್ತಿಯನ್ನು ಕೂಡ ಕಂಪ್ಯೂಟರ್ ಸಹಾಯದಿಂದ ಆಯ್ಕೆ ಮಾಡಿ ಕೊಡುತ್ತೇವೆ. ಅವಿನಾಶ ನನ್ನ ಸಹೋದ್ಯೋಗಿ. ನನ್ನ ಸಮವಯಸ್ಕ. ಅಲ್ಲದೆ ಅವನದೂ ನನ್ನದೂ ಒಂದೇ ಗ್ರೇಡು. ನಾವಿಬ್ಬರೂ ಒಂದೇ ಕ್ಯಾಬಿನ್ನಿನಲ್ಲಿ ಇರುತ್ತೇವೆ. ನಮ್ಮಿಬ್ಬರಲ್ಲೂ ಸಹಜವಾದ ವೃತ್ತಿ ಮಾತ್ಸರ್ಯ. ಏಕೆಂದರೆ, ಮುಂದಿನ ಬಡ್ತಿಯ ರೇಸಿನಲ್ಲಿ ಯಾರು ಗೆಲ್ಲುತ್ತಾರೋ ನೋಡಬೇಕು. ಇದೆಲ್ಲ ರಗಳೆ ಈಗ ಏಕೆ? ಎಂದು ನೀವನ್ನಬಹುದು. ಆದರೆ ನಾನು ಮುಂದೆ ಹೇಳಲಿರುವ ಸಂಗತಿಗೆ ಇದೇ ಪೂರ್ವ ಪೀಠಿಕೆ.

ನನ್ನ 'ಬಾಸ್'—ನಾವು ಅವರನ್ನು 'ಸಾಹೇಬ' ರೆಂದೇ ಕರೆಯೋಣ-ಅತಿ ಬುದ್ಧಿವಂತ, ಜನರನ್ನು ಕ್ಷಣಮಾತ್ರದಲ್ಲಿ ಅಳೆಯಬಲ್ಲ ಹಾಗೂ ಅತ್ಯಂತ ಯಶಸ್ವಿ ಮ್ಯಾನೇಜರ್ ಎಂದು ಹೆಸರು ವಾಸಿಯಾದ ವ್ಯಕ್ತಿ. ಬಹಳ ಒಳ್ಳೆಯ ಸಾಹೇಬ. ನಾನು ಮತ್ತು ಅವಿ ಅವರ ಎರಡು ಕೈಗಳಿದ್ದಂತೆ. (ನಮ್ಮ ಇತರ ಸಹೋದ್ಯೋಗಿಗಳು ನಮ್ಮನ್ನು 'ಚಮಚಾ' ಎನ್ನುತ್ತಾರೆ. ಆ ಮಾತು ಬೇರೆ.) ನನಗೆ ಸಾಹೇಬರಿಂದ ಮಾರ್ಗದರ್ಶನ ಪಡೆಯುವುದೆಂದರೆ ಬಲು ಹಿಗ್ಗು. ನಿಜ ಹೇಳಬೇಕೆಂದರೆ ಕೆಲವೊಮ್ಮೆ ರಜಾದಿನಗಳಲ್ಲಿ ಗಂಟೆಗಟ್ಟಲೇ ಅವರ ಮನೆಯಲ್ಲೇ ಇರುತ್ತೇನೆ. (ಅವಿಗೆ ನನ್ನನ್ನು ಕಂಡರೆ ಹೊಟ್ಟೆಯುರಿ. ನಾನು ಮಂಜರಿಯನ್ನು ನೋಡುವುದಕ್ಕಾಗಿಯೇ ಸಾಹೇಬರ ಮನೆಗೆ ಹೋಗುತ್ತೇನೆಂದು ಅವನ ಭಾವನೆ) ಅರೆ, ಹಾಂ! ಅಂದಹಾಗೆ ಮಂಜರಿಯ ಪರಿಚಯ ಮಾಡಿಕೊಡುವುದು ಹಾಗೇ ಉಳಿದು ಹೋಯಿತು. ಮಂಜರಿ ನಮ್ಮ ಸಾಹೇಬರ ಸುಂದರ ಹಾಗೂ ಸದ್ಗುಣಿಯಾದ ಏಕಮಾತ್ರ ಪುತ್ರಿ. ನಾನು ಸಾಹೇಬರ ಮನೆಗೆ ಹೋದಾಗ ಅವರ ಮಗಳೂ ಕಣ್ಣಿಗೆ ಬೀಳುವುದು ಸಹಜ ತಾನೆ? ಅದರಲ್ಲಿ ಆಕ್ಷೇಪಿಸುವಂತಹದು ಏನಿದೆ?

ಅವಿ ಕರುಬುತ್ತಾನೆ. ಅಷ್ಟೇ... ಇರಲಿ ಆತ ಕರುಬಿದರೆ ಆತನಿಗೆ...!

ಮುಖ್ಯ ವಿಷಯವೆಂದರೆ ಅಂದು ಆಫೀಸಿನಲ್ಲಿ ಸಾಹೇಬರ ಜೊತೆ ಮಂಜರಿಯನ್ನು ನೋಡಿದೆ. ನಾನು ಮತ್ತು ಅವಿ ಕ್ಯಾಬಿನ್ನಿನಲ್ಲಿ ಕುಳಿತಿದ್ದಾಗ ಗಾಜಿನ ಪರದೆಯ ಆ ಬದಿಯಿಂದ ಚಮನ್–ಎ-ಬಹಾರ್ ಹಾದು ಹೋದಂತೆ ಅನಿಸಿತು. ಸಾಹೇಬರು ಹಾಗೂ ವಿಶೇಷತಃ ಮಂಜರಿ ನಮ್ಮ ಕಡೆಗೇ ತದೇಕ ಚಿತ್ತದಿಂದ ನೋಡುತ್ತಿರುವಂತೆ ಅನಿಸಿತು. ಅವರಿಬ್ಬರೂ ದೃಷ್ಟಿಯಿಂದ ದೂರ ವಾದ ಮೇಲೆ ನಾನು ಸಹಜವಾಗಿ ಅವಿಯ ಕಡೆ ನೋಡಿದೆ. ಆತ ತನ್ನ ಕುತ್ತಿಗೆಯನ್ನೆತ್ತಿ ಮಂಜರಿಯನ್ನು ನೋಡುತ್ತಿದ್ದ.

ಸುಮಾರು ಐದು ನಿಮಿಷಗಳ ಕಾಲ ನಾನು ಕೆಲಸದಲ್ಲಿ ಮಗ್ನನಾಗಿರುವ ನಾಟಕ ಮಾಡು-ತ್ತಿದ್ದೆ. ಆದರೆ ಕಣ್ಣುಗಳೆರಡೂ ಉತ್ಕಂಠೆಯಿಂದ ಹೊರಗೆ ಮಂಜರಿಯನ್ನು ಅರಸು-ತ್ತಿದ್ದವು. ಒಂದೊಂದು ಕ್ಷಣವೂ ಯುಗದಂತೆ ಭಾಸವಾಗುತ್ತಿತ್ತು. ಕೊನೆಗೆ ತಡೆಯುವುದು ಅಸಾಧ್ಯವಾದಾಗ ಕೈಗೆ ಸಿಕ್ಕ ಫೈಲೊಂದನ್ನು ತೆಗೆದುಕೊಂಡು ಎದ್ದೆ. ಅವಿಯ ಕಡೆಗೆ ನೋಡುವ ಯತ್ನವನ್ನೂ ಮಾಡದೇ "ಸಾಹೇಬರ ಕಡೆಗೆ ಹೋಗುತ್ತಿದ್ದೇನೆ." ಎಂದು ಹೇಳುತ್ತ ಕ್ಯಾಬಿನ್ನಿನಿಂದ ಹೊರಬಿದ್ದೆ. ಅವಿಯ ಕಣ್ಣುಗಳು ಏಕೋ ಏನೋ ನನ್ನ ಬೆನ್ನ ಮೇಲೆ ಬೆಂಕಿ ಕಾರುತ್ತಿರು-ವಂತೆ ಅನಿಸಿತು.

ಸಾಹೇಬರ ಕ್ಯಾಬಿನ್ನಿನ ಬಾಗಿಲನ್ನು ನಿಧಾನವಾಗಿ ತೆರೆದೆ. ಒಳಗೆ ಹೋಗುತ್ತಿದ್ದಂತೆ ಎಡಗಡೆಗೆ ಉದ್ದವಾದ ಒಂದು ಕಟ್ಟಿಗೆಯ ಪಾರ್ಟಿ-ಶನ್ ಇದೆ. ಈ ಪಾರ್ಟಿಶನ್ನಿನ ಆಚೆ ಭಾಗ-ದಲ್ಲೇ ನಮ್ಮ ಸಾಹೇಬರು ಕುಳಿತಿರುತ್ತಾರೆ. ಪಾರ್ಟಿಶನ್ ದಾಟುವ ಉದ್ದೇಶದಿಂದ ಜಾಗರೂಕತೆಯಿಂದ ಹೆಜ್ಜೆ ಹಾಕತೊಡಗಿದೆ. ಅಷ್ಟರಲ್ಲೇ ಸಾಹೇಬರ ಕೆಲವು ಮಾತುಗಳು ನನ್ನ ಕಿವಿಯ ಮೇಲೆ ಅಪ್ಪಳಿಸಿದವು. ನಾನು ಅಲ್ಲೇ ನಿಂತು ಕೇಳತೊಡಗಿದ.

"ಮಂಜರಿ, ನನಗೆ ಆ ಇಬ್ಬರಲ್ಲಿ ಯಾರ ಬಗ್ಗೆಯೂ ಅಭ್ಯಂತರವಿಲ್ಲ. ಪ್ರದ್ಯುಮ್ನ, ಅವಿನಾಶ ಇಬ್ಬರೂ ಬುದ್ಧಿವಂತರು, ಇಬ್ಬರಿಗೂ ಒಳ್ಳೆಯ ಭವಿಷ್ಯವಿದೆ. ನಿನಗೂ ಇಬ್ಬರೂ ಒಪ್ಪಿಗೆ ಇದ್ದಾರೆ ಎಂದು ನನಗೆ ತಿಳಿದು ಸಂತೋಷವಾಯಿತು. ಈಗ ಸಮಸ್ಯೆಯ ಮೊದಲ ಹಂತ ಮುಗಿಯಿತು. ಇನ್ನು ದ್ವಿತೀಯ ಹಂತಕ್ಕೆ ಕೈ ಹಾಕೋಣ. ಅವಿನಾಶ ಹಾಗೂ ಪ್ರದ್ಯುಮ್ನರ ಕುರಿತ ವಿವರಗಳು ಅವರ ಪರ್ಸೊನೆಲ್ ಫೈಲುಗಳಲ್ಲಿವೆ. ನೀನು ಮ್ಯಾರೇಜ್ ಮ್ಯಾಚಿಂಗ್ ಫಾರ್ಮುಗಳನ್ನು ತೆಗೆದುಕೊಂಡು ಅವುಗಳಲ್ಲಿ ಅವರ ಹೆಸರುಗಳನ್ನು ಬಿಟ್ಟು ಉಳಿದ ವಿವರಗಳನ್ನು ಬರೆದುಕೋ. ಅವಿನಾಶನ ವಿವರಗಳುಳ್ಳ ಫಾರ್ಮನ್ನು ಪ್ರದ್ಯುಮ್ನನಿಗೂ ಪ್ರದ್ಯುಮ್ನನ ವಿವರಗಳುಳ್ಳ ಫಾರ್ಮನ್ನು ಅವಿನಾಶನಿಗೂ ಕೊಡೋಣ. ಈ ಫಾರ್ಮುಗಳನ್ನು ತೆಗೆದುಕೊಂಡು ಅವರು ದಿನನಿತ್ಯದಂತೆ ಪ್ರೋಗ್ರಾಂ ತಯಾರಿಸಲಿ. ನಿನ್ನ ಕುರಿತ ವಿವರಗಳು ಆ ಕೆಂಪು ಫೋಲ್ಡರಿನಲ್ಲಿವೆ. ಅದರ ಪ್ರೋಗ್ರಾಂನ್ನು ನಂತರ ತಯಾರಿಸಿಕೊಳ್ಳೋಣ. ಇದಾದ ನಂತರ ಅವಿನಾಶನ ಹಾಗೂ ಪ್ರದ್ಯುಮ್ನನ ಪ್ರೋಗ್ರಾಂ ಜೊತೆ ನಿನ್ನ ಪ್ರೋಗ್ರಾಂ ಮ್ಯಾಚ್ ಮಾಡಿ. ಯಾರ ಪಾಯಿಂಟ್ಸ್ ಜಾಸ್ತಿ ಆಗುತ್ತೋ ಆತನೇ ನಿನ್ನ... ಓ. ಕೆ. ಬೇಬಿ?" ಎಂದರು.

ಇಷ್ಟು ಕೇಳಿದ್ದೇ ತಡ ನನ್ನ ತಲೆಯಲ್ಲಿ ವಿಚಾರಚಕ್ರ ವೇಗವಾಗಿ ತಿರುಗತೊಡಗಿತು. ಏನೇ ಆದರೂ ಇನ್ನು ಮಂಜರಿಯನ್ನು ಹಾಗೂ ಪ್ರಮೋಶನ್ನನ್ನು ಕಳೆದುಕೊಳ್ಳುವ ಹಾಗಿಲ್ಲ ಎಂದು ನಿರ್ಧರಿಸಿ, ಬಹು ಜಾಗರೂಕತೆಯಿಂದ, ಹೆಜ್ಜೆಗಳ ಸಪ್ಪಳ ಮಾಡದೆ ಬಾಗಿಲು ತೆರೆದು ಹೊರಬಿದ್ದೆ.

ಕುರ್ಚಿಯಲ್ಲಿ ಕುಳಿತುಕೊಂಡು, ಗಟಗಟ ಒಂದು ಗ್ಲಾಸ್ ನೀರು ಕುಡಿದೆ. ಗಂಟಲಿನ ಟಾಯನ್ನು ಸಡಿಲಿಸಿದೆ. ಕುರ್ಚಿಯ ಮೇಲೆ ತಲೆ ಇರಿಸಿ, ಮೇಲೆ ತಿರುಗುತ್ತಿದ್ದ ಫ್ಯಾನಿನ ಕಡೆ ನೋಡತೊಡಗಿದ. ಅದಕ್ಕೂ ಅನೇಕ ಪಟ್ಟು ಜೋರಾಗಿ ತಲೆಯಲ್ಲಿನ ಚಕ್ರ ತಿರುಗುತ್ತಿತ್ತು. ಮಿದುಳು ಆದೇಶಗಳನ್ನು ನೀಡತೊಡಗಿತು, ಅಪೇಕ್ಷೆಯಂತೆ ಇಂಟರ್‌ಕಾಮಿನ ಒಂದನೇ ನಂಬರಿನ ದೀಪ ಹತ್ತಿತು. ಈ

ಸಂದೇಶ ಸಾಹೇಬರ ಚೇಂಬರಿನಿಂದ ಬರುತ್ತಿದೆ ಎಂಬ ಗುರುತು. ನಾನು ರಿಸೀವರ್ ಎತ್ತಿ, ಗಂಟಲು ಸರಿಪಡಿಸಿಕೊಂಡು ಸಾಧ್ಯವಾದಷ್ಟು ಮೃದು ಸ್ವರದಲ್ಲಿ. "ಎಸ್ ಸರ್?" ಎಂದೆ. ನಿರೀಕ್ಷೆಯಂತೆ, ಎರಡು ಮಹತ್ವದ ಫಾರ್ಮುಗಳನ್ನು ಕೊಡುತ್ತಿರುದಾಗಿಯೂ, ನಾನು ಹಾಗೂ ಅವಿ ಅವುಗಳ ಪ್ರೋಗ್ರಾಮಿಂಗ್ ಫ್ಲಾಪಿ ಡಿಸ್ಕಿನ ಮೇಲೆ ನಾಳೆ ಮಧ್ಯಾಹ್ನದೊಳಗಾಗಿ ಸಿದ್ಧವಾಗಿಟ್ಟಿರಬೇಕೆಂದೂ ಆದೇಶ ನೀಡಿದರು.

ದಿನವಿಡೀ ನಾನು ಇತರೇ ಕೆಲಸಗಳನ್ನು ಅರ್ಜಂಟ್ ಬೇಸಿಸ್‌ನಲ್ಲಿ ಮಾಡುತ್ತಿರುವ ನಾಟಕ ಮಾಡುತ್ತಿದ್ದೆ. ಸಾಯಂಕಾಲ ಆಫೀಸ್ ವೇಳೆ ಮುಗಿಯುತ್ತ ಬಂತು. ಇನ್ನೂ ಅನೇಕ ಮಹತ್ವದ ಕೆಲಸಗಳು ಪೆಂಡಿಂಗ್ ಇರುವುದಾಗಿ ಹೇಳಿಕೊಂಡೆ. ಇದ್ದಕ್ಕಿದ್ದಂತೆ ಅವಿಯ ಕಡೆ ನೋಡುತ್ತ, "ಅವಿ, ಇವತ್ತು ಕೊಂಚ ಹೊತ್ತು ಓವರ್ ಟೈಂ ಕೆಲಸ ಮಾಡೋಣವೆ? ಎಷ್ಟೊಂದು ಕೆಲಸಗಳು ಉಳಿದಿವೆ!"

"ಓ! ನೋ ಬಾಯ್ ನೋ, ನನಗೆ ಮನೆಗೆ ಹೋಗಲೇಬೇಕು. ಡ್ಯಾಡಿ ಈಜ ನಾಟ್ ಫೀಲಿಂಗ್ ವೆಲ್, ಮತ್ತು ಅಂತಹ ವಿಶೇಷ ಕೆಲಸವೇನಿದೆ? ಎಲ್ಲ ರೂಟಿನ್ನೇ ಇದೆ," ಅವಿ ನುಡಿದ.

ಅವಿ ನಿಲ್ಲುವದಿಲ್ಲ ಎಂದು ತಿಳಿದು ಸಮಾಧಾನವಾಯಿತು. "ಅವಿ, ನೀನು ಹೋಗು. ನಾನು ಸ್ವಲ್ಪ ಸಮಯ ಇದ್ದು ನಮ್ಮ ಕೆಲಸಗಳನ್ನು ತೀರಿಸುವೆ. ಸಾಹೇಬರು ಕೊಟ್ಟ ಎರಡೂ ಫಾರ್ಮುಗಳ ಪ್ರೋಗ್ರಾಂ ಮಾಡಿಡುತ್ತೇನೆ. ಯು ಡೋಂಟ್ ವರಿ ಅಬೌಟ್ ಇಟ್," ಎಂದೆ.

"ಓ. ಕೆ. ಥ್ಯಾಂಕ್ಸ್" ಎಂದು ಆತ ಹೊರಟು ಹೋದ.

ನಿಧಾನವಾಗಿ ಒಬ್ಬೊಬ್ಬರೆ ಆಫೀಸಿನಿಂದ ಹೊರಬಿದ್ದರು. ಸಾಹೇಬರೂ ಹೊರಬಿದ್ದರು. ಸ್ವಲ್ಪ ಗಡಿಬಿಡಿಯಲ್ಲಿದ್ದಂತೆ ಅನಿಸಿತು. ಹೀಗಾಗಿ ನಮ್ಮ ಕ್ಯಾಬಿನ್ನಿನ ಕಡೆ ನೋಡಲೂ ಇಲ್ಲ. ಮಂಜರಿ ಯಾವಾಗ ಹೊರಟು ಹೋಗಿದ್ದಳೋ ಗಮನಕ್ಕೆ ಬರಲಿಲ್ಲ. ಕೊನೆಗೆ ಸಿಪಾಯಿ ಶಿರ್ಕೆ ಕ್ಯಾಬಿನ್ನಿನಲ್ಲಿ ಬಂದು, "ಸರ್, ಇನ್ನೂ ಎಷ್ಟು ಹೊತ್ತು ಇರುತ್ತೀರಿ?" ಎಂದ.

"ನಿನಗೆ ಕೆಲಸವಿದ್ದರೆ ನೀನು ಹೋಗು. ಉಳಿದ ಕ್ಯಾಬಿನ್ನುಗಳಿಗೆ ಬೀಗ ಹಾಕಿ ಬೀಗದ ಕೈಗೊಂಚಲನ್ನು ನನಗೆ ಕೊಟ್ಟು ಹೋಗು. ನಾನು ಆಫೀಸಿನ ಮುಖ್ಯ ಬಾಗಿಲನ್ನು ಹಾಕುತ್ತೇನೆ," ಎಂದೆ. ಇವನ್ನೇ ಅಪೇಕ್ಷಿಸುತ್ತಿದ್ದ ಆತ ಕೀ ಬಂಚನ್ನು ಟೇಬಲ್ಲಿನ ಮೇಲಿಟ್ಟು ಹೊರಟುಹೋದ. ಇನ್ನು ಬೇಗ ಬೇಗ ಕೆಲಸ ಮುಗಿಸಬೇಕು ಅಂದುಕೊಂಡೆ.

ಮೊದಲು ಅವಿಯ ಟೇಬಲ್ ಕಡೆ ನೋಡಿದೆ. ಅದೃಷ್ಟವಶಾತ್ ಆತನಿಗೆ ಕೊಟ್ಟಿದ್ದ ಫಾರ್ಮು ಟೇಬಲ್ ಮೇಲೆ ಒಂದು ಫೋಲ್ಡರಿನಲ್ಲಿತ್ತು. ಅದನ್ನು ತೆಗೆದುಕೊಂಡೆ. ಹುಟ್ಟಿದ ದಿನ, ಶಿಕ್ಷಣ, ಅನುಭವ, ಅಭಿರುಚಿ, ಕೌಟುಂಬಿಕ ಹಿನ್ನೆಲೆ ಇತ್ಯಾದಿ ವಿವರಗಳ ಮೇಲೆ ಕಣ್ಣಾಡಿಸಿದೆ. ಸಂಶಯವೇ ಇಲ್ಲ. ಎಲ್ಲ ನನ್ನದೇ ವಿವರಗಳು. ನನ್ನ ಬಳಿಯಲ್ಲಿನ ಅವಿಯ ಹಾಗೂ ಅವಿ ಬಳಿಯಲ್ಲಿನ ನನ್ನ ಫಾರ್ಮನ್ನು ತೆಗೆದುಕೊಂಡು ಕ್ಯಾಬಿನ್ನಿನಿಂದ ಹೊರಬಿದ್ದೆ. ಅಪೇಕ್ಷೆಯಂತೆ ಸಾಹೇಬರ ಕ್ಯಾಬಿನ್‌ಗೆ ಬೀಗ ಹಾಕಿತ್ತು. ಬಂಚ್‌ನಿಂದ ಕೀ ಹುಡುಕಿ ಬಾಗಿಲು ತೆರೆದು ಒಳಗೆ ಹೊಕ್ಕೆ. ಅಲ್ಲಿ ಟೇಬಲ್ ಮೇಲೆ ನಾಲ್ಕೈದು ಕೆಂಪು ಬಣ್ಣದ ಫೋಲ್ಡರ್‌ಗಳಿದ್ದವು. ಆ ಫೋಲ್ಡರನ್ನು ಕಣ್ಣುಗಳು ಹುಡುಕತೊಡಗಿದವು. ಅಂತೂ ನನಗೆ ಬೇಕಾದ ಕಾಗದವಿದ್ದ ಫೋಲ್ಡರ್ ಸಿಕ್ಕಿತು. ಅತ್ಯಾನಂದದಿಂದ ರೋಮಾಂಚನಗೊಂಡು ಅದನ್ನು ಚುಂಬಿಸಿದೆ. 'ಏ ಈಗ ಸಮಯ ಹಾಳು ಮಾಡುವುದು ಸರಿಯಲ್ಲ.' ಎಂದು ಸ್ವಂತಕ್ಕೇ ಹೇಳಿಕೊಂಡು ಕ್ಯಾಬಿನ್ನಿನಿಂದ ಹೊರಬಿದ್ದೆ.

ಮೂರೂ ಕಾಗದಗಳೊಂದಿಗೆ ಕಂಪ್ಯೂಟರ್ ರೂಮ್‌ಗೆ ನುಗ್ಗಿದೆ. ಸ್ವಿಚ್ ಆನ್ ಮಾಡಿದೆ. ಕಾಪ್ಟರ್ ಚೇರ್ ಎಳೆದುಕೊಂಡು ಕುಳಿತುಕೊಂಡೆ. ಮೊದಲು ಮಂಜರಿಯ ವಿವರಗಳನ್ನು ತೆಗೆದುಕೊಂಡೆ. ಫ್ಲಾಪಿ ಡ್ರೈವಿನಲ್ಲಿ ಫ್ಲಾಪಿ ಡಿಸ್ಕ್ ಸೇರಿಸಿದೆ. ಬಟನ್ ಒತ್ತುತ್ತಿದ್ದಂತೆ ಟಿಪ್ ಎಂಡ್ ಟಿಪ್ ಕೆಂಪು ದೀಪ ಕೆಲಸ ಮಾಡತೊಡಗಿತು. ಅಪೇಕ್ಷಿತ ಸದ್ದು ಫ್ಲಾಪಿ ಡ್ರೈವಿನಿಂದ ಕೇಳಿಸತೊಡಗಿತು. ಕೀ ಬೋರ್ಡನ್ನು

ಮುಂದೆ ಎಳೆದುಕೊಂಡು ಟೇಬಲ್ ಮೇಲಿನ ಡಿಸ್‌ಪ್ಲೇ ಸ್ಕ್ರೀನ್ ಟೆಸ್ಟ್ ಮಾಡಿದೆ. ಎಲ್ಲವೂ ಸರಿಯಾಗಿತ್ತು. ಮಂಜರಿಯ ವಿವರಗಳನ್ನು ಒಮ್ಮೆ ಸಾವಧಾನವಾಗಿ ಕೀ ಬೋರ್ಡಿನ ಬಟನ್ನು-ಗಳನ್ನು ಒತ್ತತೊಡಗಿದೆ. ೧೫-೨೦ ನಿಮಿಷಗಳಲ್ಲಿ ಮಂಜರಿಯ ವಿವರಗಳು ಪ್ರೋಗ್ರಾಂಅನ್ನು ಸೇರಿದ್ದವು. ಫ್ಲಾಪಿ ಡಿಸ್ಕ್ ಮೇಲೆ ಪ್ರೋಗ್ರಾಂ ಸೇರಿತು.

ನಂತರ ಅವಿಯ ಫಾರ್ಮಿನಲ್ಲಿದ್ದ ವಿವರಗಳ ಕಡೆ ಹೊರಳಿದೆ. ಫ್ಲಾಪಿ ಡಿಸ್ಕ್ ಬದಲಾಯಿಸಿದೆ. ಕೀ ಬೋರ್ಡ್ ಮೆಲೆ ಕೈ ಸರಸರನೆ ಓಡುತ್ತಿತ್ತು. ೧೧-೧೫ ನಿಮಿಷಗಳಲ್ಲಿ ಈ ಕೆಲಸವೂ ಮುಗಿಯಿತು. ಕೊನೆಗೆ ನನ್ನದೇ ವಿವರಗಳನ್ನು ಪ್ರೋಗ್ರಾಂಗೆ ಸೇರಿಸುವುದಿತ್ತು. ಅವು ಬಾಯಿ ಪಾಠ ಆಗಿದ್ದವು. ಮೂರನೇ ಫ್ಲಾಪಿ ಡಿಸ್ಕ್ ತೆಗೆದುಕೊಂಡು ಒಳಗೆ ಸರಿಸಿ ಆ ಕೆಲಸವನ್ನು ಮುಗಿಸಿದೆ. ಮೂರೂ ಫ್ಲಾಪೀಜ್ ತಯಾರಾದವು. ಸ್ವಲ್ಪ ದಣಿವಾದಂತೆ ಅನಿಸಿತು. ಇನ್ನು ಕೊನೆಯ ಅತ್ಯಂತ ಮಹತ್ವದ ಕೆಲಸ. ತುಲನೆ ಮಾಡಿ ಮ್ಯಾಚಿಂಗ್ ಪಾಯಿಂಟ್ಸ್ ನೋಡುವುದು.

ಮೊದಲು ಮಂಜರಿಯ ಹಾಗೂ ಅವಿಯ ಫ್ಲಾಪಿ ಡಿಸ್ಕುಗಳನ್ನು ಡ್ರೈವ್‌ನಲ್ಲಿ ಸೇರಿಸಿದೆ. ಡಿಸ್‌ಪ್ಲೇ ಆನ್ ಮಾಡಿದೆ. ಸಿ.ಪಿ.ಯುನ್ನು ಪ್ರಾರಂಭ ಮಾಡಿದೆ. ಎರಡು ಮೂರು ನಿಮಿಷಗಳಲ್ಲಿ ಸಂಖ್ಯೆ ಮೂಡಿತು–೮೩! 'ಓಹ್ ಗಾಡ್!' ಒಂದು ರೀತಿಯ ಅವ್ಯಕ್ತ ಭಯ ಮೂಡಿತು. ನನ್ನ ಡಿಸ್ಕ್ ಎತ್ತಿಕೊಂಡೆ. ಫ್ಲಾಪಿ ಡ್ರೈವಿನಿಂದ ಅವಿಯ ಡಿಸ್ಕ್ ತೆಗೆದು ನನ್ನ ಡಿಸ್ಕ್ ಸೇರಿಸಿದೆ. ಕೆಂಪು ದೀಪ ತನ್ನ ಕೆಲಸ ಆರಂಭಿಸಿತು. ಗರ್ ಗರ್. ಸಮಯ ಓಡತೊಡಗಿತು. ಸಂಖ್ಯೆ ಬಂತು. "೭೭!" ಒಂದು ಕ್ಷಣ ಹಾರಿ ಬಿದ್ದೆ. ಹಣೆಯಲ್ಲಿನ ನರಗಳು ಬಿಗಿದುಕೊಳ್ಳತೊಡಗಿದವು. ಬೆವರು ಸುರಿಯತೊಡಗಿತು. ನಡುಗುವ ಕೈಗಳಿಂದ ಗ್ಲಾಸನ್ನೆತ್ತಿ ನೀರನ್ನು ಗಂಟಲಲ್ಲಿ ಇಳಿಸಿದೆ. ಸ್ವಲ್ಪ ಹಾಯೆನಿಸಿತು. ಇನ್ನು ಮನಸ್ಸಿನಲ್ಲಿ ಯೋಚಿಸಿದ್ದನ್ನು ಮಾಡಬೇಕಾಗಿತ್ತು.

ಅವಿಯ ವಿವರಗಳಿದ್ದ ಫಾರ್ಮನ್ನು ಮತ್ತೆ ತೆಗೆದುಕೊಂಡೆ. ಶಾಂತಚಿತ್ತದಿಂದ ಒಂದೊಂದೇ ಕಾಲಂ ಮೇಲೆ ದೃಷ್ಟಿ ಹಾಯಿಸುತ್ತ ಬದಲಾವಣೆ ಮಾಡಬೇಕಾದ ಸಂಗತಿಗಳನ್ನು ಮನದಲ್ಲೇ ಯೋಚಿಸತೊಡಗಿದೆ. ಕಂಪ್ಯೂಟರಿನಲ್ಲಿ ಇನ್‌ಫಾರ್ಮೇಶನ್ ಕೀಯಿಂಗ್ ಮಾಡುವಾಗ ಏನೇನು ಬದಲಾಯಿಸಬೇಕೆಂಬುದನ್ನು ಮತ್ತೊಮ್ಮೆ ಮನದಲ್ಲೇ ನೋಂದಾಯಿಸಿಕೊಂಡೆ. ಹೊಸ ಫ್ಲಾಪಿ ಡಿಸ್ಕ್ ತೆಗೆದುಕೊಂಡು ಡ್ರೈವಿನಲ್ಲಿ ಸೇರಿಸಿದೆ. ಕೀ ಬೋರ್ಡಿನ ಮೇಲೆ ಕೈ ಆಡತೊಡಗಿತು. ಆದರೆ ಅಷ್ಟು ಸರಾಗವಾಗಿ ಕೈ ಓಡುತ್ತಿರಲಿಲ್ಲ. ತುಲನೆ ಮಾಡಿನೋಡಿದೆ. ಸ್ಕ್ರೀನ್ ಮೇಲೆ ಸಂಖ್ಯೆ ಬಂತು. ೬೨! ಸಮಾಧಾನದ ಒಂದು 'ಲಹರ್' ಮೈತುಂಬ ಓಡಿತು. ಅಷ್ಟರಲ್ಲಿ "ಕೌನ್ ಹೈ ಅಂದರ ಭಾಯ್? ಇತನಾ ದೇರ್ ಹೋಗಯಾ?" ಕಾವಲುಗಾರನ ದನಿ ಕೇಳಿ ಬೆಚ್ಚಿಬಿದ್ದೆ. ಗಡಿಯಾರ ನೋಡಿದೆ. ೯–೦೦ ಗಂಟೆಯಾಗಿತ್ತು.

"ಭೈಯಾಜಿ ಮೈ ಹೂಂ. ಪಾಂಚ್ ಮಿನಟ್ ಮೇ ಕಾಮ್ ಖತಮ್ ಹೋಜಾಯೆಗಾ. ಆಪ್ ಜಾಯಿಯೇ," ನಾನೆಂದೆ. ಆತ ಹೊರಟು ಹೋದ. ಆದರೆ ಈ ಎಲ್ಲ ಸಂಗತಿಗಳಿಂದ ಭಾರಿ ಮಾನಸಿಕ ಒತ್ತಡ ಉಂಟಾಗಿತ್ತು. ಮಂಜರಿಯ ಕಾಗದನ ಫೋಲ್ಡರನ್ನು ಸಾಹೇಬರ ಕ್ಯಾಬಿನ್ನಿನಲ್ಲಿಯ ಟೇಬಲ್ ಮೇಲಿರಿಸಿದೆ. ಅವಿಯ ಹಾಗೂ ನನ್ನ ಫ್ಲಾಪಿಡಿಸ್ಕುಗಳನ್ನು ಬೇರೆ ಬೇರೆ ಎರಡು ಎನ್‌ವಲಪ್‌ಗಳಲ್ಲಿ ಸೇರಿಸಿದೆ. ಕೈ ನಡುಗುತ್ತಿತ್ತು. ತಲೆ ಸಿಡಿಯುತ್ತಿತ್ತು. ಎನ್‌ವ-ಲಪ್ ಮೇಲೆ ಹೇಗೋ ಕೋಡ್ ನಂಬರ್ ಹಾಕಿದೆ. ನಂತರ ನಮ್ಮ ಕ್ಯಾಬಿನ್ನಿಗೆ ಹೋಗಿ ಡಿಸ್ಕುಗಳನ್ನು ಟೇಬಲ್ ಮೇಲೆ ಎಸೆದೆ. ಬಾಗಿಲಿಗೆ ಬೀಗ ಹಾಕಿ ಆಫೀಸಿನಿಂದ ಹೊರಬೀಳುವಾಗ ಒಂದಿಷ್ಟು ಹಗುರಾದಂತೆನಿಸುತ್ತಿತ್ತು. ವಾಚ್‌ಮನ್ 'ವಿಶ್' ಮಾಡಿದ. ಅದನ್ನು ಹಿಂತಿರುಗಿಸುವುದೂ ಸಾಧ್ಯವಾಗಲಿಲ್ಲ.

ಮರುದಿನ ಆಫೀಸಿಗೆ ಬಂದಾಗ ಸಾಕಷ್ಟು ಫ್ರೆಶ್ ಆದಂತೆ ಅನಿಸುತ್ತಿತ್ತು. ಉತ್ಸಾಹವೂ ಉಂಟಾಗಿತ್ತು. ನಿನ್ನೆಯ ಮಾನಸಿಕ ಒತ್ತಡ

ಇವತ್ತು ಎಲ್ಲೋ ಹಾರಿ ಹೋಗಿತ್ತು. ಸಾಹೇಬರ ಕಡೆಗೆ ಎರಡೂ ಡಿಸ್ಕುಗಳನ್ನು ಕಳುಹಿಸಿದೆ. ಬಹುಶಃ ಪ್ರೋಗ್ರಾಂ ಮಾಡುವುದಕ್ಕಾಗಿಯೆ ಇರಬೇಕು. ಜವಾನನ ಮೂಲಕ ಅವಿಗೆ ಒಂದು ಕೆಂಪು ಫೋಲ್ಡರನ್ನು ಸಾಹೇಬರು ಕಳುಹಿಸಿದರು. ಅದು ಅರ್ಜಂಟ್ ಕೂಡ ಇತ್ತೆಂದು ಕಾಣುತ್ತದೆ. ಏಕೆಂದರೆ, ಫೋಲ್ಡರ್ ಮೇಲಿನ 'ನೋಟ್' ನೋಡಿ ಅವಿ ಗಡಿಬಿಡಿಯಿಂದ ಕಂಪ್ಯೂಟರ್ ರೂಮಿಗೆ ಹೋದ. ನನ್ನ ಮನಸ್ಸಿನಲ್ಲಿ ಆನಂದ ಉಕ್ಕುತ್ತಿತ್ತು. ಭಾಗ್ಯರೇಖೆ ಇಂದು ಬೆಳಗುವುದಿತ್ತು. ಅರ್ಧ ಗಂಟೆಯ ನಂತರ ಅವಿ ಹೊರಬಂದ. ಕೈಯಲ್ಲಿ ಏನೂ ಇರಲಿಲ್ಲ. ಮಂಜರಿಯ ಡಿಸ್ಕ್ ಪ್ರೋಗ್ರಾಂ ಮಾಡಿ ಕಳುಹಿಸಿರಬೇಕು. ಇನ್ನು ಸ್ವಲ್ಪ ಕಾಲ ಮಾತ್ರ ಕಾಯಬೇಕಾಗಿತ್ತು.

ಮಧ್ಯಾಹ್ನದ ಸಮಯ ಅವಿಯ ಇಂಟರ್‌ಕಾಮ್ ಕೂಗಿತು. ಆತ ರಿಸೀವರ್ ಎತ್ತಿ, "ಎಸ್. ಸರ್?" ಎಂದ. ಸಾಹೇಬರ ಕರೆ. "ಕಮಿಂಗ್ ಸರ್," ಎಂದು ಅತ್ಯವಸರದಲ್ಲಿ ಸಾಹೇಬರ ಕ್ಯಾಬಿನ್ನಿಗೆ ಓಡಿದ. ಸ್ವಲ್ಪ ಸಮಯದ ನಂತರ ಹಿಂತಿರುಗಿ ಬಂದ. ಮುಖ ಪ್ರಫುಲ್ಲಿತವಾಗಿತ್ತು. ಖುಷಿಯಿಂದ ಶಿಳ್ಳೆ ಹಾಕುತ್ತ ಫೈಲುಗಳನ್ನು ಬಳಿಗೆ ಎಳೆದುಕೊಂಡ.

ಇಂದು ಸಾಹೇಬರು ೪-೩೦ ಕ್ಕೆ ಹೊರಟರು. ಹೋಗುವಾಗ ಅವಿಯ ಕಡೆ ನೋಡಿ ನಕ್ಕಂತೆ ಭಾಸವಾಯಿತು. ಏನು ನಡೆಯುತ್ತಿದೆ ಎಂಬುದೇ ಅರ್ಥವಾಗುತ್ತಿರಲಿಲ್ಲ. ೫-೩೦ ಆಯಿತು. ಅವಿ ಎದ್ದ. "ಪ್ರದ್ಯುಮ್ನ ಹೋಗೋಣಲ್ವ?" ಎಂದ. "ನೀನು ನಡೆ. ನಾನು ಬಂದೆ" ಎನ್ನುತ್ತಿದ್ದಂತೆ ಆತ ಹೊರಟು ಹೋದ.

ಮುಂದೆ ಮೂರು ನಾಲ್ಕು ನಿಮಿಷಗಳಲ್ಲಿ ನಾನೂ ಹೊರಟೆ. ಮೆಟ್ಟಲುಗಳನ್ನು ಇಳಿಯತೊಡಗಿದೆ. ಎದುರುಗಡೆ ರಸ್ತೆಯ ಕಡೆ ಸಹಜವಾಗಿ ಗಮನ ಹೋಯಿತು. ಮತ್ತು...

ಸಾಹೇಬರ ಕಾರಿನಲ್ಲಿ ಮಂಜರಿ ಇದ್ದಳು. ಮಂಜರಿ ತನ್ನ ಕೋಮಲವಾದ ಹಸ್ತವನ್ನು ಅವಿಗಾಗಿ ಮುಂದೆ ಮಾಡಿದಳು.

ಭಾರಿ ಶಾಕ್ ಆಗಿ ತಲೆ ಹೋಳಾದಂತೆ ಅನಿಸಿತು. ಮರುಕ್ಷಣ ಧೈರ್ಯ ಮಾಡಿ, ಹಿಂತಿರುಗಿ ಬಿಲ್ಡಿಂಗ್ ಹೊಕ್ಕೆ. ಯಾರ ಪರಿವೆಯೂ ಮಾಡದೇ ಸಾಹೇಬರ ಕ್ಯಾಬಿನ್ ಹೊಕ್ಕು ಟೇಬಲ್ ಮೇಲಿನ ಮೂರೂ ಡಿಸ್ಕುಗಳನ್ನು ತೆಗೆದುಕೊಂಡು ಕಂಪ್ಯೂಟರ ರೂಮಿಗೆ ಧಾವಿಸಿದೆ. ಸ್ವಿಚ್ ಆನ್ ಮಾಡಿದೆ...ಕೋಡ್ ನಂಬರ್ ನೋಡಿದೆ. ಮಂಜರಿಯ ಡಿಸ್ಕನ್ನು ಡ್ರೈವಿನಲ್ಲಿ ಸೇರಿಸಿದೆ. ನಂತರ ನನ್ನ ಕೋಡ್ ನಂಬರ್ ನೋಡಿದೆ. ಅದರಲ್ಲಿಯ ಡಿಸ್ಕ್ ತೆಗೆದು ಡ್ರೈವಿನಲ್ಲಿ ಸೇರಿಸಿ ಮಶಿನ್ ಆನ್ ಮಾಡಿದೆ. ಸ್ಕ್ರೀನ್ ಮೇಲೆ ದೃಷ್ಟಿ ಇತ್ತು. ಕೆಲವೇ ಕ್ಷಣಗಳಲ್ಲಿ ಸಂಖ್ಯೆ ಬಂತು. '೭೨!' ಕುರ್ಚಿಯಲ್ಲಿ ಸಿಡಿದು ಬಿದ್ದೆ. ಮತ್ತೊಮ್ಮೆ ನನ್ನ ಕೋಡ್ ನಂಬರ್ ನೋಡಿದೆ. ಎನ್‌ವಲಪ್ ಪರೀಕ್ಷಿಸಿದೆ. ಮನಸ್ಸಿನಲ್ಲಿ ಕ್ಷಣಮಾತ್ರದಲ್ಲಿ ಸಂಶಯದ ರೇಖೆ ಮಿಂಚಿ ಮಾಯವಾಯಿತು. ಎರಡನೇ ಎನ್‌ವಲಪ್‌ನಲ್ಲಿಯ ಡಿಸ್ಕ್ ತೆಗೆದೆ. ಅದರ ಮೇಲೆ ಅವಿಯ ಕೋಡ್ ನಂಬರನ್ನು ನನ್ನ ಕೈಯಾರೆ ನಾನೇ ಬರೆದಿದ್ದೆ. ನನ್ನ ಡಿಸ್ಕ್ ತೆಗೆದು ಆ ಜಾಗದಲ್ಲಿ ಈ ಡಿಸ್ಕ್ ಸೇರಿಸಿದೆ. ಮಶಿನ್ ಪ್ರಾರಂಭಿಸಿದೆ. ಸ್ಕ್ರೀನ್ ಮೇಲೆ ಸಂಖ್ಯೆ ಬಂತು. '೭೭!' ಕ್ಷಣಮಾತ್ರದಲ್ಲಿ ಆದ ಸಂಗತಿ ಹೊಳೆಯಿತು. ನಿನ್ನೆ ಗಡಿಬಿಡಿಯಲ್ಲಿ ಅವಿಯ ಡಿಸ್ಕನ್ನು ನನ್ನ ಎನ್‌ವಲಪ್‌ನಲ್ಲೂ ನನ್ನ ಡಿಸ್ಕನ್ನು ಅವಿಯ ಎನ್‌ವಲಪ್‌ನಲ್ಲೂ ಸೇರಿಸಿದ್ದೆ. ಭೂಮಿ ಆದರುತ್ತಿರುವಂತೆ ಅನಿಸಿತು. ನಿಂತಲ್ಲೇ ಕುಸಿದೆ. ❀





# ಉಲುಗ್ ಬೇಗ್

**ಬಂಡು ಕಟ್ಟಿ**

ಸಮರಕಂದ ನಗರದಿಂದ ಉತ್ತರದಿಕ್ಕಿನತ್ತ ಹೋಗುವ ರಸ್ತೆ ತಾಷ್ಕೆಂಟ್ ನಗರವನ್ನು ಸೇರುತ್ತದೆ. ಈ ಶತಮಾನದ ಮೊದಲ ದಶಕಗಳಲ್ಲಿ ಸಮರಕಂದದಲ್ಲಿ ವಾಸಿಸುತ್ತಿದ್ದ ಪ್ರಖ್ಯಾತ ಪುರಾತತ್ವಶಾಸ್ತ್ರಜ್ಞ ವಿಟ್ಕಿನ್. ಪ್ರತಿದಿನವೂ ಅದೇ ರಸ್ತೆಯಲ್ಲಿ ಬೆಳಗಿನ ವಾಕಿಂಗ್‌ಗೆ ಹೋಗುತ್ತಿದ್ದ. ಪ್ರತಿದಿನದಂತೆ ಅಂದೂ ಅತ ಸುತ್ತಲೆಲ್ಲಾ ದೃಷ್ಟಿ ಹರಿಸುತ್ತ ಹೊರಟಿದ್ದ. ಹಿಂದಿನ ರಾತ್ರಿ ಅಲ್ಲೆಲ್ಲ ಭಾರೀ ಮಳೆ ಬಿದ್ದಿತ್ತು. ನಗರದಿಂದ ಸುಮಾರು ಎರಡು ಮೈಲುಗಳಷ್ಟು ದೂರ ಸಾಗಿದ ಆತನಿಗೆ ರಸ್ತೆಯ ಬಲಭಾಗದಲ್ಲಿ ಕೊರಕಲು ನೆಲ ಕಾಣಿಸಿತು. ಏನೋ ಊಹಿಸಿಕೊಂಡ ವಿಟ್ಕಿನ್ ಅಲ್ಲಿಗೆ ಧಾವಿಸಿದ. ಸ್ಥಳವನ್ನು ಪರಿಶೀಲಿಸಿದಾಗ ಆತನ ಅನುಮಾನ ಬಲವಾಯಿತು.

ಸಮರಕಂದಕ್ಕೆ ಬಹು ದೊಡ್ಡ ಇತಿಹಾಸವಿದೆ. ಅನೇಕ ದೊಡ್ಡ ದೊಡ್ಡ ಮನೆತನಗಳು ಇಲ್ಲಿ ಆಳಿವೆ. ಈ ಪೈಕಿ ತೈಮೂರ್ ವಂಶದವರು ಪ್ರಮುಖರು. ಸಮರಕಂದವು ಪುರಾತತ್ವಶಾಸ್ತ್ರಜ್ಞರಿಗೆ ಒಂದು ಭಂಡಾರವಿದ್ದಂತೆ, ಇಲ್ಲಿ ಯಾವುದಾದರೂ ಐತಿಹಾಸಿಕ ಪುರಾವೆ ದೊರಕಬಹುದೆಂಬುದು ವಿಟ್ಕಿನ್ನನ ಊಹೆಯಾಗಿತ್ತು.

ಮಳೆಗಾಲ ಮುಗಿಯುತ್ತಿದ್ದಂತೆ ಉತ್ಖನನವನ್ನು ಪ್ರಾರಂಭಿಸಿದ ವಿಟ್ಕಿನ್ ನಿಜವಾಗಿಯೂ ಭಂಡಾರ ದೊರೆತಷ್ಟೇ ಖುಷಿಪಟ್ಟ. ಸುಮಾರು ೧೨ ಮೀಟರುಗಳಷ್ಟು ಅಗೆದ ನಂತರ, ತಾವು ಕಾರ್ಯಾಚರಣೆ ನಡೆಸುತ್ತಿರುವ ಕಟ್ಟಡ ಅಪೂರ್ಣ ಗೋಲಾಕೃತಿಯ ಮಾದರಿಯ ವೇಧಶಾಲೆ ಎನ್ನುವುದು ಕೆಲಸಗಾರರಿಗೆ ಮನವರಿಕೆಯಾಯಿತು. ಹಿಂದೆ ಈ ವೇಧಶಾಲೆಯನ್ನು ನಕ್ಷತ್ರ-ವೀಕ್ಷಣೆಗೆ ಬಳಸಲಾಗುತ್ತಿತ್ತು.

ಹದಿನೈದನೇ ಶತಮಾನದಲ್ಲಿ ನಿರ್ಮಿಸಲಾದ ಈ ವೇಧಶಾಲೆಯ ಕಾರಣಕರ್ತೃ ಮಿರ್ಜಾ ಉಲುಗ್ ಬೇಗ್. ಭೌತಶಾಸ್ತ್ರ ಮತ್ತು ಖಗೋಳಶಾಸ್ತ್ರಗಳಲ್ಲಿ ಅಪ್ರತಿಮ ಪಾಂಡಿತ್ಯವುಳ್ಳ ಉಲುಗ್ ಬೇಗ್, ಸಮರಕಂದದ ಸುಪ್ರಸಿದ್ಧ ರಾಜಮನೆತನವಾದ ತೈಮೂರ್ ವಂಶದವನು.

ಉಲುಗ್ ಬೇಗ್ ಜನಿಸಿದ್ದು ೧೩೯೪ನೇ ಇಸ್ವಿಯಲ್ಲಿ. ಆಗ ಸಮರಕಂದವನ್ನು ಉಲುಗ್ ಬೇಗ್‌ನ ತಾತ ತೈಮೂರ್ ಆಳುತ್ತಿದ್ದ. ತೈಮೂರ್ ಕುಂಟನಾಗಿದ್ದರೂ ಶೂರ ಯೋಧನೂ ಉತ್ತಮ ಆಡಳಿತಗಾರನೂ ಆಗಿದ್ದ. ಮುಲ್ತಾನಿನ ಮೂಲಕ ಬಂದು ದಿಲ್ಲಿಯನ್ನೂ ಗೆದ್ದುಕೊಂಡಿದ್ದ. ೧೩೯೯ರಲ್ಲಿ ಬಿಜರಖಾನನೆಂಬ ಆಡಳಿತಾಧಿಕಾರಿಯನ್ನು ದಿಲ್ಲಿಯಲ್ಲಿ ನಿಯಮಿಸಿ ಸಮರಕಂದಕ್ಕೆ ಮರಳಿ ಹೋಗುವಾಗ ತೈಮೂರ ಭಾರತದ ಅನೇಕ ಕಲಾವಿದರನ್ನೂ ಸಾಹಿತಿಗಳನ್ನೂ ತನ್ನ ಜೊತೆಗೆ ಕರೆದೊಯ್ದು ಎಂದು ಹೇಳಲಾಗುತ್ತಿದೆ.

ಉಲುಗ್ ಬೇಗ್ ಜನಿಸಿದ ಮುಹೂರ್ತ ತನಗೆ ಅತ್ಯಂತ ಶುಭಕಾರವಾಗಿದೆಯೆಂದು

ತೈಮೂರ್ ನಂಬಿದ್ದ. ಆತನ ಪ್ರಜೆಗಳೂ ಹಾಗೆ ನಂಬಿದ್ದರು. ಆದರೆ ಒಂದು ಮಾತಂತೂ ನಿಜ, ಉಲುಗ್ ಬೇಗ್ ತನ್ನ ಪರೋಪಕಾರಿ ಹಾಗೂ ದಯಾಮಯ ಗುಣಗಳಿಂದ ಜನರ ಒಲವನ್ನು ಶೀಘ್ರವಾಗಿ ಗಳಿಸಿಕೊಂಡ. ಈತನ ಕಾವ್ಯಮಯ ಜೀವನ, ತೀಕ್ಷ್ಣ ಗ್ರಹಣಶಕ್ತಿಗಳು ಎಂಥವರನ್ನೂ ಆಕರ್ಷಿಸುತ್ತಿದ್ದವು.

೧೪೧೩ರಲ್ಲಿ ತೈಮೂರ್ ಮರಣಹೊಂದಿದ ನಂತರ ಉಲುಗ್ ಬೇಗ್ ತನ್ನ ಹತ್ತೊಂಬತ್ತನೆಯ ವಯಸ್ಸಿನಲ್ಲಿ ಸಮರಕಂದದ ಸಿಂಹಾಸನವನ್ನು ಏರಿದ.

ಪ್ರಾರಂಭದ ವರ್ಷಗಳಲ್ಲಿ ಉಲುಗ್ ಬೇಗ್ ಅನೇಕ ತೊಂದರೆಗಳನ್ನು ಎದುರಿಸಬೇಕಾಗಿ ಬಂತು. ಆದರೆ ತನ್ನ ಅನುಪಮ ಬುದ್ಧಿಮತ್ತೆಯಿಂದ ಅವುಗಳನ್ನೆಲ್ಲಾ ನಿರಾಯಾಸವಾಗಿ ಎದುರಿಸಿದ. ನಂತರದ ದಿನಗಳಲ್ಲಿ ಇತಿಹಾಸ, ಖಗೋಲಶಾಸ್ತ್ರ ಗಣಿತಶಾಸ್ತ್ರಗಳ ಬಗೆಗೆ ಒಲವನ್ನು ಹೆಚ್ಚಿಸಿಕೊಂಡ.

ಆ ಕಾಲಕ್ಕೆ ಕ್ರಾಂತಿಕಾರಿ ಎನ್ನಿಸಬಹುದಾದ ಒಂದು ಅಧ್ಯಯನ ಪೀಠವನ್ನು ಉಲುಗ್ ಬೇಗ್ ಪ್ರಾರಂಭಿಸಿದ್ದ. ಸಾಂಪ್ರದಾಯಿಕ ವಿಷಯಗಳನ್ನಲ್ಲದೇ ಭೌತಶಾಸ್ತ್ರ, ಖಗೋಲಶಾಸ್ತ್ರ, ಗಣಿತಶಾಸ್ತ್ರ, ಭಾಷಾಶಾಸ್ತ್ರಗಳಂಥ ಅನೇಕ ವಿಷಯಗಳನ್ನು ಇಲ್ಲಿ ಅಭ್ಯಸಿಸಬಹುದಾಗಿತ್ತು. ಉಲುಗ್ ಬೇಗನಿಗೆ ಖಗೋಲಶಾಸ್ತ್ರದಲ್ಲಿ ಅಪಾರ ಜ್ಞಾನವಿತ್ತು. "ಜಿರ್ಷ್" ಎನ್ನುವ ಒಂದು ಅಪೂರ್ವ ಹೊತ್ತಿಗೆಯನ್ನು ಅವನು ಸಿದ್ಧಪಡಿಸಿದ್ದ. ಈ ಹೊತ್ತಿಗೆಯಲ್ಲಿ ಪಂಚಾಂಗ ಗಣಿತ, ಭವಿಷ್ಯ ಗಣಿತಗಳ ವಿವರವಾದ ವಿಧಾನಗಳಿವೆ. ಅಲ್ಲದೇ ನಕ್ಷತ್ರಗಳ ಸಾಪೇಕ್ಷ ಸ್ಥಾನಗಳ ಪಟ್ಟಿ ಹಾಗೂ ಆಕಾಶಕಾಯಗಳ ಒಗ್ಗೆ ವಿವಿಧ ಮಾಹಿತಿಗಳನ್ನೂ ಉಲುಗ್ ಬೇಗ್ ದೊರಕಿಸಿ ಕೊಡುತ್ತಾನೆ. ಈ ಹೊತ್ತಿಗೆಯನ್ನು ತಯಾರಿಸಲು ಪುಮಿ, ಖಾಸಿ ಮತ್ತು ಮಹಮ್ಮದ ಕುಶಿ ಎಂಬ ತಜ್ಞರ ಸಹಾಯವನ್ನಾತ ಪಡೆದಿದ್ದ.

ವಿಜ್ಞಾನಕ್ಕೆ ಮಹತ್ವದ ಕೊಡುಗೆಯೊಂದನ್ನು ನೀಡಬೇಕೆನ್ನುವ ತುಡಿತ ಉಲುಗ್ ಬೇಗ್‌ನಲ್ಲಿ ಮೊದಲಿನಿಂದಲೂ ಇತ್ತು. 'ಜಿರ್ಷ್' ಬರೆದ ಮೇಲೆ ಈ ತುಡಿತ ಇನ್ನೂ ಜಾಸ್ತಿಯಾಯಿತು. ಈ ಮಹತ್ವಾಕಾಂಕ್ಷೆಯ ಫಲವೇ ಉಲುಗ್ ಬೇಗ್‌ನ ವೇಧಶಾಲೆ. ಭಾಗಶಃ ಗೋಲಾಕೃತಿಯ ಈ ವೇಧಶಾಲೆಯಲ್ಲಿ ಎದುರುಬದಿರಾಗಿ ನಿಲ್ಲಿಸಿದ ಅಮೃತಶಿಲೆಯ ಎರಡು ಕಮಾನುಗಳಿವೆ. ಆ ಕಾಲದ ಅದ್ಭುತವೆನಿಸಿದ ಈ ವೇಧಶಾಲೆ ಅಪೂರ್ವವಾದದ್ದು.

ಉಲುಗ್ ಬೇಗ್‌ನ ಅವಿರತ ಚಟುವಟಿಕೆಗಳು ಆಡಳಿತವನ್ನು ನಡೆಸುವಲ್ಲಿ ಅಡ್ಡಿಯಾಗ ತೊಡಗಿದವು. ಹೀಗಾಗಿ ಸಮಯಸಾಧಕರು ಹುಟ್ಟಿಕೊಳ್ಳತೊಡಗಿದರು. ಅವರು ಮಗನನ್ನೇ ತಂದೆಯ ವಿರುದ್ಧ ಎತ್ತಿಕಟ್ಟಿದರು.

೧೪೪೯ರ ಒಂದು ದಿನ ಉಲುಗ್ ಬೇಗ್ ಅಧ್ಯಯನದಲ್ಲಿ ತಲ್ಲೀನನಾಗಿದ್ದ ಸಮಯದಲ್ಲಿ ಕೆಲವರು ಹಿಂದಿನಿಂದ ಬಂದು ಆತನನ್ನು ಕೊಲೆ ಮಾಡಿದರು. ಅಧ್ಯಯನಪೀಠವನ್ನು ಮುಚ್ಚಿದರು, ವೇಧಶಾಲೆಯನ್ನು ಹಾಳುಗೆಡವಿದರು. 'ಜಿರ್ಷ್'ದ ಪ್ರತಿಗಳನ್ನು ಸುಡಲಾಯಿತು. ಉಲುಗ್ ಬೇಗ್‌ನ ನಂಬುಗೆಯ ಸೇವಕರನ್ನು ಕೊಂದುಹಾಕಿದರು. ಕೆಲವರು ದೇಶಭ್ರಷ್ಟರಾದರು. ಹೀಗೆ ತುರ್ಕಸ್ತಾನಕ್ಕೆ ಓಡಿ ಹೋದವರಲ್ಲಿ ಮಹಮ್ಮದ ಕುಶಿ ಎನ್ನುವ ಖಗೋಲಶಾಸ್ತ್ರಜ್ಞನೂ ಒಬ್ಬ. ಆತ ಉಲುಗ್ ಬೇಗ್‌ನ ಆಪ್ತ ಸಹಾಯಕನಾಗಿದ್ದ. "ಜಿರುಷ್" ಬಹುಪಾಲು ಇವನ ಸಹಾಯದಿಂದಲೇ ತಯಾರಾದದ್ದು. ಆ ದೇಶಕ್ಕೆ ಹೋಗುವಾಗ ಮಹಮ್ಮದ ಕುಶಿ ತನ್ನ ಜೊತೆಗೆ 'ಜಿರ್ಷ್ ಮೂಲ ಪ್ರತಿಯನ್ನು ಗೌಪ್ಯವಾಗಿ ಒಯ್ದಿದ್ದರಿಂದ ನಮಗೆ ಅಲಭ್ಯವಾಗಬಹುದಾಗಿದ್ದ ಒಂದು ಅಪೂರ್ವ ಗ್ರಂಥ ಉಳಿಯಿತು. ನಂತರದ ದಿನಗಳಲ್ಲಿ ಜಗತ್ತಿನ ಅನೇಕ ಭಾಷೆಗಳಿಗೆ ಇದು ತರ್ಜುಮೆಗೊಂಡಿತು.

ಉಲುಗ್ ಬೇಗ್ ತನ್ನ ಹೆಸರನ್ನು ಅಜರಾಮರವಾಗಿಸುವ ಉದ್ದೇಶದಿಂದ ಯಾವ ಕೆಲಸವನ್ನೂ ಮಾಡಲಿಲ್ಲ. ಮುಂದಿನ ಪೀಳಿಗೆಗೆ ವಿಜ್ಞಾನದ ದಾರಿಯಲ್ಲಿ ತಾನೊಂದು ಕೈಮರವಾದರೆ ಸಾಕು, ಎನ್ನುವ ವಿನಮ್ರ ಭಾವ ಮಾತ್ರ ಅವನಲ್ಲಿತ್ತು. ✲

ಪುಸ್ತಕ ವಿಭಾಗ

# ಸ್ಮೃತಿಯಲ್ಲಿ ಸಿಕ್ಕಿದ್ದು



ಹೋದಿನಕೆರೆ ಸೀತಾರಾಮ ಜೋಯಿಸ

ಸಂಗ್ರಹ: ರಮೇಶ ಚಂದ್ರ

# ಸ್ಮೃತಿಯಲ್ಲಿ ಸಿಕ್ಕಷ್ಟು

೧೯೨೯ ರಿಂದ ೧೯೬೧ರ ವರೆಗೆ ಮೋಜಣಿದಾರರಾಗಿ ಕೆಲಸಮಾಡಿದವರು ಶ್ರೀಯುತ ತೋವಿನಕೆರೆ ಸೀತಾರಾಮ ಜೋಯಿಸರು. ಅವರು ತಮ್ಮ ಸೇವಾವಧಿಯಲ್ಲಿ ಕಂಡುಂಡ ಅನುಭವಗಳಲ್ಲಿ ಸಿಹಿ ಕಹಿ ಎರಡೂ ಇವೆ. ಪ್ರತಿಯೊಂದನ್ನೂ ಗಮನವಿಟ್ಟು, ಗಮ್ಮತ್ತು ಪಟ್ಟು ವೀಕ್ಷಿಸಿದವರವರು. ಸಾಹಿತ್ಯಾಸಕ್ತಿಯುಳ್ಳ ಅವರು ಜೊತೆಜೊತೆಗೆ ೧೯೨೮-೩೨ರ ನಡುವೆ ಶ್ರೀಮತಿ ಕಲ್ಯಾಣಮ್ಮನವರ 'ಸರಸ್ವತಿ' ಪತ್ರಿಕೆಯ ಸಹಾಯಕ ಸಂಪಾದಕರಾಗಿಯೂ ಸೇವೆ ಸಲ್ಲಿಸಿದರು. 'ಜಯಕರ್ನಾಟಕ'ದಲ್ಲಿ ಅವರ ಕೆಲ ಬರೆಹಗಳು ಬೆಳಕುಕಂಡಿವೆ ಜೋಯಿಸರ ಶೈಲಿಯನ್ನು ಪರಿಚಯಿಸಿದ 'ಮೋಜಣಿದಾರನ ಮೆಲಕಾಡುಗಳು' ೧೯೮೪ರ ಮಾರ್ಚ್ ಸಂಚಿಕೆಯಲ್ಲೂ, 'ಗಾಜಿನ ಗೊಂಬೆ' ೧೯೮೫ರ ನವೆಂಬರ್ ಸಂಚಿಕೆಯಲ್ಲೂ ಪ್ರಕಟವಾಗಿವೆ. ಈಗ ಜೋಯಿಸರ 'ಸ್ಮೃತಿಯಲ್ಲಿ ಸಿಕ್ಕಷ್ಟು' ಆಯ್ದು ನಿಮಗಾಗಿ ನೀಡಿದ್ದೇವೆ.

ಆಗ ೧೯೩೦-೩೧ ನೆಯ ವರ್ಷ. ಆಗಿನ ಮೈಸೂರು ಆಡಳಿತ ಮಹಾರಾಜರಿಗೇ ಸೇರಿತ್ತು. ಭಾರತ ಸರಕಾರವು ಬ್ರಿಟಿಶರ ಅಧೀನದಲ್ಲಿತ್ತು. ಅಂದಿನ ಚಕ್ರವರ್ತಿಯ ಪ್ರತಿನಿಧಿಯಾಗಿದ್ದ ಲಾರ್ಡ್ ಇರವಿನ್ ಸಾಹೇಬರು ಮೈಸೂರು ರಾಜ್ಯಕ್ಕೆ ಬರುವ ಕಾರ್ಯಕ್ರಮ ಇದ್ದಿತು. ಬ್ರಿಟಿಶ್ ಪ್ರತಿನಿಧಿಯು ರಾಜ್ಯಕ್ಕೆ ಬರುವುದೆಂದರೆ ಅದೊಂದು ವಿಶೇಷ ಪ್ರಸಂಗವೇ. ಅವರು ಇಲ್ಲಿ ನೋಡಬೇಕಾದ ಸ್ಥಳಗಳಾವುವು, ಅವರ ಮನರಂಜನೆಗಾಗಿ ನಡೆಯಬೇಕಾದ ಕಾರ್ಯಕ್ರಮಗಳೇನು, ಊಟ—ವಸತಿಗಳ ಏರ್ಪಾಡು ಹೇಗೆ, ಇತ್ಯಾದಿಗಳ ವ್ಯವಸ್ಥೆಗಾಗಿ ದಿವಾನರಿಂದ ಮೊದಲುಗೊಂಡು ಎಲ್ಲ ಇಲಾಖೆಗಳ ಮುಖ್ಯಸ್ಥರಿಗೂ ತಲೆ ನೋವು. ಬೆಂಗಳೂರು, ಮೈಸೂರು ಮುಂತಾದ ನಗರಗಳಲ್ಲಿ ರಾಜಪ್ರತಿನಿಧಿಗೆ ಮೆರವಣಿಗೆ, ಔತಣಕೂಟಗಳು, ನೃತ್ಯ, ನಾಟ್ಯ, ಸಂಗೀತ, ನಾಟಕಗಳ ಏರ್ಪಾಡು ಸಾಮಾನ್ಯವಾಗಿದ್ದರೆ ಮೈಸೂರು ಅರಮನೆಯ ಕಾರ್ಯಕ್ರಮವೇ ಒಂದು ವೈಶಿಷ್ಟ್ಯವಾಗಿತ್ತು. ಮೈಸೂರು ಅಂದಿನ ರಾಜಧಾನಿಯಾಗಿದ್ದರಿಂದ ನಗರದ ದರ್ಶನ, ಐತಿಹಾಸಿಕ ಸ್ಥಳ, ದೇವಾಲಯಗಳು, ಕಲಾಕ್ಷೇತ್ರಕ್ಕೆ ಭೇಟಿ ಇವೆಲ್ಲವೂ ಏರ್ಪಟಾಗಿದ್ದವು. ಇವಕ್ಕಾಗಿ ಪೋಲೀಸ್ ಮತ್ತು ಸೈನ್ಯದ ನೆರವನ್ನು ಪಡೆಯಲಾಗುತ್ತಿತ್ತು.

ಹೊರಗಿನಿಂದ ಬಂದ ಗಣ್ಯ ಅತಿಥಿಗಳಿಗೆ ಮೈಸೂರು ಸರಕಾರ ಏರ್ಪಡಿಸುತ್ತಿದ್ದ 'ಖೆಡ್ಡಾ' ಕಾರ್ಯಕ್ರಮ ಅತ್ಯಂತ ಆಕರ್ಷಣೀಯವಾಗಿರುತ್ತಿತ್ತು. ಶ್ರೀಮನ್ ಮಹಾರಾಜರು, ಅರಮನೆಯ ಅಧಿಕಾರಿಗಳು, ದಿವಾನರು ಮತ್ತು ಎಲ್ಲ

ಅಧಿಕಾರಿಗಳು ಮುಂದಾಗಿ ಇದರ ಮೇಲ್ವಿಚಾರಣೆ ನಡೆಸುತ್ತಿದ್ದರು. ನಗರವನ್ನು ಶೃಂಗರಿಸುವುದರ ಜೊತೆಗೇ ಅತಿಥಿಗಳು 'ಅರಣ್ಯ ವೈಭವ'ವನ್ನು ನೋಡಿ ಸಂತೋಷಪಡಲೆಂದು ಅರಣ್ಯಗಳ ಸೊಬಗನ್ನು ಇಮ್ಮಡಿಗೊಳಿಸುವುದಕ್ಕಾಗಿ 'ಸ್ಪೆಶಲ್ ಸ್ಟಾಫ್' ಎಂಬ ಅಧಿಕಾರಿಗಳ ಗುಂಪೇ ಇತ್ತು. ಇಂಥ ಗುಂಪುಗಳಲ್ಲಿ ಬಡ ಪ್ರಾಣಿಯಾದ ನಾನೂ ಸೇರಿದ್ದೆ. ಆ ಕಾಲದಲ್ಲಿ ಸರಕಾರದ ಎಲ್ಲ ಇಲಾಖೆಯ ಜನರಿಗೂ ಅಡವಿಯಲ್ಲಿ ಪ್ರತ್ಯೇಕವಾದ ಕೆಲಸಗಳು ನೇಮಕವಾಗಿದ್ದವು. ದಿನವೂ ನಾವು ಮಾಡಿ ಮುಗಿಸಿದ ಬಗ್ಗೆ ದಿನಚರಿಯನ್ನು ಬರೆಯಬೇಕಾಗಿತ್ತು. ನಮ್ಮ ರಕ್ಷಣೆಗಾಗಿ ಕೆಲವು ನಿಯಮಗಳನ್ನು ಪಾಲಿಸಲೇಬೇಕಾಗಿತ್ತು. ಕಾಡಾನೆಗಳು ಸಂಚರಿಸುವ ಸಮಯವಾದ ಬೆಳಗಿನ ಜಾವ ಮತ್ತು ಸಂಜೆಯ ನಂತರ, ನಾವು ಬಿಳಿಯ ಉಡುಪು ಧರಿಸಿ ಅಡ್ಡಾಡಬಾರದು, ಗುಡಾರಗಳಿಗೆ ಬೇರೆ ಬೇರೆ ಬಣ್ಣ ಹಾಕಿಸಬಾರದು ಎಂಬುದು ಮುಖ್ಯವಾಗಿತ್ತು. ಸಾವಿರಾರು ಜನರು ಎಡಬಿಡದೇ ಕೆಲಸ ಮಾಡುತ್ತಿದ್ದೆವು. ಹಗಲಿನಲ್ಲಿ ಭಯವಿರಲಿಲ್ಲ. ಇಂದಿನಂತೆ ಅಂದು ಸುಧಾರಿತ ಬಂಗಲೆಗಳಾಗಲೀ, ಶೆಡ್ಡುಗಳಾಗಲಿ ಇರಲಿಲ್ಲ. ಮುಖ್ಯ ರಸ್ತೆಗಳಲ್ಲದೆ ವೈಸ್‌ರಾಯರ ಜೊತೆಗೂಡಿ ಬರುವ ಬಿಳಿಯ ಜನರ ವಿಹಾರಕ್ಕೆಂದು ಮರಗಿಡಗಳು ಸೊಂಪಾಗಿ ಪ್ರಕೃತಿಯ ಸೊಬಗು ಸೂಸುತ್ತಿದ್ದ ಪ್ರದೇಶಗಳಲ್ಲೆಲ್ಲ 'ರಿಂಗ್ ರೋಡು'ಗಳನ್ನೂ ನೆರಳಿರುವ ಕಡೆಗಳಲ್ಲಿ ತಕ್ಕ ಆಸನಗಳನ್ನೂ, ಕಟ್ಟಡಗಳಿಗೆ ಸುಣ್ಣ ಬಣ್ಣಗಳ ವ್ಯವಸ್ಥೆಯನ್ನೂ ಮಾಡಲಾಗುತ್ತಿತ್ತು.

ಆನೆಗಳನ್ನು ಹಿಡಿಯಲು ಮಾಡಬೇಕಾದ ಕೆಲಸವನ್ನೆಲ್ಲ ಸೋಲಿಗರ ಸಹಾಯದಿಂದ ಅರಣ್ಯ ಇಲಾಖೆಯವರೇ ಮಾಡಿಸುತ್ತಿದ್ದರು. ರಾಕ್ಷಸಾಕಾರವಾಗಿ ಬೆಳೆದ ಮರಗಳ ಮೇಲೆ ಸೋಲಿಗರ ನೆರವಿನಿಂದ ಅಟ್ಟಣೆಗಳನ್ನು ಕಟ್ಟಿಸುತ್ತಿದ್ದೆವು. ಆಗ ಹುಣಸೂರು ಹೆಗ್ಗಡದೇವನಕೋಟೆ, ಪಿರಿಯಾಪಟ್ಟಣದ ಉಪ ತಾಲೂಕುಗಳನ್ನು ಒಳಗೊಂಡ ರೆವಿನ್ಯೂ ಸರ್ವೆಯ ಅಧಿಕಾರಿ ನಾನೊಬ್ಬನೆ.

ಹತ್ತಿರದ ಹಳ್ಳಿಯ ಜನರು ಕೆಲಸದಲ್ಲಿ ಪಾಲ್ಗೊಳ್ಳಲೆಂದೋ, ನೋಡಲೆಂದೋ ಮೇಲಿಂದ ಮೇಲೆ ಬರುತ್ತಿದ್ದರು. ಅದರಲ್ಲಿ ಹಿರಿಯ ಮಾಜಿ ಪಟೇಲ ಗುಂಡಪ್ಪಗೌಡನೂ ಒಬ್ಬ. ಈ ವರೆಗೆ ಇಂಥ ಅನೇಕ ಖೆಡ್ಡಾಗಳನ್ನು ನೋಡಿ ಪಾಲ್ಗೊಂಡ ಹುಬ್ಬರಿ. ಅವನು ಪ್ರಾಯದಲ್ಲಿ ಬೇಟೆಗಾರನೂ ಹೌದು. ಬಿಡುವಿನ ಸಮಯದಲ್ಲಿ ಶಿಕಾರಿಯ ಪ್ರಸಂಗಗಳನ್ನೂ, ಹಾಸ್ಯ ಪ್ರಸಂಗಗಳನ್ನೂ ಹೇಳಿ ನಮ್ಮನ್ನೆಲ್ಲ ರಂಜಿಸುತ್ತಿದ್ದ. ಆತ ಹೇಳುತ್ತಿದ್ದ ಕೆಲವು ಕಥೆಗಳು ಭಯಂಕರವಾಗಿಯೂ, ಒಬ್ಬರೇ ಇದ್ದಾಗ ನೆನಪಿಗೆ ಬಂದು ಎದೆ ನಡುಗಿಸುವಂಥವೂ ಆಗಿದ್ದವು. ಅವನು ಹೇಳಿದ ಒಂದು ಸಾಹಸದ ಪ್ರಸಂಗ ಹೀಗಿತ್ತು:

ಒಂದು ದಿನ ಮಹಾರಾಜರೂ, ಅವರ ಆಪ್ತರೂ ಹೊರ ನಾಡಿನಿಂದ ಬಂದವರೊಡಗೂಡಿ ಹೋಗಿ ಬೇಟೆಯಾಡುವ ಏರ್ಪಾಡಾಗಿತ್ತು. ಶಿಕಾರಿಯ ಎಲ್ಲಾ ಏರ್ಪಾಡು ಹೊಣೆ ಮಾಜಿ ಪಟೇಲ ಗುಂಡಪ್ಪಗೌಡನದಾಗಿತ್ತಂತೆ. ಮೃಗಗಳು ಎಲ್ಲಿರುತ್ತವೆ ಎಂಬುದನ್ನೂ ಮುಂದಾಗಿಯೇ ತಿಳಿದುಕೊಂಡು ಮೃಗಯಾ ವಿಹಾರಿಗಳಿಗೆ ತಿಳಿಸುವುದೂ ಆತನ ಜವಾಬ್ದಾರಿಯೆ. ಅವನ ಹಳ್ಳಿಯ ಬಳಿಯಲ್ಲಿ ಗುಡ್ಡಗಳಿಂದ, ಬಂಡೆಗಳಿಂದ ತುಂಬಿದ 'ಗುಡ್ಡದ ಹಾಳು' ಎಂಬ ಸ್ಥಳವಿದೆ. ಈ ಗುಡ್ಡಗಳಲ್ಲಿ ಅನೇಕ ಗವಿಗಳುಂಟು. ಈ ಗವಿಗಳಲ್ಲಿ ಚಿರತೆ, ಕಿರುಬ ಮೊದಲಾದವು ಹಗಲಲ್ಲಿ ಅಡಗಿದ್ದು ರಾತ್ರಿ ಸಂಚಾರಕ್ಕೆ ಹೊರಡುತ್ತವೆ.

ಶಿಕಾರಿ ತಂಡದವರಿಗೆ ಗುಂಡಪ್ಪ ಗವಿಗಳನ್ನು ತೋರಿಸಿದ. ತಂಡದ ಜೊತೆಯಲ್ಲಿ ತಮ್ಮಟೆಯವರೂ ಕಹಳೆಯವರೂ ಇದ್ದರು. ಅಪಾಯ ಬಂದಾಗ ಇವರು ವಾದ್ಯಗಳನ್ನು ಮೊಳಗಿಸಿ, ಮೃಗಕ್ಕೆ ಗಾಬರಿ ಉಂಟುಮಾಡುತ್ತಾರೆ. ಇವರೆಲ್ಲ ನೆಲದ ಮೇಲೆ ನಿಂತಿದ್ದರೆ ಗುರಿಕಾರರು ಮಾತ್ರ ಕುದುರೆಯ ಮೇಲೆ ಕುಳಿತು ಬೇಟೆ ಆಡುತ್ತಾರೆ. ಮೃಗವನ್ನು ಒಂದೇ ಏಟಿಗೆ ಹೊಡೆದು ಕೊಂಡವರಿಗೆ 'ಖಿಲ್ಲತ್ತು'.

ತಂಡದಲ್ಲಿದವರು "ಮೃಗವನ್ನು ತೋರಿಸು"

ಎಂದರು. "ಅದೇನು ತಾನಾಗಿಯೇ ಎಲ್ಲಿಯಾದರೂ ಬರುತ್ತದೆಯೇ? ಗವಿಯಲ್ಲಿ ಬಿದ್ದಿರುತ್ತದೆ. ಗುಂಡಿನಿಂದ ಉಡಾಯಿಸಿ ಎಬ್ಬಿಸಬೇಕು. ಆಗ ಮೃಗವು ಹೊರಕ್ಕೆ ನೆಗೆದು, ಹೆದರಿ ಪಲಾಯನ ಮಾಡಿದರೂ ಮಾಡಬಹುದು, ಇಲ್ಲವೆ ರೋಷದಿಂದ ಗುರಿ ಇಟ್ಟವರ ಕಡೆಯೇ ಹಾರಿ ಬರಬಹುದು. ಆಗ ಕೈ ಚಳಕದಿಂದ ಗುರಿ ಇಟ್ಟು ಗುಂಡು ಹಾರಿಸುವುದೇ ಬೇಟೆಗಾರನ ಬುದ್ಧಿವಂತಿಕೆ" ಎಂದ ಗುಂಡಪ್ಪ.

"ಹಾಗೆಯೇ ಆಗಲಿ. ಗುಂಡು ಹಾರಿಸು, ಮೃಗವನ್ನು ಎಬ್ಬಿಸು" ಎಂದು ಗುಂಡಪ್ಪನಿಗೆ ಅಪ್ಪಣೆಯಾಯಿತು.

ಗುಂಡಪ್ಪ ಎರಡು ಮೂರು ಗುಂಡುಗಳನ್ನು ಹಾರಿಸುತ್ತಿದ್ದ ಹಾಗೆಯೇ ಗವಿಯಿಂದ ಚಿರತೆಯೊಂದು ಆರ್ಭಟಿಸುತ್ತ ಹೊಗೆ ಬಂದ ದಿಕ್ಕಿಗೆ ನೆಗೆದು ಬಂತು. ತಮ್ಮಟೆ, ಕಹಳೆಗಳು ಮೊಳಗಿದುವು. ಚಿರತೆ ರಭಸದಿಂದ ಕುದುರೆಗಳೆಡೆ ಎರಗಿತು. ಸವಾರರು ಅಪಾಯದಿಂದ ಪಾರಾಗಲು ಕುದುರೆಗಳನ್ನು ಅತ್ತ ಇತ್ತ ಓಡಿಸಿದರು. ಗುರಿಕಾರರೆಲ್ಲ ಗುಂಡು ಹಾರಿಸಿದರು. ಆದರೆ ಗುರಿ ಸರಿಯಾಗಲಿಲ್ಲ. ಹೀಗಾಗಿ ಚಿರತೆ ತನ್ನ ಗುಹೆಗೇ ಹಿಂದಿರುಗಿ ಓಡಿಬಿಟ್ಟಿತು.

ಕೈಗೆ ಸಿಕ್ಕ ಬೇಟೆಯನ್ನು ಹೊಡೆಯಲಾರದೇ ಬಿಟ್ಟ ಗುರಿಕಾರರ ಮೇಲೆ ಗುಂಡಪ್ಪನಿಗೆ ರೋಷ ಉಕ್ಕಿ ಬಂತು. ಅವನ ಬಂದೂಕಿನಲ್ಲಿ ಗುಂಡುಗಳೆಲ್ಲ ತೀರಿದ್ದುವು. ಹಿಂದೆ ಮುಂದೆ ನೋಡದೆ ಮೃಗದ ಹಿಂದೆ ಆ ಗವಿಯೊಳಗೆ ತಾನೂ ನುಗ್ಗಿಬಿಟ್ಟ. ಕತ್ತಲೆಯಲ್ಲಿ ಮೃಗದ ಕಣ್ಣುಗಳು ಹೊಳೆಯುತ್ತಿದ್ದುವು. ಭಯದಿಂದ ಆ ಮೃಗ ನಡುಗುತ್ತಿತ್ತು. ಗುಂಡಪ್ಪ ಚಿರತೆಯ ಮೇಲೆ ಬಿದ್ದು ಅದರ ಎರಡು ಕಿವಿಗಳನ್ನೂ ಹಿಡಿದು ದರದರನೆ ಎಳೆದುಕೊಂಡೇ ಬಂದು ಬಿಟ್ಟ. ಚಿರತೆ ತನ್ನನ್ನು ಕಚ್ಚಿ, ಪರಚಿ ಗಾಯಗೊಳಿಸಿದರೂ ಲೆಕ್ಕಿಸಲಿಲ್ಲ.

ಗುಂಡಪ್ಪನ ಸಾಹಸಕ್ಕೆ ಗುರಿಕಾರರೆಲ್ಲ ಮೆಚ್ಚಿದರಾದರೂ, ಆತನಿಗೆ ತಗಲೀತೆಂದು ಹೆದರಿ ಗುಂಡು ಹಾರಿಸಲೇ ಇಲ್ಲ. ಈ ಬಾರಿ ಆ ಮೃಗ ತಪ್ಪಿಸಿಕೊಂಡು ಗುಡ್ಡದಲ್ಲಿ ಮರೆಯಾಗಿ ಹೋಯಿತು. ಆದರೆ ಗುಂಡಪ್ಪನ ಶೌರ್ಯಕ್ಕೆ ಮೆಚ್ಚಿದ ದೊರೆಗಳಿಂದ ಖಿಲ್ಲತ್ತು, ಬಹುಮಾನ ದೊರೆತವು.

ಇಂಥ ಅನೇಕ ಸ್ವಾರಸ್ಯದ ಕಥೆಗಳನ್ನು ಗುಂಡಪ್ಪ ಹೇಳುತ್ತಿದ್ದರೆ ಕೇಳುವವರು ಬಾಯಿ ಬಿಟ್ಟುಕೊಂಡು ಕೇಳುತ್ತಿದ್ದರು.

ಒಂದು ದಿನ ಕೈಯಲ್ಲಿ ಒಂದು ಕೋವಿ ಹಿಡಿದ ಬಿಳಿಯನೊಬ್ಬ ನಮ್ಮ ಕಡೆ ಬಂದ. ಅವನಿಗೆ ಯಾವುದಾದರೂ ಕ್ರೂರ ಪ್ರಾಣಿಯ ಬೇಟೆಯಾಡುವ ಚಪಲ ಬಂದಿತ್ತು. "ನನಗೊಂದು ಶಿಕಾರಿ ಬೇಕು. ತೋರಿಸಿದರೆ ಐದು ರೂಪಾಯಿ ಇನಾಮು ಕೊಡುತ್ತೇನೆ" ಎಂದ. ನನಗೆ ಈ ವಿದ್ಯೆಗಳು ಗೊತ್ತಿರಲಿಲ್ಲ. ಆದ್ದರಿಂದ ಅಲ್ಲೇ ಕೆಲಸ ಮಾಡುತ್ತಿದ್ದ ಭೀಮಗ ಎಂಬುವನಿಗೆ ಈ ವಿಷಯ ತಿಳಿಸಿದೆ. ಅವನಿಗೆ ಸಂತೋಷವಾಗಿರಬೇಕು. ಐದು ರೂಪಾಯಿ ಆ ಕಾಲಕ್ಕೆ ದೊಡ್ಡ ಮೊತ್ತವೇ ಆಗಿತ್ತು. ಭೀಮಗ ಆ ಬಿಳಿಯನನ್ನು ಆಪಾದಮಸ್ತಕ ನೋಡಿ,

"ಇದು ಶಿಕಾರಿ ಮಾಡುವ ಮುಖವೇ? ಮನುಷ್ಯ ನೋಡಿದರೆ ಚೋಟುದ್ದ ಇದ್ದಾನೆ... ಸರಿ ನನಗೇನಂತೆ...ಮೊದಲು ಐದು ರೂಪಾಯಿ ಕೊಡಿಸಿ...ಆ ಮೇಲೆ ಬೇಟೆಯನ್ನು ತೋರಿಸುತ್ತೇನೆ," ಎಂದ ಭೀಮಗ.

ಆ ಬಿಳಿಯನಿಗೆ ಭೀಮಗ ಹೇಳಿದ್ದನ್ನು ಇಂಗ್ಲೀಷಿನಲ್ಲಿ ಹೇಳಿದೆ. ಆತ ಒಪ್ಪಿ ಐದು ರೂಪಾಯಿಯ ನೋಟನ್ನು ಕೊಟ್ಟೇ ಬಿಟ್ಟ. ಭೀಮಗ ಆತನಿಗೆ ನಾವಿದ್ದ ನಿವಾಸದ ಹಿಂದೆ ಇದ್ದ ಭಾರೀ ಪೊದೆಯೊಂದನ್ನು ತೋರಿಸಿ, "ಶಿಕಾರಿ ಮಾಡುವುದಿದ್ದರೆ ಮಾಡಿರಿ, ಅಲ್ಲಿ ನಿಮಗೆ ಒಂದಲ್ಲ ಎರಡು ಮೃಗಗಳು ಸಿಗುತ್ತವೆ" ಎಂದ. ಆ ಬಿಳಿಯ ತನ್ನ ಚೀಲದಿಂದ ದುರ್ಬೀನು ತೆಗೆದುಕೊಂಡು ನೋಡುತ್ತ–ಗುಂಡು ಹಾರಿಸುವುದಕ್ಕೆ ಆಯಕಟ್ಟಾದ ಸ್ಥಳವನ್ನು ಹುಡುಕುತ್ತಿದ್ದ. ದೂರದಲ್ಲಿ ನಿಂತಿದ್ದ ಕಾರನ್ನು ನಡೆಸಿಕೊಂಡು ಬಂದ ಅವನ ಸ್ನೇಹಿತನಿಗೆ ಜೊತೆಯಾದ, ಇಬ್ಬರೂ ಸಮಾಲೋಚಿಸಿ, ಒಬ್ಬ ಶ್ರೀಗಂಧದ ಮರವನ್ನೇರಿ ಮೃಗದ ಜಾಡು ಹಿಡಿಯುವುದೆಂದೂ, ಇನ್ನೊಬ್ಬ ಕಾರಿನಲ್ಲಿ ಕುಳಿತು ಗುಂಡು ಹಾರಿ

ಸುದ್ದಿಯೆಂದೂ ತೀರ್ಮಾನಿಸಿದರು. ಭೀಮುಗ ಕುತೂಹಲದಿಂದ ತಾನೂ ಒಂದು ಶ್ರೀಗಂಧದ ಮರವನ್ನೇರಿದ. ನಾವು ಒಳಸೇರಿ ಬಾಗಿಲು ಹಾಕಿಕೊಂಡು ಕಿಟಕಿಯಿಂದ ಇಣುಕುತ್ತಿದ್ದೆವು.

ಮರವನ್ನೇರಿದ ಬಿಳಿಯನು ಕಾರಿನಲ್ಲಿ ಕುಳಿತಿದ್ದವನಿಗೆ ಸನ್ನೆ ಮಾಡುತ್ತಲೇ, ಆತ ತುಪಾಕಿಯಿಂದ ಎರಡು ಬಾರಿ ಗುಂಡು ಹಾರಿಸಿದ. ಗುಂಡಿನ ಶಬ್ದ ಹೊರಡುವುದೇ ತಡ, ಪೊದೆಯೊಳಗಿಂದ ದೊಡ್ಡ ಹುಲಿಯೊಂದು ಆರ್ಭಟಿಸುತ್ತ ಮೇಲಕ್ಕೆ ನೆಗೆದು, ನಿಂತಿದ್ದ ಕಾರಿನ ಮೇಲೆ ಬಿದ್ದಿತು. ಅದರ ಹಿಂದೆಯೇ ನೆಗೆದು ಬಂತು ಮರಿ ಹುಲಿ. ಶ್ರೀಗಂಧದ ಮರದ ಮೇಲಿದ್ದ ಮನುಷ್ಯ ಕಾರಿನಲ್ಲಿದ್ದವನಿಗೆ ಅಪಾಯ ಒದಗಿರಬಹುದೆಂದು ಎಣಿಸಿ, ಮರದಿಂದ ಇಳಿಯಲು ಪ್ರಯತ್ನಿಸಿದ. ಮರದ ಕೊಂಬೆ ಮುರಿದು ಬಿಳಿಯ ಸಾಹೇಬ ಕೆಳಗೆ ಬಿದ್ದ. ಅವನ ಕೈಲಿದ್ದ ಪಿಸ್ತೂಲಿನಿಂದ ಥಂ ಥಂ ಎಂದು ಗುಂಡು ಮೇಲಕ್ಕೆ ಹಾರುತ್ತಿತ್ತು. ಈ ಗದ್ದಲದಿಂದ ದೊಡ್ಡ ಹುಲಿ ಕಾಡಿನ ಕಡೆ ಪಲಾಯನ ಮಾಡಿತು. ಆದರೆ ಮರಿ ಹುಲಿ ಬಿದ್ದಿದ್ದ ಬಿಳಿಯ ಸಾಹೇಬನತ್ತ ಧಾವಿಸಿತು.

ಮತ್ತೊಂದು ಮರವನ್ನೇರಿ ಇದನ್ನೆಲ್ಲ ಗಮನಿಸುತ್ತಿದ್ದ ಭೀಮುಗ "ಅಯ್ಯೋ ಬಿಳಿಯನ ಗತಿ ಆಗಿ ಹೋಯಿತು" ಎಂದು ಬಗೆದು ಕ್ಷಣಮಾತ್ರದಲ್ಲಿ ತಾನು ಹತ್ತಿದ್ದ ಶ್ರೀಗಂಧದ ಮರವನ್ನು ಆ ಮರಿ ಹುಲಿಯ ಮೇಲೆ ಉರುಳಿಸಿದ. ಅದು ಅಲ್ಲಿ ಸಿಕ್ಕಿಕೊಂಡು ಬಿಡಿಸಿಕೊಳ್ಳಲು ಒದ್ದಾಡುವಷ್ಟರಲ್ಲಿ ತನ್ನ ಕೈಲಿದ್ದ ನೀಳವಾದ ಭರ್ಚಿಯಿಂದ ಅದಕ್ಕೆ ಇರಿದ. ಇಷ್ಟು ಕೆಲಸವೂ ಕ್ಷಣಮಾತ್ರದಲ್ಲಿ ನಡೆದು ಹೋಯಿತು. ಹುಲಿ ನಿಶ್ಚೇತನಗೊಂಡು ಬಿದ್ದಿತ್ತು.

ಚೇತರಿಸಿಕೊಂಡ ಬಿಳಿಯರಿಬ್ಬರೂ ಸತ್ತು ಬಿದ್ದ ಹುಲಿ ಮರಿಯನ್ನು ತಮ್ಮ ಕಾರಿಗೆ ಸಾಗಿಸುವ ಪ್ರಯತ್ನ ಮಾಡಿದರು. ಆದರೆ ಭೀಮುಗ ಬಿಟ್ಟಾನೆಯೆ?

"ಹುಲಿಯನ್ನು ಶಿಕಾರಿ ಮಾಡಿದವನು ನಾನು. ಜೊತೆಗೆ ನಿನ್ನ ಪ್ರಾಣವನ್ನು ಉಳಿಸಿದ್ದೇನೆ. ಪಟ್ಟಣಕ್ಕೆ ಹೋಗಿ ಹುಲಿಯನ್ನು 'ನಾನೇ ಬೇಟೆಯಾಡಿದೆ' ಎಂದು ಜಂಭ ಕೊಚ್ಚಿಕೊಳ್ಳುವುದಕ್ಕೆ ತಾನೇ ನೀವು ಈ ಸತ್ತ ಪ್ರಾಣಿಯನ್ನು ಹೊತ್ತುಕೊಂಡು ಹೋಗಲು ಆತುರ ಪಡುತ್ತಿರುವುದು? ನೀವು ಈ ಮೃಗವನ್ನು ಶಿಕಾರಿ ಮಾಡಿ ಕೊಂದಿದ್ದರೆ ಈ ಪ್ರಾಣಿಯ ಮೈಮೇಲೆ ಒಂದೇ ಒಂದು ಗುಂಡಿನ ಗುರುತಾದರೂ ತೋರಿಸಿ, ಒಪ್ಪಿಕೊಳ್ಳುತ್ತೇನೆ" ಎಂದು ಪ್ರತಿಭಟಿಸಿದ. ಆದರೆ ತಾವು ಬಿಳಿಯರೆಂಬ ಕಾರಣದಿಂದ ಅವರು ದುಂಡಾವರ್ತನೆಗೆ ಇಳಿದು ದುರಹಂಕಾರದ ಮಾತುಗಳನ್ನಾಡಲು ಶುರುಮಾಡಿದರು. ಭೀಮುಗನಿಗೆ ಸಿಟ್ಟು ನೆತ್ತಿಗೇರಿ ಒಬ್ಬನ ಕೈಯಲ್ಲಿದ್ದ ರಿವಾಲ್ವರನ್ನು ಕಿತ್ತುಕೊಂಡು ಬಿಟ್ಟ. ಅಷ್ಟರಲ್ಲಿ ಕಾಡುಕುರುಬರೆಲ್ಲ ಅಲ್ಲಿ ಸೇರಿ ಆ ಬಿಳಿಯರ ಮೇಲೆ ಎರಗಿ ಬುದ್ಧಿ ಕಲಿಸುವ ತೀರ್ಮಾನ ಮಾಡಿಕೊಂಡರು. ಅವರ ಗುಂಪನ್ನು ಕಂಡ ಬಿಳಿಯ ಸಾಹೇಬರ ಧೈರ್ಯ ಕರಗಿ ನೀರಾಗಿ, ಮೆಲ್ಲಗೆ ಕಾರನ್ನು ಹತ್ತಿ ತಲೆ ತಪ್ಪಿಸಿಕೊಂಡರು. ಈ ವಾರ್ತೆ ಎಲ್ಲ ಕಡೆ ಹಬ್ಬಿತು. ಅಧಿಕಾರಿಗಳೂ ಪೋಲಿಸರೂ ಬಂದು, ಇನ್ನು ಮುಂದೆ ಕ್ರೂರ ಮೃಗಗಳಿರುವ ಸ್ಥಳವನ್ನು ಯಾರೂ, ಯಾರಿಗೂ ತೋರಿಸಬಾರದೆಂದೂ, ಖೆಡ್ಡಾ ಪ್ರಕರಣ ಮುಗಿಯುವವರೆಗೆ ಯಾರೂ, ಯಾವ ಮೃಗವನ್ನೂ ಬೇಟೆಯಾಡಬಾರದೆಂದೂ ನಿಷೇಧಿಸಿದರು.

ಈ ಪ್ರಕರಣವು ಮಾಜೀ ಪಟೇಲ ಗುಂಡಪ್ಪ ಗೌಡರ ಕಿವಿಗೆ ಬಿದ್ದಿತು. ಕೂಡಲೇ ಹೋಗಿ ಬಿಳಿಯರ ಕೊಬ್ಬನ್ನು ಇಳಿಸಿದ್ದಕ್ಕೆ ಭೀಮುಗನನ್ನು ಅಭಿನಂದಿಸಿದರು.

"ಸಂಜೆಯಾಗುತ್ತಲೇ ಇಲ್ಲೆಲ್ಲ ಕ್ರೂರ ಮೃಗಗಳು ಸುತ್ತಾಡುತ್ತ ಇರುತ್ತವೆ. ನೀವೆಲ್ಲ ಕುರ್ಚಿಯ ರಾವುತರು. ನರಿಯನ್ನು ಕಂಡರೂ ಹೆದರುವ ಜನ. ರಾತ್ರಿ ವೇಳೆ ಹೊರಗೆ ಬೆಂಕಿ ಹಾಕಿರಿ. ಆಗ ಅವು ಇತ್ತ ಕಡೆ ಆಡ್ಡಾಡುವುದಿಲ್ಲ" ಎಂದು ನಮ್ಮನ್ನು ಎಚ್ಚರಿಸಿ ಭೀಮುಗನ ನೆರವಿನಿಂದ ತಾವೇ ನಮಗಾಗಿ ಎರಡು ಅಗ್ನಿ ಕುಂಡಗಳನ್ನು ನಿರ್ಮಿಸಿಕೊಟ್ಟರು. ಅಂದಿನಿಂದ ಭೀಮುಗ ನಮ್ಮ ಕಚೇರಿಯ ಖಾಸಾ ಆಳಾಗಿದವನಾದ.

ಎಷ್ಟೋ ದಿನ ನಾವು ಈ ಅಡವಿಯಲ್ಲಿ ಕೆಲಸ ಮಾಡಿದರೂ ಆನೆಗಳನ್ನು ಮಾತ್ರ ನೋಡಿರಲಿಲ್ಲ. ಭೀಮಗನನ್ನು ಕೇಳಿದೆವು.

"ಆನೆಗಳು ರಾತ್ರಿ ಕಂಡಿದ ಮೇಲೆ ಬೆಳದಿಂಗಳಲ್ಲಿ ಗುಂಪಾಗಿ ಬರುತ್ತವೆ. ಇಂದು ಹುಣ್ಣಿಮೆ ರಾತ್ರಿ. ಬೆಳದಿಂಗಳಿನಲ್ಲಿ ಆನೆಗಳು ಬಂದರೆ ತೋರಿಸುತ್ತೇನೆ" ಎಂದು ಎಲ್ಲ ಮೃಗಗಳ ಚಹರೆಯ ಬಗ್ಗೆ ಒಂದು ಉಪನ್ಯಾಸವನ್ನೇ ಕೊಟ್ಟ.

ಮಾಜಿ ಪಟೇಲ ಗುಂಡಪ್ಪಗೌಡರಿಗೆ ಸರಿಯಾದ ಉತ್ತರಾಧಿಕಾರಿ ಭೀಮಗನೇ ಎಂದು ನಾವೆಲ್ಲರೂ ಊಟ ಮಾಡುವ ಸಮಯದಲ್ಲಿ ಒಮ್ಮತದಿಂದ ಠರಾವನ್ನು ಮಂಡಿಸಿ ಅನುಮೋದಿಸಿದೆವು ಕೂಡ.

ಅಂದಿನ ರಾತ್ರಿ ಬೆಳದಿಂಗಳು ಚೆಲ್ಲಿತ್ತು. ಹನ್ನೊಂದು ಗಂಟೆಯ ಹೊತ್ತಿಗೆ "ಆನೆಗಳು ಬರುತ್ತಿವೆ... ಆನೆಗಳು ಬರುತ್ತಿವೆ" ಎಂಬ ಭೀಮಗನ ಕೂಗಿಗೆ ಎಲ್ಲರೂ ಕಾತರಿಸಿ ಎದ್ದೆವು. ಅವು ನಮ್ಮ ಕಟ್ಟಡದ ಕಡೆಯೇ ಬರುತ್ತಿದ್ದುವು. ಎಲ್ಲರೂ ಒಳಸೇರಿ ಬಾಗಿಲು ಭದ್ರಪಡಿಸಿ, ಕಿಟಕಿಯಿಂದ ಇಣುಕಿದೆವು. ಯಾರೂ ಸದ್ದು ಗದ್ದಲ ಮಾಡಬಾರದೆಂದು ಭೀಮಗ ಎಚ್ಚರಿಸಿದ. ಆನೆಗಳ ಹಿಂಡು ನಮ್ಮ ಕಟ್ಟಡದ ಬಳಿಯಲ್ಲೇ ಬಿಡಾರ ಹೂಡಿದವು. ನಮಗೋ ಪ್ರಾಣ ಸಂಕಟ. ಕೊಂಚ ಹೊತ್ತಿನ ನಂತರ ಅವು ನಮ್ಮ ಕಟ್ಟಡವನ್ನು ಒಂದೆರಡು ಸುತ್ತು ಸುತ್ತಿ ವಿಹರಿಸಿ, ಒಂದೊಂದಾಗಿ ಸಾಗಿಹೋದುವು. ದೇವರ ದಯದಿಂದ ನಮ್ಮ ಸುಳಿವು ಹಿಡಿಯಲಿಲ್ಲ. ಆನೆಗಳೆಲ್ಲ ಮರೆಯಾದ ಮೇಲೆ ಭೀಮಗ ಹೊರಗೆ ಹೋಗಿ ನೋಡಿ ಬಂದು "ಎಂಥ ಕಾಲ ಬಂದಿದೆ ನೋಡಿ. ಕ್ರೂರ ಮೃಗಗಳು ಬರದಿರಲಿ ಎಂದು ಬೆಂಕಿ ಹಾಕಿದರೆ... ಚಿರತೆಗಳೂ ಕಿರುಬಗಳೂ ಒಟ್ಟಾಗಿ ಜಮಾಯಿಸಿ ಬೆಂಕಿಯ ಸುತ್ತಲೂ ಸೇರಿ ಚಳಿ ಕಾಯಿಸುತ್ತಿವೆ. ನೀವೆಲ್ಲ ಎಚ್ಚರದಿಂದ ಇರಬೇಕು" ಎಂದು ಅಂಜಿದವರ ಮೇಲೆ ಕಪ್ಪೆ ಎಸೆದ.

ನಾವು ಬಿಡಾರ ಹೂಡಿದ್ದ ಕಟ್ಟಡದಲ್ಲಿದ್ದುದು ಒಂದೇ ಒಂದು ದೊಡ್ಡ ಹಾಲು. ಕಟ್ಟಡದ ಹಿಂದುಗಡೆ ಮುಂದುಗಡೆ ಹಜಾರದಂಥ ಜಗುಲಿಗಳಿದ್ದು, ಈ ಜಗುಲಿಗೆ ಅರ್ಧಗೋಡೆ ಅರ್ಧ ಕಬ್ಬಿಣದ ಕಟಕಟೆ ಹಾಕಿದ್ದು ಮಧ್ಯೆ ಒಂದೊಂದು ಬಾಗಿಲುಗಳಿದ್ದುವು. ನಮ್ಮ ಗುಂಪಿನ ಆರು ಜನರೂ ನಮ್ಮ ಲೆಕ್ಕ ಪತ್ರದ ಪುಸ್ತಕಗಳನ್ನೂ, ಸ್ವಂತ ವಸ್ತುಗಳನ್ನೂ, ಹಾಸಿಗೆ ಹೊದಿಕೆಗಳನ್ನೂ ಅಲ್ಲಿಯೇ ಇಟ್ಟುಕೊಂಡಿದ್ದೆವು. ನಾವು ಮಲಗುತ್ತಿದ್ದುದೂ ಇಲ್ಲಿಯೇ. ಬಾಗಿಲಿನ ಬಳಿ ಒಂದು ದುಂಡುಮೇಜಿನ ಸುತ್ತಲೂ ಕುಳಿತು, ಅಂದಂದಿನ ಕೆಲಸದ ವರದಿಯನ್ನೂ, ಲೆಕ್ಕಪತ್ರಗಳನ್ನೂ ತಯಾರು ಮಾಡುತ್ತಿದ್ದೆವು. ಹಿಂದಿನ ಬಾಗಿಲಿನ ಬಳಿ ಒಂದು ಮೇಜು ಮಾತ್ರ ಇದ್ದು ಕುರ್ಚಿಗಳು ಇಲ್ಲದ ಪ್ರಯುಕ್ತ ಅದನ್ನು ಬಳಸುತ್ತಿರಲಿಲ್ಲ. ಅಂದಂದಿನ ಕೆಲಸಗಳನ್ನು ಅಂದೇ ಮುಗಿಸುವ ಹೊತ್ತಿಗೆ ಎಷ್ಟೋ ದಿನ ಅರ್ಧರಾತ್ರಿ ಮೀರಿರುತ್ತಿತ್ತು. ನಮ್ಮ ಕಟ್ಟಡದ ಪಕ್ಕದ ಷೆಡ್ ಒಂದರಲ್ಲಿ ಅಡುಗೆ ವ್ಯವಸ್ಥೆ ಮಾಡಲಾಗಿತ್ತು. ರಾತ್ರಿಯ ಊಟಕ್ಕೆ ಅನೇಕ ದಿನ ಭೀಮಗ ಇರುತ್ತಿರಲಿಲ್ಲ. ತನ್ನ ಹಳ್ಳಿಗೇ ಹೋಗಿ ಉಂಡು, ಕುಡಿದು ತೇಲಾಡುತ್ತ ಬರುತ್ತಿದ್ದ.

ಅಂದು ಅಡುಗೆ ಸಿದ್ಧವಾಗಿದೆ ಎಂದೂ, ಊಟಕ್ಕೆ ಬರಬೇಕು ಎಂದೂ ಕರೆ ಬಂತು. ಬಾಗಿಲಿಗೆ ಬೀಗವನ್ನು ಹಾಕದೆ ಸುಮ್ಮನೆ ಮುಚ್ಚಿ ಹೊರಟೆವು. ಊಟ ತೀರಿಸಿಕೊಂಡು ಎಲೆ ಅಡಿಕೆ ಹಾಕಿ, ಕೆಲಸ ಮುಂದುವರಿಸಲು ಕುಳಿತುಕೊಂಡೆವು.

ಇದ್ದಕ್ಕಿದ್ದ ಹಾಗೆ ನಾಗೇಶರಾಯರಿಗೆ ನಡುಕ ಹುಟ್ಟಿಕೊಂಡಿತು. ಉಸಿರು ಅಡಗಿ, ಮುಖವೆಲ್ಲ ಭೀತಿಯಿಂದ ಪರಿತಪಿಸಿ, ಮಾತನಾಡಲು ಮಾಡಿದ ಪ್ರಯತ್ನವೆಲ್ಲ ನಿಷ್ಫಲವಾಯಿತು. ಹಿರಿಯರಾದ ವೆಂಕಟಸುಬ್ಬಯ್ಯನವರಿಗೂ ಎದೆ ಧಡ್ ಎಂದಿತು. ಇಷ್ಟು ಹೊತ್ತಿನಲ್ಲಿ ಯಾವ ವೈದ್ಯರೂ ಸಿಗುವಂತಿರಲಿಲ್ಲ ಎಂದು ಅವರ ಚಿಂತೆಯಾಯಿತು. ನಾಗೇಶರಾಯರ ದೃಷ್ಟಿ ಆಚೆ ಬಾಗಿಲ ಬಳಿಯಿದ್ದ ಮೇಜಿನ ಕಡೆಗೇ ಇದ್ದು ಅವರು ಮಾತನಾಡದೇ ಪದೇ ಪದೇ ಮೇಜಿನ ಕಡೆ ಕೈ ತೋರಿಸುತ್ತಿದ್ದರು. ಎಲ್ಲರ ದೃಷ್ಟಿಯೂ ಅತ್ತ ಕಡೆ ಹರಿಯಿತು.

ಆ ಮೇಜಿನ ಕೆಳಗೆ ಕಾಣಿಸುತ್ತಿರುವುದೇನು? ಯಾವುದೋ ಪ್ರಾಣಿ! ಕೈ ಕಾಲುಗಳನ್ನು ಚಾಚಿ, ತಲೆಯನ್ನು ನೆಲದ ಮೇಲಿಟ್ಟು ನಿದ್ರಿಸುವಂತಿದೆ. ಉದ್ದವಾದ ಬಾಲ ಮಾತ್ರ ಹೊರಗೆ ಕಾಣಿಸುತ್ತಿರುವುದರಿಂದ ಯಾವುದೋ ಕ್ರೂರಮೃಗವೆಂದು ಅರಿವಾಗುತ್ತದೆ. ಅದು ಖಂಡಿತವಾಗಿಯೂ ನಾಯಿಯಲ್ಲ. ನಾಯಿಗಿಂತ ದೊಡ್ಡ ದೇಹ. ಈಗ ಮಾಡುವುದೇನೆಂಬ ಯೋಚನೆ ಎಲ್ಲರ ಮನದಲ್ಲಿ ಸುತ್ತುತ್ತಿತ್ತು. ಮಾತನಾಡದೇ ಮೌನದಿಂದ ಒಬ್ಬರ ಹಿಂದೆ ಒಬ್ಬರು ಕಳ್ಳರಂತೆ ಹೊರ ಬಂದೆವು. ಬೀಗ ಬೀಗದ ಕೈ ಒಳಗೆ ಸೇರಿದ್ದ ಪ್ರಯುಕ್ತ ಚಿಲಕಕ್ಕೆ ಬೆಣೆಯನ್ನು ಸಿಕ್ಕಿಸಿದ ಮೇಲೆಯೇ ಬಾಯಿ ಬಿಡುವ ಧೈರ್ಯ ಬಂದದ್ದು ನಮಗೆ.

ನಾವೆಲ್ಲರೂ ಊಟಕ್ಕೆ ಹೋಗಿದ್ದ ಸಮಯದಲ್ಲಿ ಈ ಮೃಗ ಮೆಲ್ಲಗೆ ಒಳಸೇರಿರಬೇಕು. ಅದು ಯಾವ ಪ್ರಾಣಿಯೋ ಗೊತ್ತಾಗುತ್ತಿಲ್ಲ. ಹೊರಗೆ ಕಗ್ಗತ್ತಲು. ಕಾರ್ತಿಕ ಮಾಸದ ಚಳಿ ಎದೆಯನ್ನು ನಡುಗಿಸುತ್ತಿದೆ. ಜನರೆಲ್ಲ ಅವರವರ ಠಾಣ್ಯಕ್ಕೆ ಹೊರಟು ಹೋಗಿದ್ದಾರೆ. ಕಾಡು ಕುರುಬರೆಲ್ಲ ಇಷ್ಟು ಹೊತ್ತಿಗೆ ಕುಡಿತದ ಅಮಲಿನಲ್ಲಿರುತ್ತಾರೆ. ಕರೆದರೂ ಬರುವ ಹಾಗಿಲ್ಲ. ನಮಗೆ ಆಪದ್ಬಾಂಧವನಾದ ಭೀಮುಗ ಬರುತ್ತಾನೋ ಇಲ್ಲವೋ ಗೊತ್ತಿಲ್ಲ; ಭೀಮುಗ ಹೊತ್ತಿಸಿ ಹೋಗಿದ್ದ ಬೆಂಕಿ ಕೆಂಡವಾಗಿ ಆರುತ್ತಿದೆ. ಕುರುಬರ ನಾಯಕ ನಾಯುಡುನ ಹತ್ತಿರ ಮಾತ್ರ ಕೋವಿ ಇದೆ. ಅವನು ಕುಡಿದು ಕುರುಬರ ಪಾಳ್ಯದಲ್ಲಿರುತ್ತಾನೆ. ನಮಗೆ ಕೋಟಿ ಕೊಟ್ಟರೂ ಹಾರಿಸಲು ಬರುವುದಿಲ್ಲ.

ಕೊನೆಗೆ ಅಡುಗೆಯ ಕೃಷ್ಣಪ್ಪನೇ ಧೈರ್ಯ ಮಾಡಿ, ಗೊರಬಿಯ ಕೋಲನ್ನು ಹೊತ್ತಿಸಿ ಠಾಣ್ಯದ ದಿಕ್ಕಿನಲ್ಲಿ ಅರ್ಧ ಮೈಲಿ ಹೋಗುತ್ತ "ಏ ಭೀಮುಗಾ... ಭೀಮುಗಾ" ಎಂದು ಅರಚುತ್ತ ನಡೆದ. ತನ್ನ ಕೂಗು ಯಾರಿಗಾದರೂ ಕೇಳಿಸಲಿ ಎಂದು ಅವನ ಆಸೆ. ಇನ್ಯಾವ ಕಾಡು ಮೃಗ ಎದುರಾಗುತ್ತೋ ಎಂಬ ಭಯ ಬೇರೆ. ಕೂಗಿ ಕೂಗಿ ಗಂಟಲು ಗಾರಾದ ಕೃಷ್ಣಪ್ಪನಿಗೆ ಯಾರೋ ಮಾತನಾಡುತ್ತ ಬರುವ ಸದ್ದು ಕೇಳಿಸಿತು. ಇವನು ಮತ್ತೆ ಕಿರುಚಲು ಧ್ವನಿಯಲ್ಲಿ ಅರಚಿದ್ದು ಕೇಳಿ ಆ ಸದ್ದೂ ನಿಂತು ಹೋಯ್ತು. ಕೃಷ್ಣಪ್ಪನಿಗೆ ಅನುಮಾನವಾಯ್ತು. ಅವನು ನಿಂತಿದ್ದ ಜಾಗದಲ್ಲಿ ಒಂದು ಬಂಡೆಕಲ್ಲು ಇದ್ದು ಅದನ್ನು ಭೂತನ ಕಲ್ಲು ಎನ್ನುತ್ತಾರೆ. ಬರುವ ಜನ ತನ್ನನ್ನು ಭೂತ ಎಂದು ಎಣಿಸಿ ಹಿಂದಿರುಗಿ ಬಿಟ್ಟರೆ ಕೆಲಸ ಕೆಡುತ್ತದೆ ಎಂದು ದಮ್ಮು ಹಿಡಿದು ಓಡಿ ಹೋಗಿ ಅವರನ್ನು ಮಾತನಾಡಿಸಿದ. ನೋಡಿದರೆ ಅವರು ಕಾಡು ಕುರುಬ ಹೆಂಗಸು—

"ನಾನು ದೆವ್ವವೂ ಅಲ್ಲ, ಪಿಶಾಚಿಯೂ ಅಲ್ಲ. ನಿಮ್ಮ ಹಾಗೇ ಮನುಷ್ಯ. ನಮ್ಮ ಆಫೀಸಿನ ಒಳಗೆ ಒಂದು ಕಾಡುಮೃಗ ಸೇರಿಬಿಟ್ಟಿದೆ. ಅದನ್ನು ಕೂಡಿ ಹಾಕಿದ್ದೇವೆ ಅಲ್ಲಿ. ಹೊರಗೆ ಬರುವವರೆಗೆ ನಾವು ಒಳಗೆ ಹೋಗಿ ಮಲಗುವಂತಿಲ್ಲ. ನೀವು ಹೋಗಿ ಎಲ್ಲರಿಗೂ ಈ ಸಮಾಚಾರ ಹೇಳಿ. ನಾಯುಡುನ್ನೋ, ಭೀಮುಗನನ್ನೋ ಕಳಿಸಿ, ಅವರಿಗೆ ತಪ್ಪದೆ ಒಂದು ಕೋವಿಯನ್ನು ತರುವಂತೆ ಹೇಳಿ ನಮಗೆ ನೀವು ಸಹಾಯ ಮಾಡಿ" ಎಂದು ಅಂಗಲಾಚಿ ಬೇಡಿಕೊಂಡು ಅವರನ್ನು ಠಾಣ್ಯಕ್ಕೆ ಕಳುಹಿಸಿ, ಹಿಂದಿರುಗಿ ಬಂದು ನಮಗೆ ಸುದ್ದಿ ಮುಟ್ಟಿಸಿದ.

ಈ ವಾರ್ತೆಯನ್ನು ಕೇಳಿದ ಒಡನೆಯೇ ಠಾಣ್ಯದ ಜನರೆಲ್ಲ ಗುಂಪಾಗಿ ಬಂದುಬಿಡುವರೆಂಬ ನಮ್ಮ ನಿರೀಕ್ಷೆ ಸುಳ್ಳಾಯಿತು. ಎಷ್ಟೋ ಹೊತ್ತಿನ ನಂತರ ನಾಯುಡು ಬಂದ. ಗತ ಕಾಲದ ಕೋವಿಯನ್ನೇನೋ ತಂದಿದ್ದ, ಆದರೆ ಮದ್ದನ್ನು ಮರೆತು ಬಂದಿದ್ದ. ಮದ್ದನ್ನು ತರುತ್ತೇನೆ ಎಂದು ಮತ್ತೆ ಹೊರಟುಹೋದ. ಅವನು ಸಾಕಷ್ಟು ಕುಡಿದಿದ್ದ. ನಾಯುಡು ಹಾಗೆ ನೋಡಿದರೆ ಹೇಳಿಕೊಳ್ಳುವಂಥ ಬೇಟೆಗಾರನೇನಲ್ಲ.

ಬೆಳಗಿನ ಜಾವ ಮೂರು ಗಂಟೆಯ ಹೊತ್ತಿಗೆ ಆತ ಪುನಃ ಬಂದ, ಕಿಟಕಿಯ ಮೂಲಕ ನೋಡಿದ. ಒಳ್ಳೆಯ ಶಿಕಾರಿ ಸಿಕ್ಕಿತೆಂದು ಹೇಳಿಕೊಂಡ. ಕೋವಿ ಸಿದ್ಧಪಡಿಸಿಕೊಂಡು ಆಯಕಟ್ಟಾದ ಜಾಗ ಆಯ್ಕೆ ಮಾಡಿದ? ಜುನಾಯಿಸಿದ. ಇಷ್ಟು ಹೊತ್ತಿಗೆ ಆ ಪ್ರಾಣಿಯೂ ಎದ್ದು ಮೈ ಮುರಿಯುತ್ತಿತ್ತು. "ನೀವೆಲ್ಲರೂ ದೂರ ಹೋಗಿ. ಬಾಗಿಲು ಭದ್ರ

ವಾಗಿರಲಿ ಒಂದೇ ಏಟಿಗೆ ಅದನ್ನು ಮುಗಿಸಿ ಬಿಡುತ್ತೇನೆ ನೋಡಿ" ಎಂದು ಗುಂಡು ಹಾರಿಸಿದ.

ನಾಯುಡು ಗುಂಡು ಹಾರಿಸಿದ ಅಷ್ಟೆ. ಅದು ಆ ಪ್ರಾಣಿಗೆ ತಗುಲಲೇ ಇಲ್ಲ. ಕೋಪದಿಂದ ಘರ್ಜಿಸುತ್ತ ಆ ಮೃಗವು ಮೂಲೆ ಮೂಲೆಗೂ ಎಗರಾಡುತ್ತಿತ್ತು. ಇನ್ನೊಮ್ಮೆ, ಮತ್ತೊಮ್ಮೆ, ಮಗುದೊಮ್ಮೆ ಗುಂಡು ಹಾರಿಸಿದ. ಬಹುಶಃ ತಗುಲಿರಬೇಕು, ಏಕೆಂದರೆ ಆ ಪ್ರಾಣಿ ಅತ್ತಿತ್ತ ಎಗುರಾಡುತ್ತಿದ್ದುದು ಕಾಣಿಸಲಿಲ್ಲ. ಆಗಾಗ ನರಳುತ್ತಿತ್ತಷ್ಟೆ. ಅದು ಅಸು ನೀಗಿತೆಂಬ ಧೈರ್ಯ ಯಾರಿಗೂ ಇರಲಿಲ್ಲ. ಬಾಗಿಲು ತೆಗೆದು ನೋಡೋಣವೆಂದರೆ ಕೋಪದಿಂದ, ಅರೆ ಜೀವ ವಾಗಿರುವ ಮೃಗ ಆಕ್ರೋಶವನ್ನು ತೀರಿಸಿ ಕೊಳ್ಳದೆ ಬಿಟ್ಟೀತೇ? ಯಾರೂ ಬಾಗಿಲನ್ನು ತೆರೆ ಯುವ ಧೈರ್ಯ ಮಾಡಲಿಲ್ಲ. ಅಷ್ಟು ಹೊತ್ತಿಗೆ ಬೆಳಕು ಹರಿಯಿತು. ಬೆಳಕು ಹರಿಯುವಾಗಲೇ ದೊಡ್ಡ ಇಂಜಿನಿಯರ್ ಸಾಹೇಬರು ಕಾರಿನಲ್ಲಿ ಬಂದರು. ವಿಷಯ ಅವರಿಗೂ ಮುಟ್ಟಿತ್ತು. ವಿದ್ಯಮಾನವನ್ನೆಲ್ಲ ತಿಳಿದುಕೊಂಡರು. ವೆಂಕಟ ಸುಬ್ಬಯ್ಯನವರು "ನಾವು ಮಾಡಿಸಿದ ಸುಣ್ಣ ಬಣ್ಣವೆಲ್ಲ ರಕ್ತಮಯವಾಯಿತು" ಎಂದರು.

"ಲೆಕ್ಕ ಪತ್ರಗಳೆಲ್ಲ ರಕ್ತಮಯವಾಗಿ ಹಾಳಾ ಯಿತು" ಎಂದು ನಾನು ಹೇಳಿದೆ.

"ನೀವೆಲ್ಲ ಕ್ಷೇಮವಾಗಿದ್ದೀರಿ ತಾನೇ? ಅದೇ ಮುಖ್ಯ. ನನಗೆ ತುಂಬ ದಿಗಿಲಾಗಿತ್ತು. ದೇವರು ದೊಡ್ಡವನು" ಎಂದು ಸಾಹೇಬರು ನುಡಿದರು. ಅಷ್ಟು ಹೊತ್ತಿಗೆ ನೂರಾರು ಜನ ಸೇರಿದ್ದರು.

ಇಷ್ಟೆಲ್ಲ ಗಲಭೆಗೆ ಕಾರಣವಾದದ್ದೊಂದು ಚಿರತೆ. ಅದು ಇನ್ನೂ ಸತ್ತಿರಲಿಲ್ಲ. ಇನ್ನೊಮ್ಮೆ ಗುಂಡು ಹಾರಿಸಿ ಅದನ್ನು ಕೊಲ್ಲಲಾಯಿತು.

ಮರುದಿನವೇ ನಮ್ಮ ಆಫೀಸು ಸ್ಥಳಾಂತರ ಗೊಂಡಿತು.

೦

ಎರಡು ಹೊಳೆಗಳು ಕೂಡುವ ಸಂಗಮ ಸ್ಥಳ ದಲ್ಲಿ ಅಡ್ಡಕಟ್ಟೆ ಹಾಕಿ ನಿರ್ಮಿಸಿದ ಕೆರೆ ಇರುವ ಊರಲ್ಲಿ ನಾನು ಸ್ವಲ್ಪಕಾಲ ವಾಸ ಮಾಡ ಬೇಕಾಗಿ ಬಂತು. ಕೆರೆಯ ಏರಿಯ ಮೇಲೆ ನಿಂತು ನೋಡಿದರೆ ಇದೊಂದು ಸಾಮಾನ್ಯ ಕಟ್ಟೆ ಯಂತೆ ತೋರುತ್ತಿತ್ತು. ನೀರಿನಿಂದ ಆಚೆ ಕಾಣಿ ಸುವ ಮನೆಯವರನ್ನು ಕೂಗಿ ಕರೆದು ಮಾತ ನಾಡಿಸುವಷ್ಟು ಹತ್ತಿರವಾಗಿ ಕಾಣುತ್ತಿತ್ತು ಆ ಊರು. ಈ ಗ್ರಾಮದ ಎಲ್ಲ ಮನೆಗಳೂ ಈ ಕಟ್ಟೆಯಲ್ಲಿ ಮುಳುಗಡೆಯಾಗಿ, ಸ್ವಲ್ಪ ಎತ್ತರ-ದಲ್ಲಿದ್ದು ಉಳಿದುಕೊಂಡಿದ್ದ ಒಂದೇ ಒಂದು ಮನೆಯ ಗ್ರಾಮ ಹಂಪಾಪುರ. ಮುಖ್ಯ ರಸ್ತೆಯಿಂದ ಹದಿನಾಲ್ಕು ಮೈಲಿ ಪ್ರಯಾಣದ ನಂತರ ಸಿಗುವ ಕಲ್ಲಿನಿಂದ ಕಟ್ಟಿದ ಆ ಒಂದೇ ಒಂದು ಮನೆ ಹಳೆಯ ಕಾಲದ್ದು. ಮುಳುಗಡೆ ಯಾಗದ ಜಮೀನುಗಳನ್ನು ರೂಢಿಸಿಕೊಂಡು ಈ ಒಂಟಿ ಮನೆಯಲ್ಲಿ ವಾಸಿಸುತ್ತಿದ್ದವರೇ ಪುಟ್ಟಸ್ವಾಮಿ ಗೌಡರು. ಖಂಡಿತವಾದಿಯಾಗಿದ್ದ ಗೌಡರ ಪರ ಮತ್ತು ವಿರೋಧ ಪಕ್ಷಗಳೂ ಇದ್ದವು.

ಆ ಬಾರಿ ಶಿವರಾತ್ರಿಯ ಜಾತ್ರೆಯಲ್ಲಿ ಹೋರಿ ಕರುಗಳನ್ನು ಕೊಳ್ಳಲೇಬೇಕಾದ ಅವಶ್ಯಕತೆ ಗೌಡರಿಗೆ ಉಂಟಾಯಿತು. ತಮ್ಮ ಹಿತಚಿಂತಕರ ಜೊತೆಯಲ್ಲಿ ಪರಸ್ಥಳದ ಜಾತ್ರೆಗೆ ಹೋಗಿ, ದನ ಕರುಗಳ ವ್ಯಾಪಾರ ಮಾಡಲು ನಿರ್ಧರಿಸಿದರು. ಆದರೆ ಮನೆಯ ಪರಿಸ್ಥಿತಿಯ ಯೋಚನೆ ಅವ-ರನ್ನು ಬಲವಾಗಿ ಕಾಡಿತು. ತಮ್ಮ ಮನೆ ಒಂಟಿ, ನೆರೆ ಹೊರೆ ಇಲ್ಲ. ಬಂಧು ಬಾಂಧವರನ್ನು ಕರೆಸಲು ಕೂಡ ಸಮಯವಿಲ್ಲ. ವೃದ್ಧ ತಾಯಿ, ಹೆಂಡತಿ-ಪುಟ್ಟ ಮಗು ಮತ್ತು ಮದುವೆ ಯಾಗದ ತಂಗಿಯರನ್ನಷ್ಟೇ ಬಿಟ್ಟು ನಾಲ್ಕಾರು ದಿನ ಪರಸ್ಥಳಕ್ಕೆ ಹೋಗುವುದು ಹೇಗೆಂದು

ಯೋಚಿಸುತ್ತಿದ್ದರು. ತಮಗಾಗದವರು ಸಮಯ ಸಾಧಿಸಿ ಹೆಂಗಸರು ಮಕ್ಕಳಿಗೆ ತೊಂದರೆ ಕೊಟ್ಟು ಮಾಡಿದ್ದಾರೆ. ಏನು ಮಾಡುವುದು? ಎಂದು ಕಳವಳಿಸಿದರು.

ಆದರೆ ಪರಿಸ್ಥಿತಿಯೇ ಹಾಗಿತ್ತು. ಹೋಗದೆ ಇರುವಂತಿರಲಿಲ್ಲ. ಕೊನೆಗೆ ಮನೆಯ ಇಪ್ಪತ್ತರ ಹರೆಯದ ಮನೆಯ ನಂಬಿಗೆಯ ಬಂಟ ಬಸವಣ್ಣನ ಮೇಲೆ ಜವಾಬುದಾರಿ ಹಾಕಿ "ಜೋಪಾನ, ಜಾಗ್ರತೆಯಾಗಿರಿ. ರಾತ್ರಿಯ ವೇಳೆ ಹೊಲಗಳ ಕಡೆ ಹೋಗಬೇಡಿ. ಯೋಚಿಸಿ ಕೆಲಸ ಮಾಡಿ. ನನ್ನ ಕೆಲಸವಾದ ಕೂಡಲೇ ಬಂದು ಬಿಡುತ್ತೇನೆ." ಎಂದು ತಮ್ಮವರ ಜೊತೆಗೂಡಿ ಜಾತ್ರೆಗೆ ಹೊರಟರು.

ಗೌಡರು ಹೊರಟು ಹೋದ ಎರಡನೆಯ ದಿನ ಸಂಜೆಗೆ ಮುಂಚೆ ಒಂದು ಘಟನೆ ನಡೆಯಿತು. ಅಂದು ಯಾರೋ ಒಬ್ಬ ಗೌಡರನ್ನು ಕೇಳಿಕೊಂಡು ಬಂದ. ಗೌಡರ ಹೆಂಡತಿ ಹೊನ್ನಮ್ಮ ಮನೆಯ ಹಿತ್ತಲಿನಲ್ಲಿ ಕೀರೆಯ ಸೊಪ್ಪನ್ನು ಕೊಯ್ಯುತ್ತಿದ್ದಳು. ಮನೆಯ ಮುಂದಿನ ಜಗಲಿಯ ಮೇಲೆ ಕುಳಿತಿದ್ದ ಮುದುಕಿಯೊಂದಿಗೆ ಬಂದವನು ಮಾತನಾಡಿದ—

"ಗೌಡ ಇದ್ದಾನೆಯಾ ಅಜ್ಜಿ?"

"ಯಾಕಪ್ಪ, ಏನು ಸಮಾಚಾರ?"

"ಒಂದು ಮುಖ್ಯವಾದ ವಿಸಯ ತಿಳಿಸ ಬೇಕಾಗಿತ್ತು."

"ಯಾಕಪ್ಪ, ನೀನು ಎಲ್ಲಿಂದ ಬಂದಿದ್ದಿ?"

"ಬುವ್ವನ ಹಳ್ಳಿಯಿಂದ ಬಂದಿದ್ದೀನಿ."

"ಏನಪ್ಪ ವಿಸಯ? ಎಲ್ಲರೂ ಚೆನ್ನಾಗಿದ್ದಾರೆ ತಾನೆ?"

"ಅದಕ್ಕೇ ನಾನು ಬಂದದ್ದು. ಹೊನ್ನಮ್ಮನ ತಾಯಿ ಚನ್ನಮ್ಮನಿಗೆ ಈಗ ನಾಕು ದಿನದಿಂದ ಹುಷಾರಿರಲಿಲ್ಲ. ಈಗ ಇನ್ನೂ ಸುಸ್ತಾಗಿದ್ದಾರೆ. ಯಾರ ಬಳಿಯಾದರೂ ಸಮಾಚಾರ ಹೇಳಿ ಕಳಿಸ ಬೇಕೆಂದು ಅಳಿಯಗಳಿಗೆ ಹುಡುಕಾಡುತ್ತಿದ್ದರು. ನಾನು ಬಂದದ್ದು ಕಂಡು 'ಒಂದು ಹೆಜ್ಜೆ ಹಂಪಾಪುರದವರೆಗೂ ಹೋಗಿ ನಮ್ಮ ಮಗು ಹೊನ್ನಮ್ಮನಿಗೆ ಹೇಳು. ಅವರ ತಾಯಿ ಸುಸ್ತಾಗಿದ್ದಾರೆ ಈಚೆಗೆ ಇಟ್ಟುಕೊಂಡು ಕಾಯುತವರೆ ಎಂದು ಹೇಳಿ ಜೊತೆಯಲ್ಲಿಯೇ ಕರೆದು ತಾ' ಎಂದು ಕಳಿಸವರೆ. ಬಂದರೆ ನನ್ನ ಜೊತೆಯಲ್ಲೇ ಕರೆದುಕೊಂಡು ಹೋಗುತ್ತೇನೆ. ಈಗ ಬರದಿದ್ದರೆ ಮುಖವೂ ಸಿಗುವುದಿಲ್ಲ!"

"ನಿನ್ನದು ಯಾವೂರಪ್ಪ, ನಿನ್ನ ಹೆಸರೇನು?"

"ಅದೆಲ್ಲ ಪುರಾಣ ಯಾಕಜ್ಜಿ? ಏಚನೆ ಮಾಡಿ ನೋಡಿರಿ. ಗೌಡರು ಜಾತ್ರೆಗೆ ಹೋದ ಸಮಾಚಾರಾನೂ ಗೊತ್ತಿದೆ."

ಬಾಗಿಲಿನ ಹಿಂದೆ ನಿಂತು ಕೇಳಿಸಿಕೊಳ್ಳುತ್ತಿದ್ದ ಹೊನ್ನಮ್ಮ ಹೊರಗೆ ಬಂದು "ಚೀಟಿ ಗೀಟಿ ಬರೆದು ಕೊಟ್ಟವರಾ?" ಎಂದಳು.

ಆತ ಇಲ್ಲವೆಂದ.

"ನಿನ್ನದು ಯಾವೂರು, ನಿನ್ನ ಹೆಸರೇನು?" ಎಂದು ಕೇಳಿದಳು.

"ನನಗೆ ನಿಮ್ಮ ಅಪ್ಪ ತಿಳಿಸಿದ್ದನ್ನು ಹೇಳಿದ್ದೀನಿ. ನಿಮಗೆ ತೋಚಿದಂತೆ ಮಾಡಿ. ಕರೆದುಕೊಂಡು ಬಾ ಎಂದಿದ್ದಾರೆ. ಬಂದರೆ ಕರೆದುಕೊಂಡು ಹೋಗುತ್ತೇನೆ. ತಾಯಿ ಅನ್ನೋ ವಸ್ತು ದೊಡ್ಡದು" ಎಂದು ಹೇಳಿ ಸುಮ್ಮನಾದ.

ಮುದುಕಿಗೆ ಬಂದವನ ಜೊತೆ ತನ್ನ ಸೊಸೆ ಹೋಗಿ ತಾಯಿಯ ಮುಖವನ್ನು ನೋಡಿಕೊಂಡು ಬರಲಿ ಎನಿಸಿತು. ಒಳಗಡೆ ಅತ್ತೆ-ಸೊಸೆ ಅದನ್ನೇ ಚರ್ಚಿಸಿದರು. ಹೊನ್ನಮ್ಮನಿಗೆ ತಾಯಿಯ ಅಂತ್ಯ ಕಾಲ ಪ್ರಾಪ್ತವಾದ ದುಃಖ ಒಂದು ಕಡೆಯಾದರೆ, ಸಂದರ್ಭದ ಬಗ್ಗೆ ಯೋಚನೆ ಒಂದು ಕಡೆ. ಯಾವನೊ ಅನಾಮಧೇಯನ ಜೊತೆಗೆ ಅವೇಳೆಯಲ್ಲಿ ಹೋಗುವುದು ಹೇಗೆ? ಬಂದಾತ ತನ್ನ ಹೆಸರನ್ನೂ, ಗುರುತನ್ನೂ ಊರನ್ನೂ ಹೇಳುತ್ತಿಲ್ಲ. ಗಂಡ ಹೋಗುವಾಗ ಹೇಳಿದ್ದ ಎಚ್ಚರಿಕೆ, ಜಾಗ್ರತೆ, ಜೋಪಾನದ ಮಾತುಗಳು ನೆನಪಿಗೆ ಬಂದುವು. ಏನಾದರೂ ಸರಿ, ಗಂಡನ ಮಾತನ್ನು ಮೀರಬಾರದೆಂದು ತೀರ್ಮಾನಿಸಿ, "ಮಗುವಿಗೆ ಹುಷಾರಿಲ್ಲದ ಕಾರಣ ಬೆಳಗ್ಗೆ ಪ್ರಯಾಣ ಮಾಡುತ್ತೇನೆ" ಎಂದು ಹೇಳಿಬಿಟ್ಟರು. ಬಂದವನಿಗೆ ನಿರಾಶೆಯಾದಂತಾಗಿ "ಏನು ತಿಳಿಸಿದ್ದೀನಿ. ನನ್ನ ಡ್ಯೂಟಿ ಆಯಿತು" ಎಂದೆಂದು ಹೊರಟೇ ಹೋದ.

ಆತ ಹೋದ ನಂತರ ಹೊನ್ನಮ್ಮನ

ಮನಸ್ಸು ಡೋಲಾಯಮಾನವಾಗತೊಡಗಿತು. ಒಮ್ಮೆ ಇದು ವೈರಿಗಳ ಕುತಂತ್ರವೇನೋ ಅನ್ನಿಸಿದರೆ ಮತ್ತೊಮ್ಮೆ ನಿಜವಾಗಿದ್ದರೆ ಗತಿಏನು ಅನ್ನಿಸುತ್ತದೆ. ತಾಯಿಯನ್ನು ಕಡೆಯಬಾರಿ ನೋಡದೆ ಹೋದರೆ ಜೀವನ ಪರ್ಯಂತ ನೋವು ನಿಂತುಬಿಡುತ್ತದೆ. ಆದರೆ ಪರಕೀಯನನ್ನು ನಂಬಿ ಮೋಸ ಹೋದರೆ ಬಾಳೇ ಹಾಳಾಗಬಹುದು ಎಂದೆಲ್ಲಾ ಯೋಚನೆಯಿಂದ ಕಂಬನಿಗರೆದಳು. ದನಕರುಗಳ ಉಸ್ತುವಾರಿಗೆ ಇದ್ದ ಬಸವಣ್ಣ "ಅಕ್ಕಾ. ನೀವು ಕರೆದರೆ ನಾನೇ ಬರುತ್ತೇನೆ" ಎಂದ. ಅವಳಿಗೆ ಅದೂ ಸರಿತೋರಲಿಲ್ಲ ಕೊನೆಗೆ ಒಂದು ನಿರ್ಧಾರಕ್ಕೆ ಬಂದಳು.

ಕರೆಯಲು ಬಂದಾತ ಹೊನ್ನಮ್ಮ ಬರುವುದಿಲ್ಲ ಎಂಬ ತೀರ್ಮಾನದೊಂದಿಗೆ ಹೊರಟು ಹೋಗಿದ್ದಾನೆ. ಹಾಗಾಗಿ ತಮ್ಮ ಯೋಜನೆ ಏನಾದರೂ ಇದ್ದರೂ ಅದು ನಡೆಯುವುದಿಲ್ಲವೆಂಬ ಅಭಿಪ್ರಾಯಕ್ಕೆ ಬಂದುಬಿಟ್ಟಿರುತ್ತಾರೆ. ಒಂದು ವೇಳೆ ಅವನು ಹೇಳಿದ್ದು ಸತ್ಯವೇ ಆಗಿದ್ದ ಪಕ್ಷದಲ್ಲಿ ಅದನ್ನು ಪರೀಕ್ಷಿಸಲು ಒಂದು ಅತ್ಯಂತ ಅಪಾಯಕಾರಿಯಾದ ದಾರಿ ಇದೆ. ತವರು ಮನೆ ಐದು ಮೈಲಿ ದೂರ ಒಬ್ಬಳೇ ನಡೆದುಕೊಂಡು ಹೊರಟು ಬಿಡುವುದು. ಏನೇ ಆದರೂ ನನಗೊಬ್ಬಳಿಗೆ ಆಗಲಿ ಎಂದು ನಿರ್ಧರಿಸಿ ಅತ್ತೆಯನ್ನು ಕಷ್ಟದಿಂದ ಒಪ್ಪಿಸಿ, ಮಗುವನ್ನು ನಾದಿನಿಯ ಬಳಿ ಬಿಟ್ಟು ಮನೆಯ ದೇವರ ಮೇಲೆ ಭಾರ ಹಾಕಿ, ತನ್ನ ಎರಡು ಬಟ್ಟೆಗಳನ್ನು ಮಾತ್ರ ಬುಟ್ಟಿಯಲ್ಲಿ ಇಟ್ಟುಕೊಂಡು, ಸರಸರನೆ ತವರೂರ ಹಾದಿಯಲ್ಲಿ ನಡೆದಳು. ಆಗ ರಾತ್ರಿ ಒಂಬತ್ತು ಗಂಟೆ.

ಅರ್ಧದಾರಿ ಸವೆದಿತ್ತು. ಎತ್ತರವಾದ ದಿಣ್ಣೆಯ ಕಡೆಯಿಂದ ತಗ್ಗಿನಲ್ಲಿ ದಾರಿ ಮುಂದುವರೆದಿತ್ತು. ನಂತರ ಮತ್ತೆ ಏರುದಾರಿ. ಅಲ್ಲೊಂದು ಕಣಿವೆ. ಸಮೀಪವೇ ದೊಡ್ಡ ನೇರಳೆ ಮರದ ಕಟ್ಟೆ. ಇದೇ ಅಪಾಯದ ಮೂಲಸ್ಥಾನ. ಒಂದು ಘಳಿಗೆ ನಿಂತು ನೋಡಿದಳು. ಎದೆ 'ಧಡ್' ಎಂದಿತು.

ಆ ನೇರಳೆಯ ಮರದ ಕಟ್ಟೆಯ ಮೇಲೆ ಕೆಲವಾರು ಜನ ಕುಳಿತಿರುವುದೂ, ಬೀಡಿ ಹಚ್ಚಿರುವುದೂ ಕಾಣಿಸಿತು. ಆಡುತ್ತಿರುವ ಮಾತುಗಳು ಅಸ್ಪಷ್ಟವಾಗಿ ಕೇಳಿಸುತ್ತಿದೆ. ನಕ್ಷತ್ರದ ಬೆಳಕಿನಲ್ಲಿ ಒಂದು ಹೆಣ್ಣು ಬರುತ್ತಿರುವುದನ್ನು ಅವರು ಕಂಡದ್ದೂ ಆಗಿದೆ.

ಹೊನ್ನಮ್ಮನ ಮೈ ರೋಮಗಳು ಎದ್ದು ನಿಂತವು. ಹೃದಯ ಬಾಯಿಗೆ ಬಂದಂತಾಗಿ ಕೈ-ಕಾಲೆಲ್ಲ ತಣ್ಣಗಾಯಿತು. ಏನು ಮಾಡಬೇಕು? ಅರ್ಧದಾರಿ ಬಂದದ್ದಾಗಿದೆ. ತನ್ನ ಗತಿ ಮುಗಿಯಿತು ಎಂಬ ಯೋಚನೆಯಿಂದ ಆಕೆಯ ಕಣ್ಣಲ್ಲಿ ನೀರು ತುಂಬಿತು. ಕೂಡಲೇ ಅದೇನು ಹೊಳೆಯಿತೋ ಮನಸ್ಸಿಗೆ, "ಬೇಗಬೇಗ ಬನ್ನಿರಣ್ಣ — ಬೇಗಬೇಗ ಬನ್ನಿರಣ್ಣ," ಎಂದು ಕೂಗಿಕೊಂಡಳು.

"ಬಂದೆ ನನ್ನಮ್ಮ ಬಂದೆ... ಹೆದರ ಬೇಡ ನನ್ನಮ್ಮ ಬಂದೆ" ಎಂಬ ಉತ್ತರ ಕೇಳಿ ಬಂದು ಹೊನ್ನಮ್ಮ ಅವಾಕ್ಕಾದಳು.

ಅದು ನನ್ನ ಧ್ವನಿ ಹೆಣ್ಣಿನ ಧ್ವನಿ. ನನ್ನ ಕಿವಿಗೆ ಬಿದ್ದೊಡನೆ ಏನೋ ಅಪಾಯ ಸಂಭವಿಸಿರಬಹುದೆಂದು ಭಾವಿಸಿದೆ.

ಆ ಸಂಜೆ ಹತ್ತಿರದ ಹಳ್ಳಿಯ ಅಳತೆಯನ್ನು ಮುಗಿಸಿಕೊಂಡು ಬೇಡ ಬೇಡವೆಂದರೂ ಕೇಳದೆ ಹಂಪಾಪುರಕ್ಕೆ ಹಿಂತಿರುಗುತ್ತಿದ್ದೆ. ಅಡ್ಡ ದಾರಿ ಹಿಡಿದು ಹೋದರೆ ಸಮೀಪ ಎಂದು ಈ ದಾರಿಯಲ್ಲಿ ಬರುತ್ತಿದ್ದೆ. ಆದರೆ ದಾರಿ ತಪ್ಪಿತ್ತು.

ಧ್ವನಿ ಬಂದ ದಿಕ್ಕಿಗೆ ಧಾವಿಸಿದೆ. ನನ್ನ ಬೈಸಿಕಲ್ಲು ಆ ಕಚ್ಚಾದಾರಿಯಲ್ಲಿ ಕಷ್ಟದಿಂದ ಸಾಗಿತು. ಆ ಮರಳು ಭೂಮಿ ತಂಗಡಿ ಬಂಗರೆ ಕುರುಚಲು ಗಿಡಗಳಿಂದ ತುಂಬಿ ಹೋಗಿತ್ತು. ಅವು ನನ್ನ ಬೈಸಿಕಲ್ ಚಕ್ರಕ್ಕೆ ಸಿಕ್ಕಿ ಹಾಕಿಕೊಳ್ಳುತ್ತಿತ್ತು. ಅದೇನನ್ನೂ ಗಮನಿಸದೆ ವೇಗವಾಗಿಯೇ ಬಂದೆ. ನನ್ನ ಕೈಯಲ್ಲಿ ಒಂದು ದೊಡ್ಡ ಟಾರ್ಚ್ ದೀಪ ಇತ್ತು. ಅದನ್ನು ಹೊತ್ತಿಸಿ, ಸಿಳ್ಳೆಯನ್ನು ಜೋರಾಗಿ ಊದುತ್ತಿದ್ದೆ. ಆಕೆಯ ಹತ್ತಿರ ಬಂದಿಳಿದು "ಹೆದರಬೇಡ ನನ್ನಮ್ಮ ಹೆದರಬೇಡ. ನನ್ನ ಚೀಲದಲ್ಲಿ ಆಯುಧ ಇದೆ. ನನ್ನ ಪ್ರಾಣವನ್ನು ಬಲಿ ಕೊಟ್ಟಾದರೂ ನಿನ್ನನ್ನು ರಕ್ಷಿಸುತ್ತೇನೆ." ಎಂದು ಹೇಳಿ "ಜೋರಾಗಿ ಸಿಳ್ಳೆಯನ್ನು ಊದಿ ನನ್ನ ಜೊತೆಗೆ ಇನ್ನೂ ಕೆಲವರಿದ್ದಾರೆ ಎಂದು ಭಾಸ

ವಾಗಲೆ ಏಟು ಉಪಾಯದಿಂದ ಒಂದೊಂದು ಸಲ ಇಂಗ್ಲೀಷಿನಲ್ಲಿಯೂ, ಒಂದೊಂದು ಸಲ ಕನ್ನಡದಲ್ಲಿಯೂ "ಬನ್ನಿ... ಬೇಗ ಬೇಗ ಬನ್ನಿ" ಎಂದು ನನ್ನ ಜೊತೆ ಇಲ್ಲದ ನನ್ನ ಅನುಚರರ ಹೆಸರನ್ನು ಕರೆಯುತ್ತ ಮುಂದೆ ಹೆಜ್ಜೆ ಇಟ್ಟೆವು.

ಏನು ನಡೆಯಿತೆ. ಅವರ ಪೂರ್ವೋತ್ತರವೇನೆಂಬುದೊಂದೂ ನನಗೆ ತಿಳಿಯದು. "ನೀನು ಹಿಂದೆ ಬೀಳಬಾರದು ನನ್ನ ಜೊತೆಯಲ್ಲೇ ಹೆಜ್ಜೆ ಹಾಕುತ್ತಿರಬೇಕು" ಎಂದು ಕೇಳಿಕೊಂಡಿದ್ದೆ. ಆಕೆಯೂ ಒಪ್ಪಿ ಹಾಗೆಯೇ ನಡೆದಳು. ಅವಳ ಕಣ್ಣಲ್ಲಿ ನೀರಾಡುತ್ತಿತ್ತು. ನಿಲ್ಲದೆ ಮುಂದೆ ಮುಂದೆ ನಡೆದೆವು. ನಾನು ಕೆಲಸಕ್ಕೆ ಹೋಗಿ ಬರುತ್ತಿದ್ದ ನಾದ್ದರಿಂದ 'ಫೀಲ್ಡ್ ಡ್ರೆಸ್'ನಲ್ಲಿಯೇ ಇದ್ದೆ ನೇರಳೇ ಮರದ ಕಟ್ಟೆ ಕಣ್ಣಿಗೆ ಕಾಣುವಷ್ಟು ಹತ್ತಿರವಾದಾಗ ಆಕೆ ಆ ಕಡೆ ಬೊಟ್ಟು ಮಾಡಿ ತೋರಿಸಿದಳು. ಅಲ್ಲಿ ಅರೆ ಕ್ಷಣ ನಿಂತು ಸುತ್ತಲೂ ದೀಪಬಿಟ್ಟು ನೋಡಿದೆ. ಯಾರೂ ಕಾಣಲಿಲ್ಲ. ಉಳಿದ ಎರಡು ಮೈಲಿ ದೂರವನ್ನು ಜಾಗ್ರತೆಯಾಗಿ ಸಾಗಿದೆವು. ಯಾವ ಅಪಾಯವೂ ಎದುರಾಗಲಿಲ್ಲ.

ಹೊನ್ನಮ್ಮನ ಮನೆ ತಲಪಿದಾಗ ಅಲ್ಲೆಲ್ಲಾ ಕತ್ತಲು ತುಂಬಿತ್ತು. ಮನೆಯ ಮುಂದಿನ ಕಟ್ಟೆಯ ಮೇಲೆ ಕುಳಿತು ಹೊನ್ನಮ್ಮನ ಚಿಕ್ಕ ತಮ್ಮ ಹೋರಿಗಳಿಗೆ ಜೋಳದ ಕಡ್ಡಿಗಳನ್ನು ತಿನಿಸುತ್ತಿದ್ದ. ನಮ್ಮನ್ನು ನೋಡಿ ಆಶ್ಚರ್ಯ, ಗಾಬರಿಯಿಂದ "ಏನಕ್ಕಾ ಏನಾಯ್ತು? ಇಷ್ಟೊತ್ತಿನಲ್ಲಿ ಬಂದೆ?" ಎಂದು ಅರಚುತ್ತ "ಅಪ್ಪಾ ಅಪ್ಪಾ ಅಕ್ಕ ಬಂದೈತೆ ನೋಡು" ಕೂಗಿದ. ಒಳಗಿನಿಂದ

ಎಲ್ಲರೂ ಆಶ್ಚರ್ಯದಿಂದ ಓಡಿ ಬಂದು ಒಟ್ಟೊಟ್ಟಾಗಿ ಪ್ರಶ್ನೆಗಳನ್ನು ಕೇಳತೊಡಗಿದರು. ಹೊನ್ನಮ್ಮ ಮಾತನಾಡಲು ಸಾಧ್ಯವಾಗದೇ ಅಳುತ್ತಿದ್ದಳು. ಆಗ ನಾನೇ ಮಾತನಾಡಿದೆ.

"ಎಲ್ಲರೂ ಶಾಂತರಾಗಿರಿ. ಏನೂ ಆಗಬಾರದ್ದು ನಡೆದಿಲ್ಲ. ನನಗೂ ಯಾವ ವಿಷಯವೂ ಗೊತ್ತಿಲ್ಲ. ಕೇಳಬೇಕೆಂದು ನನಗೂ ಆಶೆಯಾಗಿದೆ ಎಲ್ಲವನ್ನೂ ಆಕೆಯೇ ಹೇಳಲಿ... ಊಟ ಮಾಡುತ್ತಿರುವವರು ಊಟ ಮಾಡಿರಿ. ನಾನು ಈ ರಾತ್ರಿಯನ್ನು ನಿಮ್ಮೊಂದಿಗೇ ಕಳೆಯುತ್ತೇನೆ" ಎಂದೆ.

"ಇವರು ಯಾರು?" ಎಂದು ಅವಳ ಅಣ್ಣ ಕೇಳಿದ.

"ನನ್ನ ಮಾನ ಪ್ರಾಣ, ಉಳಿಸಲೆಂದು ದೇವರೇ ಕಳುಹಿಸಿ ಕೊಟ್ಟಂಥವರು" ಎಂದು ವಿಸ್ತಾರವಾಗಿ ನಡೆದ ವಿಷಯವನ್ನು ಆಕೆ ಹೇಳಿದಳು. ಅವಳು ಸಮಯೋಚಿತವಾಗಿ ಬುದ್ಧಿ ಉಪಯೋಗಿಸಿ ಕೂಗಿದ ವಿಷಯ ಬಂದಾಗ, "ನೀನು ನನ್ನನ್ನು ನೋಡಿ ಕೂಗಿದೆಯಾ?" ಎಂದು ಕೇಳಿದೆ. ತಾನು ನನ್ನನ್ನು ನೋಡಲೇ ಇಲ್ಲವೆಂದೂ, ಆ ಮಾತುಗಳು ತಾವೇ ತಾವಾಗಿ ಹೊರಟವೆಂದೂ ಆಕೆ ಹೇಳಿದಳು.

ಊಟವಾದ ಮೇಲೆ ಹೊನ್ನಮ್ಮನ ತಾಯಿ ನನಗಾಗಿ ಕಂಚಿನ ಲೋಟದಲ್ಲಿ ಬೆಲ್ಲ, ತುಪ್ಪ, ಹಾಕಿದ ಹಾಲನ್ನು ತಂದು ಹೊನ್ನಮ್ಮನ ಕೈಯಿಂದಲೇ ನನಗೆ ಕೊಡಿಸಿದರು.

ಹೊನ್ನಮ್ಮನಿಗೆ ಐದು ಜನ ಬಲ ಭೀಮರಂಥ ಅಣ್ಣ ತಮ್ಮಂದಿರು. ನಡೆದ ವಿದ್ಯಮಾನಗಳನ್ನೆಲ್ಲ ಪರಿಶೀಲಿಸಿದರು. ತಮ್ಮ ಒಬ್ಬಳೇ ತಂಗಿಯ ಬಾಳನ್ನು ಹಾಳುಗೆಡವುವ ಕುತಂತ್ರ ನಡೆಸಿದವರನ್ನು ಪತ್ತೆ ಹಚ್ಚುವುದು, ಕಳ್ಳರನ್ನು ಕಂಡು ಹಿಡಿಯುವುದು ಅವರಿಗೆ ಕಷ್ಟವೇನೂ ಆಗಲಿಲ್ಲ. ಕುತಂತ್ರಿಗಳಿಗೆ ಅವರು ಸರಿಯಾದ ರೀತಿಯಲ್ಲಿ ಬುದ್ಧಿ ಕಲಿಸಿದ ವರ್ತಮಾನ ನನಗೆ ನಂತರ ತಿಳಿಯಿತು.

ಅಂದಿನಿಂದ ನಾನು ಹಂಪಾಪುರವನ್ನು ಬಿಡುವವರೆಗೆ ಹೊನ್ನಮ್ಮನ ತವರುಮನೆಯವರು ಪ್ರತಿ ವಾರವೂ ಸಂತೆಗೆ ಬಂದಾಗ ಒಂದು ಕುಡಿಕೆಯ ತುಂಬ ತುಪ್ಪವನ್ನು ನನಗಾಗಿ ತಂದುಕೊಡುತ್ತಿದ್ದರು. ಆ ಊರನ್ನು ಬಿಡುವವರೆಗೆ ನಾನು ಅವರ ಮನೆಯವನೇ ಆಗಿದ್ದೆ.

●

ಸೆನ್ ಸಾವಿರದೊಂಬೈನೂರ ಮೂವತ್ತೊಂದನೆಯ ವರ್ಷ, ನಮ್ಮ ದೇಶದ ಎಲ್ಲ ಭಾಗಗಳಲ್ಲೂ ಜನಗಣತಿಯ ಕಾರ್ಯಕ್ರಮ ನಡೆದಿತ್ತು. ನಾನಿದ್ದುದು ಒಂದು ತಾಲೂಕು ಕೇಂದ್ರದಲ್ಲಿ. ಪೂರ್ವಭಾವಿಯಾಗಿ ಒಂದೊಂದು ಮನೆಗೂ ಒಂದೊಂದು ಸಂಖ್ಯೆಯನ್ನು ಕೊಟ್ಟು, ಗೊತ್ತಾದ ಕಾಲದಲ್ಲಿ ಎಣಿಕೆದಾರರು ಮನೆ ಮನೆಗೂ ಒಂದು ಲೆಕ್ಕವನ್ನು ಬರೆದುಕೊಂಡು ಹೋಗುತ್ತಿದ್ದರು. ಆ ಊರಿನ ಒಂದು ಕೊನೆಯಲ್ಲಿ ಆಂಗ್ಲ ಅಧಿಕಾರಿಗಳು ಕೆಲವು ಬಂಗಲೆಗಳನ್ನು ಕಟ್ಟಿಕೊಂಡು ವಾಸವಾಗಿದ್ದರು.

ಆಗಿನ ದಿನಗಳಲ್ಲಿ ಭಾರತದ ಸ್ವಾತಂತ್ರ್ಯ ಹೋರಾಟ ಜೋರಾಗಿತ್ತು.

ಮಾಮೂಲಿನಂತೆ ಸೆನ್ಸಸ್ ಕೆಲಸಕ್ಕೆ ಬಂದವರು ಒಬ್ಬ ಬ್ರಿಟಿಶ್ ಅಧಿಕಾರಿಯ ಮನೆಯ ಬಾಗಿಲ ಮೇಲೆ ಒಂದು ಸಂಖ್ಯೆಯನ್ನು ಬರೆದರು. ಅದು ಯಜಮಾನನಿಗೆ ಸರಿ ತೋರದ್ದರಿಂದ ಬರೆದಿದ್ದ ಸಂಖ್ಯೆಯನ್ನಾತ ಅಳಿಸಿಬಿಟ್ಟ. ನಡೆದಿದ್ದು ಅತಿ ಸಣ್ಣ ಕೆಲಸವಾದರೂ ಮನೆಯ ಯಜಮಾನ ರಗಳೆ ಮಾಡಿದ. ಹೋಗಿದ್ದವರು ಬಂದು ಅಧಿಕಾರಿಗಳಿಗೆ ದೂರು ಕೊಟ್ಟರು. ಬಿಳಿಯ ಅಧಿಕಾರಿಯೂ ಸುಮ್ಮನಿರಲಿಲ್ಲ. ಅವನು

ಮೈಸೂರಿನಲ್ಲಿದ್ದ ಬ್ರಿಟಿಷ್ ರೆಸಿಡೆಂಟರಿಗೇ ಒಂದು ದೂರು ಕೊಟ್ಟ:

"Two Indians have entered premises of my bunglow and have carved some awkward figures on my entrance door. It appears that they have peeped into the window where my wife......was having her nap. What would have been her position if she were naked or otherwise......"

[ಇಬ್ಬರು ದೇಶೀಯರು ನನ್ನ ಬಂಗಲೆಯ ಆವರಣದೊಳಕ್ಕೆ ಬಂದು ನನ್ನ ಮನೆಯ ಬಾಗಿಲ ಮೇಲೆ ವಕ್ರವಕ್ರವಾಗಿ, ಅಸಹ್ಯವಾಗಿ ಚಿತ್ರಗಳನ್ನು ಬರೆದಿದ್ದಾರೆ. ಅವರು ಕಿಟಕಿಯೊಳಗೆ ಇಣಕಿ ನೋಡಿದ್ದಾರೆಂದೂ ಹೇಳಲಾಗಿದೆ. ಆಗ ನನ್ನ ಶ್ರೀಮತಿ......ಮಲಗಿ ನಿದ್ರಿಸುತ್ತಿದ್ದರು. ಒಂದು ವೇಳೆ ಅವಳಾಗ ನಗ್ನಾವಸ್ಥೆಯಲ್ಲಿದ್ದಿದ್ದರೆ ಗತಿ ಏನು?]

ಜನಗಣತಿಗೆಂದು ಹೋದವರು ಬಾಗಿಲಿನ ಮೇಲೆ ಕನ್ನಡದಲ್ಲಿ ಅಂಕೆಯನ್ನು ಬರೆದಿದ್ದರು. ಅದು ಯಜಮಾನನಿಗೆ ಅರ್ಥವಾಗುತ್ತಿರಲಿಲ್ಲ. ಅವನು ಬರೆದಿದ್ದ ದೂರು ಎಲ್ಲ ಆಫೀಸುಗಳನ್ನೂ ಮುಟ್ಟಿ ತಾಲೂಕು ಕಚೇರಿಗೂ ಬಂದಿತ್ತು. ಈಗ ಏನು ಮಾಡಬೇಕು ಎಂಬ ಪ್ರಶ್ನೆ ಅಧಿಕಾರಿಗಳನ್ನು ಕಾಡುತ್ತಿತ್ತು.

ಕೊನೆಗೆ, ಯಾರಾದರೂ ಹೋಗಿ ಆ ಅಧಿಕಾರಿಗೆ ವಾಸ್ತವ ವಿಷಯವನ್ನು ತಿಳಿಸಿ, ಅವನ ಅನುಮಾನವನ್ನು ಪರಿಹರಿಸಿ ಅತ ತನ್ನ ದೂರನ್ನು ಹಿಂತೆಗೆದುಕೊಳ್ಳುವಂತೆ ಮಾಡುವುದೆ ಹಿತವೆಂಬ ತೀರ್ಮಾನಕ್ಕೆ ಬರಲಾಯಿತು. ಹಿಂದೊಮ್ಮೆ ಅವನ ಬಂಗಲೆಗೆ ಹಾಗೂ ಬ್ರಿಟಿಷ [illegible] ಕೆಲಸಕ್ಕೆ ನಾನು ಹೋಗಿದ್ದೆನಾದ್ದರಿಂದ ನನ್ನನ್ನೇ ಇದಕ್ಕೆ ಆಯ್ಕೆ ಮಾಡಿದರು.

ಮರುದಿನ ನಾನು ಮತ್ತು ಚಿನ್ನಯ್ಯ ಹಾಗೂ ನಮ್ಮ ಕಚೇರಿಯ [illegible] ಬಿಳಿಯರ ಮನೆಗೆ ಹೋಗಿ ಬರಲು ತಾಲೂಕು ಅಮಲ್ದಾರರು ಅಪ್ಪಣೆ ಮಾಡಿದರು. ಚಿನ್ನಯ್ಯ ಒಬ್ಬ ಪ್ರತಿಭಾವಂತ ಚಿತ್ರಗಾರ. ಅವನು ಮರದಲ್ಲಿ ವಿಗ್ರಹ, ಮಂಟಪಾಸನ ಇತ್ಯಾದಿಗಳನ್ನು ಮಾಡುತ್ತಿದ್ದುದೇ ಅಲ್ಲದೆ, ಸೊಗಸಾಗಿ ಚಿತ್ರಗಳನ್ನೂ ಬರೆಯುತ್ತಿದ್ದ.

ನಾವು ಮೂವರೂ ಆ ಬಂಗಲೆಗೆ ಹೋದೆವು. ಚಿನ್ನಯ್ಯ ತಾನು ಬರೆದಿದ್ದ ಎರಡು ಚಿತ್ರಗಳನ್ನು ಜೊತೆಯಲ್ಲಿ ತಂದಿದ್ದ. ಸೀಸದ ಕಡ್ಡಿಯಿಂದ ಸೊಗಸಾಗಿ ಬರೆಯಲ್ಪಟ್ಟ ವಿಕ್ಟೋರಿಯಾ ರಾಣಿಯ ಚಿತ್ರ ಅವುಗಳ ಪೈಕಿ ಒಂದು. ಬಿಳಿಯರು ಸಾಮಾನ್ಯವಾಗಿ ಮಿತಭಾಷಿಗಳು. ಆದರೆ ಮನೆಯ ಯಜಮಾನನ ವೃದ್ಧ ಮಾತೆ ಮಾತಿನಮಲ್ಲಿ. ಯಜಮಾನರು ಬಂದು ಕುಳಿತರು. ನಾನು ಚಿನ್ನಯ್ಯ ಬರೆದಿದ್ದ ಎರಡು ಚಿತ್ರಗಳನ್ನು ಬಿಳಿಯ ಅಧಿಕಾರಿಗೆ ಕೊಟ್ಟೆ. ಅವುಗಳನ್ನಾತ ಮನೆಯವರನ್ನೆಲ್ಲ ಕರೆದು ತೋರಿಸಿದ. ನಾವು ಇತ್ತ ಮಾತನಾಡುತ್ತಿದ್ದಾಗ ಅತ್ತ ಮೇಜಿನ ಮೇಲೆ ಇರಿಸಿದ್ದ ನನ್ನ ಹ್ಯಾಟನ್ನು ಅವರು ಸಾಕಿದ್ದ ಗಿಳಿಯು ಕೊಕ್ಕಿನಿಂದ ಕುಕ್ಕಿ ತೂತು ಮಾಡಿಬಿಟ್ಟಿತ್ತು. ಯಜಮಾನರು ಆತಂಕವನ್ನು ವ್ಯಕ್ತಪಡಿಸಿ, ಗಿಳಿಯನ್ನು ಚೆನ್ನಾಗಿ ಬೈದರು. ಅವರಿಗೆ ನಾನು ಬಂದ ಕಾರಣವನ್ನು ತಿಳಿಸಿ ಹೇಳಿ ಮೊದಲು ಬಂದವರು ತಿಳಿಯದೆ ಕನ್ನಡದಲ್ಲಿ ಅಂಕಿ ಬರೆದದ್ದನ್ನೂ, ಅದು ಗಲಾಟೆಗೆ ಅವಕಾಶ ಮಾಡಿಕೊಟ್ಟದ್ದನ್ನೂ ಹೇಳಿ ತಪ್ಪು ಅಭಿಪ್ರಾಯಗಳಿಂದ ರೆಸಿಡೆಂಟರವರೆಗೆ ಹೋದ ದೂರಿನ ಬಗ್ಗೆ ವಿವರ ತಿಳಿಸಿ, "ನಾನು ಕರೆತಂದಿರುವ ಚಿತ್ರಗಾರ ಚಿನ್ನಯ್ಯನಿಂದ ಸೊಗಸಾಗಿ ಇಂಗ್ಲಿಷಿನಲ್ಲಿ ಸಂಖ್ಯೆಯನ್ನು ಬರೆಸುತ್ತೇನೆ ಎಂದು" ಹೇಳಿದೆ.

"ಇದೆಲ್ಲ ಏನು...?"

"ನಿಮಗೂ ಗೊತ್ತಿದೆ. ಇದು ಜನಗಣತಿಯ ವರ್ಷ. ಇಡೀ ಭಾರತ ದೇಶದಲ್ಲಿ ಈ ಎಣಿಕೆಯ ಕೆಲಸ ನಡೆಯುತ್ತಿದೆ."

"ಹಾಗಾದರೆ ನೀವು ಬರೆಸಿದ ಸಂಖ್ಯೆಯನ್ನು ನಾನು ಕೆಡಿಸಿದ್ದು ತಪ್ಪಾಯಿತೆ...?"

"ಹೌದು... ಇದು ಭಾರತ ಸರಕಾರದ ಆಜ್ಞೆ. ಕೆಡಿಸಿದವರನ್ನು ಕಾನೂನು ಪ್ರಕಾರ ಪ್ರಾಸಿಕ್ಯೂಟ್ ಮಾಡಲು ರಹವುಂಟು."

"ಓ ಹಾಗಿದ್ದರೆ ಕ್ಷಮಿಸಿ, ಮುಂದಿನ ಗಣನೆಗೆ ನೀವೇ ಬನ್ನಿ."

ಚಿನ್ನಪ್ಪ ಕ್ಷಣಮಾತ್ರದಲ್ಲಿ ಬಾಗಿಲ ಅಂಚಿನಲ್ಲಿ ಅಂಕೆ ಬರೆದಿದ್ದ. ವಿಕ್ಟೋರಿಯಾ ರಾಣಿಯ ಚಿತ್ರವನ್ನು ಅವರೇ ಇಟ್ಟುಕೊಂಡು ಚಿನ್ನಯ್ಯನಿಗೆ ಇಪ್ಪತ್ತು ರೂಪಾಯಿ ಇನಾಮು ಕೊಟ್ಟರು. ವೃದ್ಧಮಾತೆ ಒಳಗಿಂದ ನನಗೊಂದು ಹೊಸ ಹ್ಯಾಟನ್ನು ತಂದುಕೊಡುವುದನ್ನು ಮರೆಯಲಿಲ್ಲ. ಈ ರಾದ್ಧಾಂತವೆಲ್ಲ ನಡೆಯುತ್ತಿದ್ದಾಗ ಅವರ ಮನೆಯಲ್ಲಿದ್ದ ಅತಿಥಿಯನ್ನು ನಮಗೆ ಪರಿಚಯ ಮಾಡಿಸಿ ಅವನ ಹೆಸರು ಎಫ್. ಡಬ್ಲ್ಯು. ಹ್ಯೂ ಎಂದು ಹೇಳಿದರು. ಈ ವಿಷಯಗಳನ್ನೆಲ್ಲ ಕೇಳಿ ಹಿರಿಯರಾದ ತಾಲೂಕಿನ ಅಮಲ್ದಾರರು "ಮುಳ್ಳಿನ ಮೇಲೆ ಹರಡಿದ್ದ ಬಟ್ಟೆಯನ್ನು ಜಾಗರೂಕತೆಯಿಂದ ಬಿಡಿಸಿದಿರಿ" ಎಂದು ನನ್ನನ್ನು ಅಭಿನಂದಿಸಿದರು.

ಈ ಪ್ರಸಂಗ ನಡೆದ ಎರಡು ವರ್ಷಗಳ ನಂತರ ಇಂತಹುದೇ ಇನ್ನೊಂದು ಘಟನೆ ಸಂಭವಿಸಿತು. ನನ್ನನ್ನು ಆಗ ಗುಡ್ಡದ ಮನೆ ಎಂಬ ಊರಿನ ಅಳತೆ ಕೆಲಸ ಮಾಡಲು ನಿಯಮಿಸಿದ್ದರು. ಅಡವಿಯ ಮಧ್ಯದ ಗುಡ್ಡ, ಕಣಿವೆ, ಕಾಡು ಮೇಡುಗಳ ನಡುವಿನ ಈ ಪ್ರಾಂತದಲ್ಲಿ ಪ್ರಯಾಣಿಕರು ಇರುವುದೇ ಇಲ್ಲ. ವ್ಯವಸಾಯ ಮಾಡುವ ಜನರಲ್ಲದೆ ಬೇರೆ ಜನರು ಕಾಣುವುದೇ ಅಪರೂಪ. ಮೂರು ನಾಲ್ಕು ಕಾಲುದಾರಿಗಳು ಸೇರುವ ಭಾಗದಲ್ಲಿ ಒಂದು ಸತ್ರವಿದೆ. ಪ್ರಯಾಣವೆಲ್ಲ ಎತ್ತಿನ ಗಾಡಿಯಲ್ಲೇ ಸಾಗಬೇಕು. ಗುಡ್ಡದ ಮನೆಗೆ ಹೋಗುವ ದಾರಿ ಇಲ್ಲಿಂದ ಕವಲೊಡೆಯುತ್ತದೆ. ನೇರವಾದ ದಾರಿಗೆ ಇಲ್ಲಿಯ ಸತ್ರದ ನಂತರ ಪ್ರವೇಶವಿಲ್ಲ.

ಸತ್ರದ ನಂತರದ ದಾರಿಯಿಂದ ಸಾಗಿದರೆ ಸಿಗುವ ಎಸ್ಟೇಟು ಒಬ್ಬ ಬಿಳಿಯ ಸಾಹೇಬನದು ಅನ್ನುತ್ತಾರೆ. ಈ ಬಿಳಿಯ ಸಾಹೇಬನು ಅಡವಿಯ ಮಧ್ಯೆ ನೂರಾರು ಎಕರೆ ಭೂಮಿಯಲ್ಲಿ ಕಾಫಿ, ಏಲಕ್ಕಿ, ಮೆಣಸು, ಸಾಂಬಾರ ಪದಾರ್ಥಗಳ, ಧಾನ್ಯಗಳ ವ್ಯವಸಾಯ ಮಾಡಿಸುತ್ತಿದ್ದ. ಒಂದು ಪ್ರಶಸ್ತಜಾಗದಲ್ಲಿ ಬಂಗಲೆಯನ್ನು ಕಟ್ಟಿಸಿದ್ದ. ತನಗಾಗಿಯೇ ಒಂದು ಗ್ರಾಮದಲ್ಲಿ ಟಪಾಲ್ ಆಫೀಸನ್ನು ಮಂಜೂರು ಮಾಡಿಸಿಕೊಂಡಿದ್ದ. ಒಬ್ಬ ಟಪಾಲ್ ಮನುಷ್ಯ ಕಾಗದ ಪತ್ರಗಳಲ್ಲದೆ, ವರ್ತಮಾನ ಪತ್ರಿಕೆ, ಮಾಸಪತ್ರಿಕೆಗಳನ್ನೂ ಹೊತ್ತು ತರುತ್ತಿದ್ದ. ಸಾಹೇಬ ತನ್ನ ಎಸ್ಟೇಟಿನಲ್ಲಿ ಕೆಲಸಮಾಡುವವರಿಗಾಗಿ ದೂರದಲ್ಲಿ ಗುಡಿಸಲುಗಳನ್ನು ಕಟ್ಟಿಸಿ, ನಿತ್ಯೋಪಯೋಗದ ವಸ್ತುಗಳಿಗೆಂದು ಒಂದು ಉಗ್ರಾಣವನ್ನೂ ಇಟ್ಟಿದ್ದ. ತನ್ನ ವಾಹನಗಳು ತಿರುಗಾಡುವುದಕ್ಕೆಂದೇ ತನ್ನ ಜಮೀನಿನಲ್ಲಿ ನಾಲ್ಕು ಐದು ಮೈಲಿ ಫಾಸಲೆಯಲ್ಲಿ ರಸ್ತೆಗಳನ್ನು ಮಾಡಿಸಿಕೊಂಡು ಆ ರಸ್ತೆಯಲ್ಲಿ ಇತರರು ಬರದಂತೆ ಅಡ್ಡಿಮಾಡಿದ್ದ. ಗಾಡಿಗಳು ಇವನ ರಸ್ತೆಯಲ್ಲಿ ಓಡಾಡುತ್ತಿರಲಿಲ್ಲ. ಉಗ್ರಕೋಪಕ್ಕೆ ಹೆಸರಾಗಿದ್ದ ಇವನ ಗುಂಡಿನೇಟಿಗೆ ಅನೇಕರು ಬಲಿಯಾಗಿದ್ದರೆಂದು ಪ್ರತೀತಿ. ಇವನ ಹೆಸರನ್ನು ಕೇಳಿ ಎಲ್ಲರೂ ಹೆದರುತ್ತಿದ್ದರು.

ಸುತ್ತಮುತ್ತಲೂ ಗ್ರಾಮಗಳೇ ಇಲ್ಲದ ಪ್ರಯುಕ್ತ ಆ ಸತ್ರವನ್ನೇ ಗ್ರಾಮವೆಂದು ಕರೆಯುತ್ತಿದ್ದರು. ಇದರ ಸಮೀಪ ನಾಲ್ಕಾರು ಚಿಲ್ಲರೆ ಅಂಗಡಿ, ಒಂದು ಹೆಂಡದಂಗಡಿ ಇದ್ದುವು. ಸತ್ರದಲ್ಲಿ ಇಳಿದುಕೊಳ್ಳಲು ಕೊಠಡಿಗಳಿದ್ದುವು. ಕುಡಿಯುವ ನೀರಿನ ಭಾವಿಯೂ ಇತ್ತು. ಇಲ್ಲಿಂದ ಸ್ವಲ್ಪ ದೂರದಲ್ಲಿ ಹೆಬ್ಬಾಗಿಲೊಂದು ಕಾಣುತ್ತಿತ್ತು. ಅದೇ ಸಾಹೇಬನ ಎಸ್ಟೇಟಿನ ಮಹಾದ್ವಾರ. ಆದರೆ ಅಲ್ಲಿ ಯಾರೂ ಹೋಗಿ ಬರುವ ವಾಡಿಕೆ ಇರಲಿಲ್ಲ.

ನಾವು ದಂಪತಿಗಳು, ಸಣ್ಣ ಮಗು, ಗಾಡಿಯಲ್ಲಿ ಸತ್ರದವರೆಗೆ ಪ್ರಯಾಣ ಮಾಡಿ, ಅಲ್ಲಿ ತಂಗಿದ್ದು, ಅಲ್ಲಿಂದ ಹೋಗಬೇಕಾದ ಗುಡ್ಡದ ಮನೆಗೆ ನಡೆದು ಹೋಗಲು ಯೋಚಿಸಿ ಪಯಣಿಸಿದ್ದೆವು. ಬೆಳಗಾಗುವುದಕ್ಕೆ ಸಾಕಷ್ಟು ಸಮಯವಿದ್ದಾಗಲೇ ಗಾಡಿಯನ್ನು ಕಟ್ಟಿಸಿದೆವು. ಎತ್ತುಗಳು ನಿಧಾನವಾಗಿ ಸಾಗುತ್ತಿದ್ದವು. ನಾವು ಗಾಡಿಯಲ್ಲಿ ಮಲಗಿ ನಿದ್ರಿಸುತ್ತಿದ್ದೆವು.

ಸೂರ್ಯೋದಯವಾಗಿ ಸುಮಾರು ಅರ್ಧ ಗಂಟೆಯಾಗಿರಬೇಕು. ಸೂರ್ಯನ ಕಿರಣಗಳು ನೇರವಾಗಿ ಗಾಡಿ ಹೊಡೆಯುವವನ ಮುಖದ ಮೇಲೆ ಬಿದ್ದು ಅವನಿಗೆ ಎಚ್ಚರವಾಗಿ ನೋಡು-

ತ್ತೀನೆ... ಗಾಡಿ ಸಾಹೇಬನ ಬಂಗಲೆಯ ಮುಂದೆ ಬಂದು ನಿಂತಿದೆ! ಆ ಸಾಹೇಬ ನೋಡುತ್ತಿದ್ದಾನೆ. ಗಾಡಿಯವನಿಗೆ ಭಯವಾಗಿ ಬಿಟ್ಟಿತು. ಸಾಹೇಬನಿಗೂ ಆಶ್ಚರ್ಯವಾಗಿರಬೇಕು. ಅಪ್ಪಿ ತಪ್ಪಿ ಯಾದರೂ ಗಾಡಿಗಳು ಬಾರದಿರುವಲ್ಲಿ, ಇಂದು ನಿರ್ಭಯವಾಗಿ ಯಾವ ಆತುರವೂ ಇಲ್ಲದೆ ತಾನು ಎದುರಿಗೇ ನಿಂತಿರುವುದನ್ನೂ ಲೆಕ್ಕಿಸದೇ ತನ್ನ ಬಂಗಲೆಯ ಮುಂದೆ ಬಂದು ನಿಂತಿರುವುದು ಸೋಜಿಗವಾದರೂ ಏನೋ ಮಹತ್ವದ ಕಾರಣವಿರಬೇಕೆಂದು ಅವನೂ ಬಗೆದಿರಬೇಕು.

“ಅಪ್ಪೋ – ಅಪ್ಪೋ ಏಳಪ್ಪೋ – ಗಾಡಿ ಸಾಹೇಬನ ಬಂಗಲೇ ಮುಂದೆ ಬಂದು ಬುಟ್ಟೈತೆ. ಬಿಳೀ ಸಾಹೇಬ ನೋಡ್ತಾ ನಿಂತವನೇ. ಏಳಪ್ಪ ಬೇಗ ಏಳು... ಈಗ ಏನು ಗತಿ?”

ಗಾಡಿಯವನ ಕೂಗಾಟದಿಂದ ಎಚ್ಚರಗೊಂಡು ನೋಡಿದೆ. ಧೈರ್ಯಗೆಡದೆ ಗಾಡಿಯಿಂದೀಚೆಗೆ

ಧುಮುಕಿ, ಸಾಹೇಬನ ಸಮ್ಮುಖಕ್ಕೆ ಹೋಗಿ ನಮಸ್ಕಾರ ಎಂದೆ. ನೋಡುತ್ತೇನೆ. ಅದೇ ಎಫ್. ಡಬ್ಲ್ಯು ಹ್ಯೂ ಸಾಹೇಬರು." ಅವರ ಮುಖದ ಮೇಲೆ ಕೋಪಕ್ಕಿಂತ ಹೆಚ್ಚಾಗಿ ಅಚ್ಚರಿ ತುಂಬಿತು. ನಾನು ನಮಸ್ಕರಿಸಿದೆ.

"ನಮಸ್ಕಾರ... ನೀವು ಯಾರು...?"

"ನಾನು ನಿಮ್ಮ ಅತಿಥಿ."

"ನಿಮ್ಮ ಕೆಲಸ ಏನಿತ್ತು?"

"ಸರ್ವೇ ಮಾಡುವುದಿತ್ತು!"

"ಗಾಡಿಯಲ್ಲಿ ಯಾರಿದ್ದಾರೆ?"

"ನನ್ನ ಸಂಸಾರದವರು!!"

"ಇಲ್ಲಿಗೆ ಏಕೆ ಬಂದಿದ್ದೀರಿ...?"

"ರಕ್ಷಣೆಗಾಗಿ!!"

ಸಾಹೇಬ ಒಮ್ಮೆಲೆ ಒಳಕ್ಕೆ ಹೋದ. ಕಾಲು ಗಂಟೆಯ ನಂತರ ರುಮಾಲು ಕಟ್ಟಿಕೊಂಡು ಪಂಚೆ, ಅಂಗಿ ತೊಟ್ಟವರೊಬ್ಬರು ನಗನಗುತ್ತ ಹೊರಗೆ ಬಂದರು. ಅವರ ಹಣೆಯಲ್ಲಿ ವಿಭೂತಿ ರಾರಾಜಿಸುತ್ತಿತ್ತು. ಬಂದವರೆ ಕೈ ಸನ್ನೆಯಿಂದ ಗಾಡಿಯನ್ನು ಬೇರೆ ಕಡೆ ತಿರುಗಿಸುವಂತೆ ಗಾಡಿಯವನಿಗೆ ಸೂಚಿಸುತ್ತ ಪಕ್ಕದಲ್ಲಿದ್ದ ಚಿಕ್ಕ ರಸ್ತೆಯಲ್ಲಿ ನಡೆದರು. ಆತನನ್ನು ಗಾಡಿ ಹಿಂಬಾಲಿಸಿತು. ನಾವು ಒಂದು ಚಿಕ್ಕ ಮನೆಯನ್ನು ತಲುಪಿದೆವು.

ರುಮಾಲು ತೊಟ್ಟ ಮನುಷ್ಯನ ಹೆಸರು ಸುಬ್ಬರಾಯ. ಹ್ಯೂ ಸಾಹೇಬರ ಕಾರ್ಯದರ್ಶಿ. ಅವರ ತಾಯಿ ಮತ್ತು ಹೆಂಡತಿ ಇಷ್ಟೇ ಜನರ ಸಂಸಾರ. ಹಿರಿಯ ಹೆಂಗಸು ಅಕ್ಕರೆಯಿಂದ ನಮ್ಮನ್ನು ಮಾತನಾಡಿಸಿದರು.

"ಬಾರಮ್ಮ ತಾಯಿ ಬಾ. ಮಗುವನ್ನು ಇಲ್ಲಿ ಕೊಡು, ನಿಧಾನವಾಗಿ ಇಳಿ. ನಾವು ನಮ್ಮವರ ಮುಖವನ್ನು ಕಂಡೇವೆಯೆ ಎಂದು ಕಾಯುತ್ತಿದ್ದೆವು" ಎಂದರು.

"ನಮ್ಮ ಸಾಹೇಬನಿಗೆ ಅದೇನು ಮಂತ್ರ ಹಾಕಿದಿರಿ...? ಆತ ಈ ದಿನ ಅಷ್ಟೊಂದು ಔದಾರ್ಯ, ಸಭ್ಯತೆಯನ್ನು ತೋರಿಸಿದ್ದಾನೆ!! ನಿಮಗೆ ಆತನ ಪರಿಚಯವಿತ್ತೆ?" ಎಂದರು ಸುಬ್ಬರಾಯರು.

ಸುಬ್ಬರಾಯರ ತಾಯಿ ಮತ್ತು ಪತ್ನಿಯರೊಂದಿಗೆ ನನ್ನ ಹೆಂಡತಿ ಬಳಿ ಸೇರಿ ಬಹುದಿನಗಳ ನಂತರ ಭೇಟಿಯಾದ ಬಂಧುಗಳಂತೆ ಉಭಯ ಕುಶಲೋಪರಿ ನಡೆಸಿದ್ದಳು. ಅಷ್ಟು ಹೊತ್ತಿಗೆ ಸಾಹೇಬರು ಒಬ್ಬ ಆಳಿನ ಕೈಯಲ್ಲಿ ದೇಶ ವಿದೇಶಗಳ ದಿನ ಪತ್ರಿಕೆ, ಮಾಸ ಪತ್ರಿಕೆಗಳನ್ನು ಓದಲು ಕಳುಹಿಸಿದರು. ಮಗುವೂ ಮನೆಯವರಿಗೆ ಹೊಂದಿಕೊಂಡಿತು. ನನ್ನ ಹೆಂಡತಿ ತನಗೆ ತವರು ಮನೆ ಕಂಡಷ್ಟು ಸಿರಿಯಾಯಿತೆಂದು ಹೇಳಿಕೊಂಡಳು. ಎರಡು ದಿನ ವಿಶ್ರಾಂತಿ ಜೀವನ ಸಾಗಿತು. ಗಾಡಿಯವನು ಹಿಂದಿರುಗುತ್ತೇನೆಂದು ಕೇಳಿಕೊಂಡ. ಸತ್ರದ ವರೆಗೆ ಹೋಗಿ ಅವನನ್ನು ಸಂತೆಗೆ ಹೋಗುವ ಜನರೊಂದಿಗೆ ಜತೆ ಮಾಡಿ ಕಳುಹಿಸಿ ಕೊಟ್ಟೆವು.

ಗುಡ್ಡದ ಮನೆ ಒಂದೇ ಒಂದು ಮನೆಯ ಊರು.. ಒಂದೇ ಮನೆಯಾದರೂ ಆ ಮನೆಗೆ ಸಂಬಂಧಪಟ್ಟ ಅನೇಕ ಗುಡಿಸಲುಗಳಂಥ ಹಟ್ಟಿಗಳು ಅಲ್ಲಲ್ಲಿ ಗುಂಪಾಗಿದ್ದವು. ದಾಯಾದಿಗಳ ವ್ಯಾಜ್ಯದಿಂದ ಜಮೀನಿನ ಅಳತೆ ಕೋರ್ಟಿಗೆ ಒಳಪಟ್ಟು ಮೋಜಣೀದಾರನಿಂದ ನನ್ನ ಪಾಲಿಗೆ ಈ ಕರ್ತವ್ಯ ಬಂದಿತ್ತು. ನಕಾಶೆಯ ನೆರವಿನಿಂದ ಗುಡ್ಡದ ಮನೆಯ ದಿಕ್ಕನ್ನು ನಿರ್ಧರಿಸಿಕೊಂಡು ಒಮ್ಮೆ ಭೇಟಿ ಇತ್ತು ಬರಬೇಕೆಂದುಕೊಂಡು ಸುಬ್ಬರಾಯರಿಗೆ ಹೇಳಿ ಹೊತ್ತು ಹುಟ್ಟುವ ಮೊದಲೇ ಹೊರಟೆ.

ಮಸಕು ಬೆಳಕಿನಲ್ಲೇ ಹೊರಟು ಗುಡ್ಡ ಬೆಟ್ಟದ ಹಾದಿಯನ್ನು ಸವೆಸುತ್ತ ನಡೆದೆ. ನೂರಾರು ಕಾಲುದಾರಿಗಳು ಕಾಣಿಸುತ್ತಿದ್ದವು. ಕೇಳೋಣವೆಂದರೆ ನರಪಿಳ್ಳೆಯ ಸುಳಿವೂ ಇಲ್ಲ! ಸಂತೆಯ ದಿನ ಮಾತ್ರ ಜನ ಓಡಾಡುತ್ತಿದ್ದಿರಬೇಕು. ಕೈಗೆ ಸಿಕ್ಕ ಒಬ್ಬಿಬ್ಬ ದನಗಾಹಿಗಳಿಂದ ದಾರಿ ಸರಿಪಡಿಸಿಕೊಳ್ಳುತ್ತ ಮುಂದುವರೆದೆ.

ಮಧ್ಯಾಹ್ನ ಒಂದು ಘಂಟೆಯ ಸಮಯಕ್ಕೆ ಗುಡ್ಡದ ಮನೆಯ ಆವರಣವನ್ನು ನಾನು ತಲುಪಿದೆ. ಇದು ಒಂದು ಸುಂದರವಾದ ಸ್ಥಳ. ಸುತ್ತಲೂ ಸಣ್ಣ ಸಣ್ಣ ಝರಿಗಳಿಂದಾವೃತವಾಗಿದ್ದ ಚಿಕ್ಕ ಗುಡ್ಡದ ಮೇಲೊಂದು ಮನೆ. ಇದು ಒಂದು ವಾಸದ ಮನೆಯಂತಿರದೆ ಸಣ್ಣ ಕೋಟೆಯಂತೆ ಕಟ್ಟಲ್ಪಟ್ಟಿತ್ತು. ಬಾಗಿಲು ಕಟ್ಟಡ

ಕಲ್ಲಿನಿಂದಾಗಿತ್ತು. ಮನೆಯ ಪಾರ್ಶ್ವದಲ್ಲಿ ಅನೇಕ ಗುಡಿಸಲುಗಳಿದ್ದು ಎಲ್ಲಕ್ಕೂ ಬೀಗ ಹಾಕಲಾಗಿತ್ತು. ಈ ವೇಳೆಯಲ್ಲೂ ಜನ ಅಥವಾ ಜಾನುವಾರುಗಳ ಸುಳಿವಿರಲಿಲ್ಲ.

ಆ ದೊಡ್ಡ ಬಾಗಿಲಿನಲ್ಲಿ ಪ್ರವೇಶಿಸಿದೆ. ವಿಶಾಲವಾದ ಬಯಲು, ಪೌಳಿ ಗೋಡೆ ಅಲ್ಲಿಂದ ಮುಂದೆ ಎರಡು ಬದಿಯಲ್ಲೂ ದೊಡ್ಡ ಜಗಲಿಗಳು. ಅದಕ್ಕೆಲ್ಲ ಚಾಪೆಗಳನ್ನು ಹಾಸಿ, ಅದರ ಮೇಲೆ ಜಮಖಾನೆಗಳನ್ನು ಹೊದಿಸಲಾಗಿತ್ತು. ಹತ್ತಾರು ಬಿಳಿಯ, ಶಂಖದಂತೆ ಹೊಳೆಯುವ ಒರಗುದಿಂಬುಗಳನ್ನು ಗೋಡೆಗೆ ಆನಿಸಿಟ್ಟಿದ್ದರು. ಎರಡು ಜಗುಲಿಗಳ ಮಧ್ಯ ಸಾಗಿದರೆ ವಿಶಾಲವಾದ ಬಾಗಿಲು. ಅಲ್ಲಿ ನಿಂತು ನೋಡಿದರೆ ಅನೇಕ ಮರದ ಕಂಬಗಳಿಂದ ಕೂಡಿದ ಭವ್ಯವಾದ ತೊಟ್ಟಿಯ ಮನೆ, ಹಜಾರದ ವೇದಿಕೆಗಳು. ಆದರೆ ಒಂದು ಪ್ರಾಣಿಯಾದರೂ ಕಾಣಬೇಕು......

ನನಗೆ ಇದು ವಿಚಿತ್ರವಾದ ಅನುಭವ. ಮನೆ ಪುರಾತನವಾದುದೆಂದು ಅನ್ನಿಸಿತು. ಅಲ್ಲಿಂದ ಮುಂದೆ ಹೋಗಲು ದಿಗಿಲಾಯಿತು. ಆದುದರಿಂದ ಆದದ್ದಾಗಲಿ ಎಂದು ಒಂದು ದಿಂಬಿನ ಆಶ್ರಯದಿಂದ ಜಗಲಿಯ ಮೇಲೆ ಕುಳಿತು ಯಾರಾದರೂ ಬರಬಹುದೆಂದು ನಿರೀಕ್ಷಿಸುತ್ತಿದ್ದೆ. ಎಷ್ಟೋ ಹೊತ್ತಿನ ನಂತರ ಯಾರೋ ನಿಧಾನವಾಗಿ ಬಂದಂತಾಯಿತು. ನೋಡಿದರೆ ಒಬ್ಬ ಅಜ್ಜಿ. ಹತ್ತಿರಕ್ಕೆ ಬಾರದೆ, ನಿಂತಲ್ಲಿಂದಲೇ ಒಂದೇ ಒಂದು ಕ್ಷಣ ನನ್ನನ್ನು ನೋಡಿ ಬಂದ ಹಾಗೆಯೇ ಮರೆಯಾಗಿಬಿಟ್ಟರು. ನನಗೆ ನೆನಪಿರುವುದು ಆಕೆ ಧರಿಸಿದ್ದ ಅನೇಕಾನೇಕ, ಭಾರದ ಅಮೂಲ್ಯದ ಸ್ವರ್ಣಾಭರಣಗಳು. ಬಂದಾಕೆ ಒಂದು ಮಾತನ್ನೂ ಆಡದೆ ಹೊರಟು ಹೋದರಲ್ಲಾ, ಮುಂದೇನು ಮಾಡಬೇಕೆಂದು ಯೋಚಿಸುತ್ತಿದ್ದೆ.

ಅನಂತರ ಬಂದವರು ಒಬ್ಬ ವೃದ್ಧ. ಶುಭ್ರವಾಗಿ ಮಡಿ ಮಾಡಿದ ಧೋತರವನ್ನುಟ್ಟು, ಕಸೆ ಅಂಗಿ ತೊಟ್ಟಿದ್ದರು. ಅವರನ್ನು ನೋಡಿ ಎದ್ದು ನಿಂತೆ.

“ನಮಸ್ಕಾರ ಸ್ವಾಮಿ. ತಾವು ಯಾರೋ ಸರಕಾರದಿಂದ ದಯಮಾಡಿಸಿದ್ದೀರಿ ಎಂದು ಕಾಣುತ್ತದೆ. ನಾನು ವಯಸ್ಸಾದವನು. ಸರಿಯಾಗಿ ಕಾಣುವುದಿಲ್ಲ. ದಯವಿಟ್ಟು ನಿಮ್ಮ ಪರಿಚಯ ಹೇಳಬೇಕು," ಎಂದರು.

ನಾನು ತಕ್ಷಣವೇ ಮುನ್ನಡೆದು ಅವರ ಕೈ ಹಿಡಿದು ಮೆಲ್ಲನೆ ನಡೆಸಿ ಒಂದು ದಿಂಬಿನ ಬಳಿ ಕುಳ್ಳಿರಿಸಿ “ವಿಶ್ರಮಿಸಿರಿ...ನನ್ನ ಪರಿಚಯ ಹೇಳಿಯೇನು," ಎಂದೆ.

“ಶಿವ ಶಿವ ನಿಮ್ಮಿಂದ ಸೇವೆ ಮಾಡಿಸಿಕೊಂಡ ಹಾಗಾಯಿತಲ್ಲ!" ಎಂದರು ಅವರು.

“ನೀವು ವಯಸ್ಸಾದವರು. ನನಗಿಂತ ಎಷ್ಟೋ ಹಿರಿಯರು. ನಾನೇನು ಸೇವೆ ಮಾಡಿದ್ದೇನೆ. ಅದು ನನ್ನ ಕರ್ತವ್ಯ," ಎಂದೆ.

ವೃದ್ಧರು ಮರ್ಯಾದಾರ್ಥವಾಗಿ ನಾಲ್ಕು ಒಳ್ಳೆಯ ನಿಂಬೆ ಹಣ್ಣುಗಳನ್ನು ಕೊಟ್ಟರು. ನಾನು ಬಾಗಿ ಬೊಗಸೆಯೊಡ್ಡಿ ಸ್ವೀಕರಿಸಿದೆ. ನನ್ನ ವಿವರ ಹೇಳಿದೆ.

“ಇನ್ನು ನನ್ನ ವಿಚಾರ ಹೇಳುತ್ತೇನೆ. ನಾನು ಸರಕಾರದ ಸರ್ವೇಯರ್. ಸರಕಾರಿ ಕೆಲಸದ ಮೇಲೆ ಬಂದಿದ್ದೇನೆ. ಈ ಊರಿನಲ್ಲಿ ನನಗಿರುವುದು ಒಂದೇ ದಿನದ ಕೆಲಸ. ಅದು ವಿರೂಪಾಕ್ಷಗೌಡರ ಜಮೀನಿಗೆ ಸಂಬಂಧಪಟ್ಟುದು. ಇಲ್ಲಿಗೆ ಬಂದ ಮೇಲೆ ನಿಮ್ಮಂಥ ಹಿರಿಯರ ದರ್ಶನ ಮಾಡದೆ ಹೋಗುವುದು ಹೇಗೆ ಅಂತ ಬಂದಿದ್ದೀನಿ."

“ತಾವು ಬಹಳ ದೊಡ್ಡ ಮಾತು ಹೇಳುತ್ತಿದ್ದೀರಿ. ತಾವು ಒಬ್ಬರೇ ಬಂದಿದ್ದೀರೋ ಅಥವಾ ಸಂಸಾರ ಸಮೇತ ಬಂದಿದ್ದೀರೋ?"

“ಸಂಸಾರವನ್ನು ಬಿಳಿಯ ಸಾಹೇಬ-ಹ್ಯಾ[illegible]ರ ಎಸ್ಟೇಟಿನ ಗುಮಾಸ್ತ ಸುಬ್ಬರಾಯರ ಮನೆಯಲ್ಲಿ ಬಿಟ್ಟು ಬಂದಿದ್ದೇನೆ. ಒಂದು ದಿನದ ಕೆಲಸಕ್ಕೆ ಇಲ್ಲಿಗೆ ಅವರನ್ನೆಲ್ಲಾ ಏಕೆ ಕರೆತರಬೇಕೆಂದು ಹಾಗೆ ಮಾಡಿದೆ. ಕೆಲಸ ಮುಗಿಸಿಕೊಂಡು ಮುಂದಿನ ಗ್ರಾಮಕ್ಕೆ ಹೊರಡಬೇಕು."

“ಯಾಕೆ ಸ್ವಾಮಿ? ನಾವೇನಂಥ ಅಪರಾಧ ಮಾಡಿದ್ದೇವೆ. ಕುಟುಂಬ ಸಮೇತ ಕೆಲವು ದಿನ ಇಲ್ಲಿಯೂ ತಂಗಬಾರದೆ? ನನ್ನವೂ [illegible]...?"

"ನಿಮ್ಮ ಜಮೀನುಗಳೆಲ್ಲ ನಿಮ್ಮದೇ ಆಗಿವೆಯಲ್ಲ. ವಿಭಾಗ ಮಾಡುವುದೇನಿದೆ...?"

"ಸ್ವಾಮಿ, ನಾನು ಎಷ್ಟೋ ದಿವಸಗಳಿಂದ ನಿಮ್ಮಂಥವರೊಬ್ಬರು ಬರಲಿ ಎಂದು ದೇವರಲ್ಲಿ ಬೇಡುತ್ತಿದ್ದೆ. ತಾವು ಸಾತ್ವಿಕರು. ನನ್ನ ರೊಟ್ಟಿ ಜಾರಿ ತುಪ್ಪದಲ್ಲಿ ಬಿತ್ತು."

"ಅಂದರೆ ಏನು...?"

"ನನಗೆ ಮೂರು ಜನ ಗಂಡು ಮಕ್ಕಳೂ, ಒಬ್ಬ ಮಗಳೂ ಇದ್ದಾಳೆ. ನಾನು ಜೀವಂತನಾಗಿರುವಾಗಲೇ ಯಾರಿಗೂ ಅನ್ಯಾಯವಾಗದಂತೆ ಪಾಲು ಮಾಡಿಕೊಡಬೇಕು ಅಂದುಕೊಳ್ಳುತ್ತಿದ್ದೆ. ನಿಮ್ಮಂಥ ಸಾತ್ವಿಕರು ಸಿಕ್ಕಬೇಕಲ್ಲ. ನೀವು ದಯಮಾಡಿಸಿದ್ದೀರಿ; ತಿಂಗಳೊಪ್ಪತ್ತು ನಮ್ಮ ಮನೆಯಲ್ಲಿದ್ದು, ಸರಕಾರಿ ಕೆಲಸದ ನಂತರ ನಮ್ಮ ಕೆಲಸವನ್ನೂ ದಯವಿಟ್ಟು ಮಾಡಿಕೊಡಿ. ವಿರೂಪಣ್ಣನೂ ಬೇರೆಯವನಲ್ಲ. ನನ್ನ ತಮ್ಮನೇ ಆಗಬೇಕು. ಅವರ ಜಮೀನುಗಳು ಕೊಂಚ ದೂರದಲ್ಲಿವೆ. ಅವನನ್ನೂ, ಅವನ ಮಕ್ಕಳನ್ನೂ, ನಮ್ಮ ಮಕ್ಕಳನ್ನೂ ಕರೆಸುತ್ತೇನೆ. ಎಲ್ಲರೊಂದಿಗೆ ಒಂದು ತಿಂಗಳಾದರೂ ಇರುವ ಮನಸ್ಸು ಮಾಡಿ."

"ಆಗಲಿ ನೋಡೋಣ."

"ಸುಬ್ಬರಾಯರು ನಿಮಗೆ ಬಂಧುಗಳೋ—ಗೆಳೆಯರೋ"?

"ನನ್ನೆಯಿಂದ ಬಂಧುಗಳೂ ಹೌದು, ಸ್ನೇಹಿತರೂ ಹೌದು."

"ಅಂದರೆ?"

"ಎಲ್ಲಾ ಆ ಬಿಳಿ ಸಾಹೇಬರ ಅನುಗ್ರಹ."

"ಆ ಹಾ... ಅವನು ಅನುಗ್ರಹಿಸಿದ ಅಂದರೆ ನೀವು ದೇವಲೋಕದಿಂದ ಬಂದ ಹಾಗಾಯಿತು. ಈಗ ಇಲ್ಲಿಯ ಆಳುಗಳೆಲ್ಲ ಕೆಲಸಕ್ಕೆ ಹೊರಟು ಹೋಗಿದ್ದಾರೆ. ಹೊತ್ತು ಮುಟ್ಟುವಾಗ ಹೋದವರು ಸಂಜೆಗೇ ಬರುವುದು. ಎಲ್ಲ ಪದಾರ್ಥಗಳೂ ತಲೆ ಹೊರೆಯ ಮೇಲೆ ಬರಬೇಕು. ಅಂದಹಾಗೆ ತಾವು ಬ್ರಾಹ್ಮಣರೆಂದು ಕಾಣುತ್ತದೆ."

"ಹೌದು."

"ಸ್ವಾಮಿ, ನನಗೆ ವಯಸ್ಸಾಗಿದೆ. ನಾನು ಮೀರುತ್ತಿದೆ. ತಾವು ಬ್ರಾಹ್ಮಣರು ಮನೆಗೆ ದಯಮಾಡಿಸಿದ್ದೀರಿ... ನಿಮಗೆ ಊಟ ಮಾಡಿಸದೆ ನಾನು ಊಟ ಮಾಡುವುದು ಹೇಗೆ?" ಎಂದು ಕಂಬನಿದುಂಬಿದರು.

"ನೀವು ವೃದ್ಧರು— ನಾನು ಯುವಕ. ನನ್ನ ನಿಮಿತ್ತ ನಿಮ್ಮನ್ನು ಉಪವಾಸವಿರಿಸುವುದು ಧರ್ಮವಲ್ಲ. ಸ್ವಲ್ಪ ಹಾಲನ್ನು ಕೊಡಿಸಿ, ಊಟ ಮಾಡಿದಂತೆ ಆಯಿತು. ತಾವು ಊಟಕ್ಕೇಳಿ."

"ಅದೆಂಥ ಕಕಲಾತಿಯ ಧರ್ಮ...! ಅದೆಲ್ಲ ಸಾಧ್ಯವಿಲ್ಲ. ಇಲ್ಲಿ ಪರಸ್ಥಳದವರಿಗೆಂದು ಪ್ರತ್ಯೇಕ ಮನೆಯ ವ್ಯವಸ್ಥೆ ಇದೆ. ಹಿತ್ತಲಿನಲ್ಲಿ ಭಾವಿ ಇದೆ. ನೀವು ಸ್ನಾನ ಮಾಡಿ, ಹಾಲು ಕುಡಿದು ಒಲೆ ಹೊತ್ತಿಸಿದರೆ ಮಾತ್ರ ನಾನು ಊಟಕ್ಕೆ ಏಳುತ್ತೇನೆ."

ಮಾತಿಗೆ ಮಾತು ಜೋಡಿಸಿ ವೃಥಾ ಕಾಲಹರಣ ಮಾಡದೆ ಹಿತ್ತಲ ಭಾವಿಗೆ ಹೋದೆ. ಅದು ದಿವ್ಯವಾದ ಕಲ್ಯಾಣಿ, ಬೇಗ ಸ್ನಾನ ಮಾಡಿ ಬಂದೆ. ಜಿಡರಿಯ ಮನೆಯ ಬಾಗಿಲನ್ನು ತೆರೆದಿದ್ದರು. ಅಡುಗೆ ಮಾಡಿಕೊಳ್ಳಲು ಎಲ್ಲ ಪದಾರ್ಥಗಳೂ ಸಿದ್ಧವಾಗಿದ್ದವು. ಅಜ್ಜಿ ಒಲೆ ಹೊತ್ತಿಸಿ ಅಗ್ನಿ ಪ್ರತಿಷ್ಠೆ ಮಾಡಿದ್ದರು, ನಾನು ಹಾಲು ಕುಡಿದ ನಂತರವೇ ವೃದ್ಧರು ಊಟಕ್ಕೆದ್ದದ್ದು.

ಪರಸ್ಥಳದವರಿಗೆಂದು ಒಂದು ಮನೆ ಸದಾ ಸಿದ್ಧವಾಗಿದ್ದು, ಸಾರಿಸಿ ರಂಗೋಲಿ ಇಟ್ಟು, ತೊಳೆದ ಪಾತ್ರೆ ಪದಾರ್ಥಗಳ ಸಮೇತ ಕಾಪಿಟ್ಟಿರಿಸಿದ್ದು, ಬೀಗ ಹಾಕಿರುತ್ತಾರೆ. ಪರಸ್ಥಳದಿಂದ ಯಾರಾದರೂ ಬಂದಾಗ ಮಾತ್ರ ಬೀಗ ತೆಗೆಯುವ ವ್ಯವಸ್ಥೆ ಈ ಮನೆಯಲ್ಲಿ ವಂಶಪಾರಂಪರ್ಯವಾಗಿ ನಡೆದುಕೊಂಡು ಬಂದಿದೆ ಎಂದು ಊಟದ ನಂತರ ಗೊತ್ತಾಯಿತು.

ಅಂದು ಊಟವಾದ ಮೇಲೆ ಆ ವೃದ್ಧರ ಅಪ್ಪಣೆ ಪಡೆದು ಬಿಳಿಯ ಸಾಹೇಬನ ಎಸ್ಟೇಟಿಗೆ ವಾಪಸಾದೆ. ನನ್ನ ಯೋಜನೆಯನ್ನು ತಿಳಿಸಿದಾಗ ಅದು ಸುಬ್ಬರಾಯರ ತಾಯಿಗೆ ಹಿಡಿಸಲಿಲ್ಲ.

"ನೀವುಗಳು ಅಕಸ್ಮಾತ್ ಬಂದಿರಿ. ನಮಗೆ ನಿಮ್ಮ ಜನರ ಮುಖ ದರ್ಶನವೇ ಇರಲಿಲ್ಲ. ನಿನ್ನ

ಸರಕಾರದ ಕೆಲಸವಾದ ನಂತರ ವೃದ್ಧರ ಜಮೀನಿನ ಅಳತೆಯನ್ನು ಮುಗಿಸಿಕೊಟ್ಟೆ. ಹಗಲೆಲ್ಲ ತೋಟ ಗದ್ದೆ ಗಳಲ್ಲಿ ಕೆಲಸ ಮಾಡಿ ರಾತ್ರಿ ಕೋಟಿಕಲ್ಲು ಮನೆಯಲ್ಲಿ ಜವಾಯಿಸುತ್ತಿದ್ದೆವು. ವಿನೋದವಾಗಿ ಕಾಲ ಕಳೆದೆವು. ನಮ್ಮ ಕೆಲಸ ಮುಗಿಸುವ ವೇಳೆಗೆ ವೃದ್ಧರು ಮೊಟ್ಟ ಮೊದಲದಿನ ಆಶಿಸಿದಂತೆ ಒಂದು ತಿಂಗಳೇ ಕಳೆದು ಹೋಯಿತು. ನಮಗಂತೂ ನಿತ್ಯ ಉತ್ಸವ, ನಿತ್ಯ ಮಂಗಳ ಎಂಬಂತೆ ಆಗಿದ್ದು ಸುಖ ಸೂರೆಯಾಯಿತು.

ಹೊರಡುವ ದಿನ ಬಂತು. ಬಿಡಲಾರದೆ ನಮ್ಮನ್ನು ಬೀಳ್ಕೊಟ್ಟರು.

"ಸ್ವಾಮಿ... ನಾನು ಬಹು ಭಾಗ್ಯಶಾಲಿ, ಶಿವನದಯೆ. ನಿಮ್ಮ ಸ್ನೇಹ ದೊರಕಿತು. ಈ ಕೋಟಕಲ್ಲಿನ ಜನ ನಿಮ್ಮನ್ನು, ನಿಮ್ಮ ಮನೆಯವರನ್ನು ಎಂದಿಗೂ ಮರೆಯುವುದಿಲ್ಲ. ಇಷ್ಟು ದಿನ, ಇಷ್ಟು ಜನಗಳೂ ಒಟ್ಟಿಗೆ ಸೇರಿ ಮದುವೆ ಮನೆಯಂತಿತ್ತು. ನೀವು ನಮ್ಮ ಭೂಸ್ವತ್ತನ್ನೆಲ್ಲಾ ಅಳೆದು, ಯಾರೊಬ್ಬರಿಗೂ ಅಸಮಾಧಾನ ಆಗದಂತೆ ನ್ಯಾಯವಾಗಿ ವಿಭಾಗ ಮಾಡಿಕೊಟ್ಟಿದ್ದೀರಿ. ಇದನ್ನು ನಾನು ಎಂದೂ ಮರೆಯುವುದಿಲ್ಲ. ನನ್ನ ಜೀವನದ ಕೊನೆಯ ಆಸೆ ನಿಮ್ಮಿಂದ ನೆರವೇರಿತು" ಎಂದು ಮಹದೇವ ಗೌಡರು ನುಡಿದರು.

ನಾನು ನನ್ನ ಬಾಲ್ಯದಿಂದ ನನ್ನ ಜೀವಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದ ಶ್ರೀ ರಾಮಕೃಷ್ಣ ಪರಮಹಂಸರ ಚಿತ್ರಪಟವನ್ನು ಕೋಟಿಕಲ್ಲು ಮನೆಯಲ್ಲಿ ಸ್ಥಾಪಿಸಿ ಅವರ ಜೀವನದ ಕಥೆಯ ಸಣ್ಣಹೊತ್ತಿಗೆಯನ್ನು ಅವರಿಗೆ ನನ್ನ ಕಾಣಿಕೆಯಾಗಿ ಒಪ್ಪಿಸಿದೆ. ಮದುವೆಯ ದಿಬ್ಬಣದಂತೆ ನಮ್ಮನ್ನು ಅವರೆಲ್ಲರೂ ಬೀಳ್ಕೊಟ್ಟರು. ಇಲ್ಲಿಂದ ಮತ್ತೆ ಸುಬ್ಬರಾಯರ ಮನೆಯಲ್ಲಿ ಕೆಲವು ದಿನ ಉಳಿದುಕೊಂಡು ನನ್ನ ಮಾತನ್ನು ಉಳಿಸಿಕೊಂಡೆ.

❁

ನಾನು ಈ ಕೆಲಸಕ್ಕೆ ಸೇರಿ ಕೇವಲ ಐದೇ ತಿಂಗಳಾಗಿತ್ತು. ಸರಕಾರದ ಸರ್ವೇಯರ್ ಕೆಲಸದ ಹೂರಣ ಇನ್ನೂ ನನಗೆ ಅರ್ಥವಾಗಿರಲಿಲ್ಲ. ಅಲ್ಲದೆ ಕಾಲೇಜಿನ ವಿದ್ಯಾರ್ಥಿ ದೆಸೆಯ ಪ್ರಭಾವ ಇನ್ನೂ ಅಳಿಸಿರಲಿಲ್ಲ. ಐದೇ ತಿಂಗಳಲ್ಲಿ ಮೂರು ಕಡೆಗೆ ನನ್ನನ್ನು ವರ್ಗ ಮಾಡಿದ್ದರು. ನನಗೆ ಮತ್ತೆ ಎಡತೊರೆಗೆ ವರ್ಗವಾಯಿತು. ಅಲ್ಲಿ ನನಗಿಂತಲೂ ಹಿರಿಯರಾದ ಸರ್ವೇಯರರ ಬಳಿಯಲ್ಲಿ 'ಒಂದೊಂದೆ ವರಸೆ'ಗಳನ್ನು ಕಲಿಯುತ್ತಿದ್ದೆ. ಹಳೆಯ ರಿಕಾರ್ಡುಗಳನ್ನು ಪರಿಶೀಲಿಸುತ್ತಿರುವಾಗ ಎರಡು ವರ್ಷದ ಹಿಂದೆ ಬರೆದುಕೊಂಡಿದ್ದ ಒಂದು ಅರ್ಜಿ ಸಿಕ್ಕಿತು. ಆ ಕೆಲಸವನ್ನು ಇನ್ನೂ ಕೈಗೊಳ್ಳದ ಪ್ರಯುಕ್ತ ಬಂದಿದ್ದ ಐದಾರು ತಗಾದೆ ಅರ್ಜಿಗಳೂ ಅದರೊಂದಿಗಿದ್ದುವು. ನನಗೆ ಆಶ್ಚರ್ಯವಾಗಿ ಹಿರಿಯ

"ಹಳೆಯ ರಿಕಾರ್ಡುಗಳನ್ನು ಮೊದಲು ಫೈಸಲ್ ಮಾಡಬೇಕೆಂದು ಆರ್ಡರ್ ಇದೆ. ಅದರಂತೆ ಕೆಲಸ ಮಾಡುತ್ತಿದ್ದೇವೆ. ಇನ್ನೂ ಈ ಅರ್ಜಿಯ ಸರದಿ ಬಂದಿಲ್ಲ," ಎಂದರು.

"ಎರಡು ವರ್ಷದ ಅರ್ಜಿಗೆ ಸರದಿ ಬಂದಿಲ್ಲ ಎಂದರೆ ಜೀವವಿರುವ ರಿಕಾರ್ಡಗಳು ಎಷ್ಟು ಹಳೆಯವು?" ಎಂದು ಕೇಳಿಯೇ ಬಿಟ್ಟೆ.

"ಹಳೇ ರೆಕಾರ್ಡುಗಳೂ ಇವೆ. ಈ ಅರ್ಜಿಯನ್ನು ಬರೆದುಕೊಂಡವರು ಒಬ್ಬ ಹೆಂಗಸರು, ಅವರು ಬೆಂಗಳೂರಿನಲ್ಲಿದ್ದಾರೆ. ನೀವು ಒಂದು ಕೆಲಸ ಮಾಡಿ. ನೀವು ಅವರಿಗೆ ಜವಾಬಾಗಿ ಒಂದು ನೋಟಿಸ್ ಬರೆದು ಕಳಿಸಿ. ಅವರ ಜಮೀನಿನ ಅಳತೆಯ ಕೆಲಸ ಇಂಥ ದಿನ— ಭಾನುವಾರ ಎಂದು ತಿಳಿಸಿ. ಅವರು ಬರುತ್ತಾರೆ. ಆ ಗ್ರಾಮದಲ್ಲಿ ಒಂದು ಕ್ಯಾಥೋಲಿಕ್ ಚರ್ಚ್ ಇದೆ.

ನಡೆ ವಿವಾದಗಳು ನಡೆಯುತ್ತವೆ. ನೀವೇ ಈ ಕೆಲಸ ಮಾಡಿಬಿಡಿ," ಎಂದರು.

"ನಾವು ಹೇಗೂ ಎಲ್ಲ ಕೆಲಸವನ್ನೂ ಜೊತೆಯಾಗಿ ಮಾಡುತ್ತಿದ್ದೇವಲ್ಲ...? ಈ ಗ್ರಾಮಕ್ಕೂ ಜೊತೆಯಾಗೇ ಹೋಗಿ ಬರೋಣ," ಎಂದೆ. ಅವರು ಒಪ್ಪಲಿಲ್ಲ. ಕಾರಣ ಏನೆಂದು ಕೇಳಿದೆ.

"ಅವರೆಲ್ಲ ಇಂಗ್ಲಿಷಿನಲ್ಲಿ ಮಾತನಾಡುತ್ತಾರೆ. ನನಗೆ ಅಷ್ಟರ ಮಟ್ಟಿಗೆ ಇಂಗ್ಲಿಷ್ ಬರುವುದಿಲ್ಲ. ನೀವಾದರೆ ಅಚ್ಚುಕಟ್ಟಾಗಿ ಸವಾಲಿಗೆ ಜವಾಬು ಕೊಡುತ್ತೀರಿ. ಅವರಿಗೆ ಉತ್ತರ ಬರೆದುಬಿಡಿ." ಎಂದರು.

ಅವರ ಮಾತು ತರ್ಕಬದ್ಧವಾಗಿದೆ ಅನ್ನಿಸಲಿಲ್ಲ. ಅವರಿಗೆ ವ್ಯವಹಾರಕ್ಕೆ ಸಾಕಾಗುವಷ್ಟು ಇಂಗ್ಲಿಷ್ ಗೊತ್ತಿತ್ತು. ಇದುವರೆಗೂ ಸ್ವತಂತ್ರವಾಗಿ ಕೆಲಸ ಮಾಡುವುದಕ್ಕೆ ಅವಕಾಶ ಕೊಡದೇ ಈಗ ಈ ರೆಕಾರ್ಡನ್ನು ತಲೆಯ ಮೇಲೆ ಹಾಕಿರುವುದರಲ್ಲಿ ಏನೋ ವಿಶೇಷವಿದೆ ಎಂದೂ ಅನ್ನಿಸಿತು. ಅದನ್ನು ತಿಳಿಯಬೇಕೆಂಬ ಕುತೂಹಲವೂ ಹುಟ್ಟಿತು. ಆ ಅರ್ಜಿಯನ್ನು ಮತ್ತೆ ಪರಿಶೀಲಿಸಿದೆ.

ಈ ನಾಲಾ ಬೈಲುಗಳ ಅನೇಕ ಜಮೀನುದಾರರು ಅನೇಕರು ಸಾಧಾರಣವಾಗಿ ಬೆಂಗಳೂರು, ಮೈಸೂರಿನಂಥ ಶಹರುಗಳಲ್ಲಿರುವವರು. ಬಹುತೇಕವಾಗಿ ಅವರೆಲ್ಲ ಇಂಗ್ಲೀಷು ಕಲಿತವರೇ. ಆದರೂ ಮಾತಾಡುವಷ್ಟು ಕನ್ನಡ ಬಂದೇ ಬರುತ್ತದೆ. ಈ ಸಣ್ಣ ನೆಪವೊಡ್ಡಿ ಕೆಲಸಕ್ಕೆ ಏಕೆ 'ಕಳ್ಳ ಬೀಳು'ತ್ತಿದ್ದಾರೆ? ಅನ್ನಿಸಿ, ಇದರ ತಳ ನೋಡಬೇಕು ಅಂದುಕೊಂಡು ಅರ್ಜಿದಾರರಿಗೆ ಉತ್ತರ ಬರೆದು, ದಿನಾಂಕ ನಿಗದಿ ಮಾಡಿ ನೋಟೀಸು ಕಳಿಸಿಬಿಟ್ಟೆ. ಅದರಲ್ಲಿದ್ದುದು ಇಷ್ಟೆ. ನೀವು ಇಂಥ ದಿನ— ಭಾನುವಾರ, ಗ್ರಾಮಕ್ಕೆ ಬಂದರೆ ನಿಮ್ಮ ಸಮಕ್ಷಮ ನಿಮ್ಮ ಗದ್ದೆಯನ್ನು ಅಳತೆಮಾಡುತ್ತೇನೆ. ನೀವು ಖುದ್ದು ಹಾಜರಿದ್ದು ಹದ್ದು ಬಸ್ತನ್ನು ನೋಡಿಕೊಂಡು, ಚದುರದ ಕಲ್ಲನ್ನು ನೆಡಿಸಿಕೊಳ್ಳಬಹುದು. ಚದುರದ ಕಲ್ಲುಗಳನ್ನು ತರಿಸುವುದು, ನೆಡಿಸುವದರ ಜವಾಬ್ದಾರಿ ಎಲ್ಲ ನಿಮ್ಮದೇ... ಇತ್ಯಾದಿ.

ಗೊತ್ತಾದ ದಿನ ಅಳತೆಗೆ ಬೇಕಾದ ಸಾಮಾನುಗಳನ್ನೂ, ಅಳತೆಯ ವಿವರಗಳ ದಾಖಲೆಯನ್ನೂ, ಅರ್ಜಿಯನ್ನೂ ತೆಗೆದುಕೊಂಡು, ಜೊತೆಗೆ ಒಬ್ಬ ಆಳನ್ನೂ ಕರೆದುಕೊಂಡು ರೈಲಿನಲ್ಲಿ ಪ್ರಯಾಣ ಮಾಡಿ ಆ ಊರನ್ನು ತಲುಪಿದೆ. ಊರಿಗೂ ಸ್ಟೇಷನ್ನಿಗೂ ಅಂಥ ದೂರವೇನಿಲ್ಲ. ಮೊದಲು ಚರ್ಚ್‌ಗೆ ಹೋಗಿ ಯಾರಾದರೂ ಬೆಂಗಳೂರಿನಿಂದ ಬಂದಿದ್ದಾರೆಯೇ ಎಂದು ವಿಚಾರಿಸಿದೆ. ಅವರು ಬಂದಿದ್ದರು. ಆಕೆ ಮಧ್ಯವಯಸ್ಸಿನ ಹೆಂಗಸು. ಆಗಿನ್ನೂ ಇಪ್ಪತ್ತನಾಲ್ಕು ವರ್ಷ ವಯಸ್ಸಿನ ನನ್ನನ್ನು ಸರ್ವೇಯರ್ ಜೊತೆ ಬಂದ ಹುಡುಗ ಎಂದು ಆಕೆ ಭಾವಿಸಿರಬೇಕು.

"ಇಲ್ಲಿಗೆ ಬಂದ ಸರ್ವೇಯರ್ ಎಲ್ಲಿದ್ದಾರೆ...?"

"ನಾನೇ ನಿಮಗೆ ನೋಟೀಸ್ ಕಳಿಸಿದ ಸರ್ವೇಯರ್."

"ಹಾಗಾದರೆ ನೀವು ಹೊಸದಾಗಿ ಬಂದಿದ್ದೀರಾ...?"

"ಹೌದು. ಮೈಸೂರಿನಿಂದ ವರ್ಗವಾಗಿ ಬಂದಿದ್ದೇನೆ."

"ಇನ್ನೊಬ್ಬರು ಹಿರಿಯ ಮನುಷ್ಯ ಇದ್ದರಲ್ಲ ಅವರ ಜಾಗಕ್ಕೆ ಬಂದಿದ್ದೀರಾ...?"

"ಇಲ್ಲ. ಅವರೂ ಇದ್ದಾರೆ. ಇಬ್ಬರೂ ಒಟ್ಟಿಗೆ ಕೆಲಸ ಮಾಡುತ್ತಿದ್ದೇವೆ. ಈಗ ಈ ತಾಲೂಕಿಗೆ ಇಬ್ಬರು ಸರ್ವೇಯರುಗಳು."

"ನೀವು ಈ ತಾಲ್ಲೂಕಿಗೆ ಬಂದು ಎಷ್ಟು ದಿನಗಳಾಯ್ತು...?"

"ಇನ್ನೂ ಒಂದು ತಿಂಗಳೂ ಆಗಿಲ್ಲ."

"ಸರಿ. ಹಾಗಾದರೆ ನೀವೇ ಅಳತೆ ಮಾಡುತ್ತೀರಾ...?"

"ಹೌದು."

"ನಮ್ಮಿಂದ ನಿಮಗೆ ಏನು ಸಹಾಯ ಬೇಕು...?"

"ನಾಲ್ಕು ಜನ ಆಳುಗಳು, ಬಾವುಟಕ್ಕೆ ನಾಲ್ಕು ಬೊಂಬುಗಳು, ಗುದ್ದಲಿ ಹಾರೆ ಇಟ್ಟಿದ್ದರೆ ಸಾಕು. ನಿಮ್ಮ ರೈತರೇ ಇದ್ದರೂ ನಡೆಯುತ್ತದೆ."

ತಮ್ಮ ಕಡೆಯ ಜನರನ್ನು ಕರೆ ತರುತ್ತೇನೆಂದು ಆಕೆ ಹೊರಟರು. ಹೋಗುವ ಮೊದಲು ಆ ಚರ್ಚಿನ ಇನ್ನೊಂದು ಕಡೆ ಕುಳಿತಿದ್ದ ಮಧ್ಯ ವಯಸ್ಸು ಮೀರಿದ್ದ ಗಂಡಸೊಬ್ಬನೊಂದಿಗೆ

ಚರ್ಚಿಸಿದರು ಆ ಮನುಷ್ಯ ಆಧುನಿಕ ರೀತಿಯ ಉಡುಪು ಧರಿಸಿ, ಗಂಭೀರವಾಗಿ ಮಾತಾಡು-ತ್ತಿದ್ದರು. ಮಧ್ಯೆ ಮಧ್ಯೆ ಆಕೆ ನನ್ನ ಕಡೆ ಕೈ ತೋರಿಸುವುದೂ ಆ ಯಜಮಾನರು ಕಿರು ನೋಟ ಬೀರುವುದೂ ನಡೆದಿತ್ತು.

ಸ್ವಲ್ಪ ಹೊತ್ತಿನ ನಂತರ ಆಕೆ—ಶ್ರೀಮತಿ ಮರಿಯಮ್ಮ—ಬಂದು, "ಹೊರಡೋಣವೆ?" ಎಂದರು. ಆಳುಗಳು ಆಯುಧಗಳನ್ನೂ, ಗಳು ಗಳನ್ನೂ ಹಿಡಿದು ನಿಂತಿದ್ದರು. ಎಲ್ಲರೂ ಮಾತ ನಾಡುತ್ತ ಗದ್ದೆ ಕಡೆಗೆ ಹೊರಟೆವು. ದಾರಿಯಲ್ಲಿ ಆಕೆ ಸೂಕ್ಷ್ಮವಾಗಿ ತಾನು ಆ ಜಮೀನು ಮಾಡಿ ಕೊಂಡ ಕಥೆಯನ್ನು ಹೇಳಿದರು. ಗದ್ದೆಯೆಲ್ಲವೂ ಕೊಯಿಲಾಗಿದ್ದು ಪ್ರಯುಕ್ತ ಬಟ್ಟೆಗಳನ್ನು ಬದಲಿಸಿ ಕೆಲಸಕ್ಕೆ ಇಳಿದೆವು. ನೀವು ಅಳತೆ ಮಾಡುತ್ತಿರಿ. ನಾನು ಊರೊಳಕ್ಕೆ ಹೋಗಿ ಬರುತ್ತೇನೆ ಎಂದು ಆಕೆ ಹೊರಟು ಹೋದರು. ಜಮೀನು ಬಯು-ಲಾಗಿದ್ದುದರಿಂದ ಅಳತೆಯ ಕೆಲಸ ಜಾಗ್ರತೆ-ಯಾಗೇ ಮುಗಿಯಿತು. ಹದ್ದು ಬಸ್ತುಗಳಿಗೆ ಸರ್ವೆಯು ಕಳೆದ ವರ್ಷವೇ ತರಿಸಿ ಹಾಕಿದ್ದ ಸರ್ವೆಯ ಕಲ್ಲುಗಳು ಅಲ್ಲೇ ಬಿದ್ದಿದ್ದವು. ಅವು ಗಳನ್ನು ನಾಲ್ಕೂ ಗಡಿಗಳಿಗೆ ಹೂಳಿಸಿ ಕೈ ಕಾಲು ತೊಳೆದುಕೊಂಡೆ. ಇನ್ನೂ ಶ್ರೀಮತಿ ಮರಿ-ಯಮ್ಮನವರು ಬಾರದ್ದರಿಂದಲೂ ಬಿಸಿಲು ಜಾಸ್ತಿ ಯಾಗಿಯೇ ಇದ್ದುದರಿಂದಲೂ, ಒಂದು ಮರದ ನೆರಳಿನಲ್ಲಿ ಬಂಡೆಯೊಂದಕ್ಕೆ ತಲೆಯಾನಿಸಿ ಮಲಗಿ ಕೊಂಡು, ರಿಕಾರ್ಡುಗಳನ್ನು ತಿರುವಿ ಹಾಕು ತ್ತಿದ್ದೆ. ಚರ್ಚಿನಲ್ಲಿ ನೋಡಿದ್ದ ಯಜಮಾನರು ನನ್ನ ಕಡೆಯೇ ಬರುತ್ತಿದ್ದರು. ಒಂದು ಫೆಲ್ಟಿಂಗ್ ಪ್ಯಾಟನ್ನು ಧರಿಸಿ ಬೆತ್ತವನ್ನು ಕೈಯಲ್ಲಿ ಹಿಡಿದಿದ್ದರು. ನಾನು ಮಲಗಿದ್ದವನು ಏಳಲೂ ಇಲ್ಲ, ನಮಸ್ಕರಿಸಲೂ ಇಲ್ಲ. ಅವರು ಯಾರೆಂಬುದು ನನಗೆ ಗೊತ್ತಿರಲಿಲ್ಲ. ಯಾರೂ ಪರಿಚಯಿಸಲೂ ಇರಲಿಲ್ಲ. ಅವರೇ ಇಂಗ್ಲಿಷಿ-ನಲ್ಲಿ ಮಾತಾಡಿಸಿದರು.

"ನೀನಿನ್ನೂ ಯುವಕ!... ಆದುದರಿಂದ ನಿನ್ನನ್ನು ಯಂಗ್ ಮ್ಯಾನ್ ಎಂದು ಕರೆಯ ಬಹುದೆ...?"

"ಹೌದೇ... ಅಗತ್ಯವಾಗಿ, ಹಿರಿಯರು ಕರೆ-ಯುವುದು ಹಾಗೆಯೇ!"

"ನೀನು ಎಲ್ಲಿಂದ ಇಲ್ಲಿಗೆ ಬಂದೆ...?"

"ಯಡತೊರೆಯಿಂದ ಬಂದಿದ್ದೇನೆ!"

"ನೀನು ಯಡತೊರೆಗೆ ಹೊಸಬನಿರ-ಬೇಕು...?"

"ನಾನು ಬಂದು ಒಂದು ತಿಂಗಳಾಗಿರ ಬಹುದು!"

"ಎರಡು ವರ್ಷಗಳಿಂದ ಬಿದ್ದಿದ್ದ ರೆಕಾರ್ಡು ಈವತ್ತು ಹೇಗೆ ಹೊರಗೆ ಬಂತು...?"

"ಹೇಗೋ ಬಂದಿರಬೇಕು. ಹೇಗೆ ಬಂದರೆ ನಿಮಗೆ ಏನು? ಒಳ್ಳೆಯ ಸಾಹೇಬರು ಕೇಳುವಂತೆ ಕೇಳುತ್ತಿದ್ದೀರಲ್ಲ?"

"ನೋಟೀಸ್ ಬರೆದಿದ್ದವರು ನೀವೆ ತಾನೆ?"

"ಹೌದು! ಆದರಲ್ಲಿ ಏನು ತಪ್ಪಾಗಿದೆ ಹೇಳಿ ನೋಡೋಣ!"

"ತಪ್ಪು ಕಂಡು ಹಿಡಿಯುವುದಕ್ಕೆ ನಾನೇನು ನಿಮ್ಮ ಸಾಹೇಬನೆ?"

"ಹಾಗಲ್ಲ. ತಪ್ಪಿದ್ದರೆ ಹೇಳಿ. ತಿದ್ದಿ ಕೊಳ್ಳೋಣ."

"ಅದು ಹಾಗಿರಲಿ. ನಿಮ್ಮ ಕೆಲಸವೆಲ್ಲ ಆಯಿತೋ?"

"ಎಲ್ಲ ಆಯಿತು. ಇಲ್ಲೇನು ಕಾಡಿಲ್ಲ ಗುಡ್ಡ ವಿಲ್ಲ!"

"ನೀವು ತಯಾರಿಸಿರುವ ಟಿಪ್ಪಣಿ ತೋರಿಸಿ."

"ಇನ್ನೂ ತಯಾರಿಸಿಲ್ಲ, ಇದು ಕರಡು ಮಾತ್ರ."

"ಒಂದು ಕಾಪಿ ಮಾಡಿಕೊಡುತ್ತೀರಾ...?"

"ಕರಡನ್ನೇ ಕೊಡುತ್ತೇನೆ-ನೋಡಿಕೊಳ್ಳಿ-ಕಾಪಿ ಕೊಡಲಾರೆ!"

"ಯಾಕೆ...? ಏನು ಕಷ್ಟ...?"

"ಇದಿನ್ನೂ ಪಬ್ಲಿಕ್ ರಿಕಾರ್ಡ್ ಅಲ್ಲ. ಕಾಪಿ ಕೊಡುವವರು ಬೇರೆ ಇದ್ದಾರೆ. ಅವರಿಂದ ತೆಗೆದುಕೊಳ್ಳಬಹುದು!"

"ಅಳತೆಯಾದ ಲೆಕ್ಕವನ್ನು ಏನು ಮಾಡು-ತ್ತೀರಿ...?"

"ಅದನ್ನು ಬೇರೆ ಪುಸ್ತಕದಲ್ಲಿ ಬರೆದು, ಜಮೀ ನಿನ ವಿಸ್ತೀರ್ಣ, ಆಕಾರ, ನೀರಿನ ಆಶ್ರಯ, ಜಮೀನಿನ ಮಾಲೀಕರು ಈ ವಿವರಗಳನ್ನು

ಬರೆದು, ಗ್ರಾಮದ ನಕಾಶೆಯನ್ನು ತಿದ್ದಿ ಆಫೀಸಿಗೆ ಕಳುಹಿಸುತ್ತೇನೆ. ಅವರು ಇದನ್ನೆಲ್ಲಾ ಜೋಪಾನ ಮಾಡುವರು."

"ಸರಿ ಇದೆಲ್ಲಾ ನಿಮ್ಮ ಆಫೀಸಿನ ಮಾತಾಯಿತು. ನಿನ್ನ ಹೆಸರೇನು ಯಂಗ್ ಮ್ಯಾನ್?"

ನನ್ನ ಹೆಸರು ಹೇಳಿದೆ. ಇದನ್ನೆಲ್ಲ ಇವರು ಏಕೆ ಕೇಳುತ್ತಿದ್ದಾರೆ...? ಇವರಿಗೆ ಈ ವಿವರಗಳಿಂದ ಆಗ ಬೇಕಾದುದೇನು ಅನ್ನಿಸಿತು. ಮನಸ್ಸಿಗೆ ಕೊಂಚ ಕಿರಿಕಿರಿಯೂ ಅನ್ನಿಸಿತು.

"ನಿನಗೆ ತಂದೆ ತಾಯಿಗಳಿದ್ದಾರೆಯೋ...? ಎಲ್ಲಿ ಇದ್ದಾರೆ...?"

"ಇದ್ದಾರೆ—ನಮ್ಮ ಹಳ್ಳಿಯ ಹೆಸರನ್ನು ಹೇಳಿದರೆ ನಿಮಗೇನೂ ಅರ್ಥವಾಗುವುದಿಲ್ಲ."

"ಸರಕಾರದವರು ಎಷ್ಟು ಸಂಬಳ ಕೊಡುತ್ತಾರೆ..."

"ಇದು ಅನವಶ್ಯಕವಾದ ಪ್ರಶ್ನೆ!!"

"ಹೋಗಲಿ ನಿನಗೆ ಮದುವೆಯಾಗಿದೆಯೋ...?"

"ಆಗಿದೆ."

"ನಿನಗೆ ಮಕ್ಕಳೆಷ್ಟು...?"

"ಇದೂ ಅನವಶ್ಯಕ ಪ್ರಶ್ನೆ...!"

"ಯಂಗ್ ಮ್ಯಾನ್... ನೀನಿನ್ನೂ ತರುಣ. ನಿನ್ನ ರಕ್ತ ಸುಡುತ್ತಿದೆ. ನಾವು ವಯಸ್ಸಾದವರು. ಇದನ್ನೆಲ್ಲ ಕೇಳುವುದು ವಾಡಿಕೆ."

"ನನಗೆ ಒಂದು ಮಗುವಿದೆ. ನನ್ನ ಸಂಸಾರ ಬೆಂಗಳೂರಿನಲ್ಲಿದೆ. ನನಗೆ ಇಪ್ಪತ್ತು ನಾಲ್ಕು ವರ್ಷ. ಸುಖಮಯ ಜೀವನದ ಅರ್ಥ ನನಗಿನ್ನೂ ಗೊತ್ತಾಗಿಲ್ಲ... ನೀವು ಇದನ್ನೆಲ್ಲಾ ತಿಳಿದುಕೊಂಡು ಏನಾಗಬೇಕು...?"

"ನಾನೇನು ಮಾಡಲಿ. ನಿನ್ನ ಮುಖ ನೋಡಿದರೆ ಕೇಳಬೇಕೆನ್ನಿಸುತ್ತಿದೆ. ನಿನಗೆ ಸಿಟ್ಟು ಬಂದಿದೆಯೋ...?"

"ಬಡವನ ಕೋಪ ದವಡೆಗೆ ಮೂಲ...!"

"ನಮ್ಮಿಂದ ನಿಮಗೆ ಏನಾದರೂ ಸಹಾಯವಾಗಬೇಕೋ...?"

"ಇದು ಅತಿ ಪ್ರಶ್ನೆ...ಅಥವಾ ವಿಪರೀತ ಪ್ರಶ್ನೆ!!"

"ಥ್ಯಾಂಕ್ಸ್ ಯಂಗ್ ಮ್ಯಾನ್. ನಿನ್ನ ವಿಚಾರದಲ್ಲಿ ಗೌರವ ಹುಟ್ಟುತ್ತದೆ."

"ಧನ್ಯವಾದಗಳು, ನೀವು ಹಿರಿಯರು. ಕೇಳಬೇಕು ಅನಿಸಿದ್ದನ್ನು ಕೇಳಿ."

ಈ ವೇಳೆಗೆ ಮರಿಯಮ್ಮನವರು ಬಂದರು. ಜೊತೆಯಲ್ಲಿ ಐದಾರು ಎಳೆ ನೀರನ್ನು ತಂದಿದ್ದರು. "ಸರ್ವೇಯರ್ ನೀವು ತೆಗೆದುಕೊಳ್ಳಿ," ಎಂದರು. ನಾನು ಯಜಮಾನರ ಕಡೆ ಕೈ ತೋರಿಸಿ "ಅವರಿಗೆ ಕೊಡಿ ಆ ಮೇಲೆ ನಾನು ತೆಗೆದುಕೊಳ್ಳುತ್ತೇನೆ," ಎಂದೆ. ಎಲ್ಲರೂ ಎಳೆ ನೀರನ್ನು ಕುಡಿದೆವು.

"ಈಗ ನಾಲ್ಕುವರೆ ಘಂಟೆಯಾಗಿದೆ. ಇನ್ನು ಅರ್ಧ ಘಂಟೆಗೆ ರೈಲು ಬರುತ್ತದೆ. ನಾನು ಹೊರಡುತ್ತೇನೆ," ಎಂದೆ.

"ಈಕೆ ನನ್ನ ತಂಗಿ. ಅಳತೆಗೆ ಅರ್ಜಿ ಕೊಟ್ಟು ಎರಡೂವರೆ ವರ್ಷ ಆಗಿತ್ತು. ಮೂಲೆಗೆ ಹಾಕಿದ್ದರು. ನೀನು ಬಂದ ಒಂದೇ ತಿಂಗಳಲ್ಲಿ ನಮ್ಮ ಕೆಲಸ ಮಾಡಿಕೊಟ್ಟಿದ್ದೀ. ನಿನ್ನ ಕರ್ತವ್ಯನಿಷ್ಠೆ ನನ್ನನ್ನು ಬೆರಗುಗೊಳಿಸಿದೆ. ನಿನ್ನನ್ನು ದೇವರು ಆಶೀರ್ವದಿಸಲಿ."

ಯಜಮಾನರ ಮಾತನ್ನು ತಲೆಬಾಗಿ ಸ್ವೀಕರಿಸಿದೆ. ರೈಲು ನಿಲ್ದಾಣದ ವರೆಗೂ ಜೊತೆಯಲ್ಲಿ ಬಂದರು. ಟಿಕೆಟ್ಟನ್ನು ಕೊಂಡುಕೊಂಡೆ. ಅಣ್ಣ ತಂಗಿ ಇಬ್ಬರೂ ನಗುತ್ತಿದ್ದರು. "ಇನ್ನೇನು ಪರಿಚಯವಾಯಿತು. ಏನಾದರೂ ಸಹಾಯ ಬೇಕಾದರೆ ಬೆಂಗಳೂರಿಗೆ ಬನ್ನಿ" ಎಂದು ಯಜಮಾನರು ಹೇಳಿದರು.

ರೈಲು ಬಂತು. ಅದು ಇಲ್ಲಿ ಎರಡೇ ನಿಮಿಷ ನಿಲ್ಲುವುದು. ಅವರ ಅಪ್ಪಣೆ ಪಡೆದು ರೈಲಿನ ಕಡೆ ಸಾಗಿದೆ.

"ಹಲೋ! ಇದರಲ್ಲಿ ನನ್ನ ಅಡ್ರೆಸ್ ಇದೆ. ಇದರ ಪ್ರಯೋಜನವನ್ನು ಪಡೆದುಕೊಳ್ಳಿ," ಎಂದು ಹೇಳಿ ಒಂದು ಲಕೋಟೆಯನ್ನು ನನ್ನ ಅಂಗಿಯ ಮೇಲಿನ ಜೇಬಿನಲ್ಲಿ ತೂರಿಸಿದರು. ನಾನು ರೈಲನ್ನೇರಿ ಕುಳಿತೆ. ಕಿಟಕಿಯ ಬಳಿಯಲ್ಲಿ ಕುಳಿತಿದ್ದವರೊಬ್ಬರು ಕನ್ನಡಕವನ್ನು ಮೂಗಿನ ತುದಿಗೆ ತಳ್ಳಿ ಯಜಮಾನರನ್ನೇ ಎವೆ ಇಕ್ಕದೆ ನೋಡುತ್ತಿದ್ದರು. ರೈಲು ಹೊರಟ ಕೂಡಲೇ "ಇವರು ಯಾವಾಗ ಬಂದರು? ಪ್ರೋಗ್ರಾಂ ಇಲ್ಲದೇ ಬಂದಿದ್ದಾರಲ್ಲ? ಏನೋ ಖಾಸಗೀ ಕೆಲಸ ಇದ್ದಿರಬೇಕು!! ಹೌದೋ...?" ಎಂದು ನನ್ನನ್ನು ಕೇಳಿದರು.

"ನೀವು ಯಾರ ಬಗ್ಗೆ ಕೇಳುತ್ತಿದ್ದೀರಿ...?" ಎಂದೆ.

"ಇದೇನ್ರಿ ಹೀಗೆ ಕೇಳುತ್ತಿದ್ದೀರಿ? ನಿಮ್ಮ ಜೊತೆಯಲ್ಲಿ ಬಂದು ಬೀಳ್ಕೊಟ್ಟವರು ರೆವೆನ್ಯೂ ಕಮೀಶನರ್ ಸಾಹೇಬರಲ್ಲವೆ? ಅವರು ನಮ್ಮ ಇಲಾಖೆಯ ಅತ್ಯುನ್ನತ ಅಧಿಕಾರಿಗಳು!!" ಎಂದರು.

ನನಗೆ ಒಂದು ಕ್ಷಣ ದಿಕ್ಕೇ ತೋರಲಿಲ್ಲ. ಅವರ ಮಾತು-ನನ್ನ ಮಾತುಗಳು, ನನ್ನ ನಡತೆ ಎಲ್ಲ ನೆನಪಿಗೆ ಬಂದು ಕೈಕಾಲು ತಣ್ಣಗಾದವು. ನನಗೆ ಅರಿಯದೇ-ನಮ್ಮ ಇಲಾಖೆಯ ಸರ್ವೋನ್ನತ ಅಧಿಕಾರಿಯ ಜೊತೆ ನಿಷ್ಠುರವಾಗಿ ವರ್ತಿಸಿದ್ದೆ. ತಕ್ಷಣ ತಲೆಯಲ್ಲಿ ಬೆಳಕು ಮಿಂಚಿತು. ಈ ಅರ್ಜಿಯನ್ನು ಹಿರಿಯ ಸರ್ವೇಯರರು ಮೆಲ್ಲಗೆ ನನ್ನ ತಲೆಗೆ ಕಟ್ಟಿದುದರ ಮರ್ಮ ಅರಿವಾಯಿತು. ಆದರೆ ಕಾಲ ಮಿಂಚಿತ್ತು.

ಮನೆಗೆ ಬಂದ ಮೇಲೆ ಯಜಮಾನರು ನನ್ನ ಜೇಬಿನಲ್ಲಿ ತುರುಕಿದ್ದ ಲಕೋಟೆ ತೆಗೆದೆ: ಅದರಲ್ಲಿ ಅವರ ಫೋಟೋ, ವಿಳಾಸವಿದ್ದ ಒಂದು ಕಾರ್ಡು. ಇನ್ನೊಂದು ಕಾಗದದ ಪೊಟ್ಟಣ ಬಿಚ್ಚಿ ನೋಡಿದೆ. ಎದೆ 'ಧಡ್' ಎಂದಿತು— ಅದರಲ್ಲಿ ನೋಟುಗಳು! ಅನೇಕ ಯೋಚನೆಗಳು ಬಂದುವು; ನನ್ನನ್ನು ಪರೀಕ್ಷಿಸಲು ಹೀಗೆ ಮಾಡಿದ್ದಾರೋ ಏನೋ...? ಈ ಹಣವನ್ನು ಅವರಿಗೆ ಹಿಂದಿರುಗಿಸುವುದು ಹೇಗೆ...? ಏನಾದರೂ ವಿಪರೀತವಾದರೆ ಗತಿ ಏನು...? ಯಾವ ಕ್ಷಣದಲ್ಲಿ ಏನು ಅಪಾಯವೋ ಎಂದು ಹೆದರಿದೆ. ಅಂತೂ ಒಂದು ವರ್ಷಪರ್ಯಂತ ಅವರು ಕೊಟ್ಟ ನೋಟುಗಳನ್ನು ಮುರಿಸಿರಲಿಲ್ಲ.

ಹಿರಿಯ ಸರ್ವೇಯರ್ ನನಗಾಗಿ ಜಾತಕದಂತೆ ಕಾದಿದ್ದರು. ರೈಲು ಇಳಿಯುತ್ತಲೇ ಭೇಟಿಯಾದರು. ಪ್ರಶ್ನೆಗಳ ಮಳೆಯನ್ನೇ ಸುರಿಸಿದರು. ನಾನೂ ಗುಟ್ಟು ಬಿಡಲಿಲ್ಲ.

"ನೀವು ಭೇಟಿ ಮಾಡಿದ ಯಜಮಾನರು ಯಾರು ಗೊತ್ತೋ...?"

"ಇಲ್ಲ ನನಗೆ ಗೊತ್ತಿಲ್ಲ. ಆದರೆ ಅವರು ನಿಮ್ಮನ್ನು ಬಹಳ ವಿಚಾರಿಸಿದರು," ಎಂದೆ. ಈಗ ಗಾಬರಿಗೊಳ್ಳುವ ಸರದಿ ಅವರದಾಯಿತು. "ಏನು ವಿಚಾರಿಸಿದರು...?"

"ಏನೂ ಹೆಚ್ಚಿಗೆ ಕೇಳಲಿಲ್ಲ. ಇಲ್ಲೇ ಇದ್ದಾರೋ-ವರ್ಗವಾಗಿದೆಯೋ ಎಂದರು. ಇಲ್ಲೇ ಇದ್ದಾರೆ. ಈಗ ಇಬ್ಬರೂ ಇದ್ದೇವೆ ಎಂದು ಹೇಳಿದೆ."

"ಅವರು ಯಾರು ಗೊತ್ತೋ—? ಅವರೇ ರೆವೆನ್ಯೂ ಕಮೀಶನರ್ ಸಾಹೇಬರು!!"

"ಇನ್ನೂ ಒಳ್ಳೆಯದೇ ಆಯಿತಲ್ಲ. ದೊಡ್ಡವರ ಪರಿಚಯವಾದರೆ ನಷ್ಟವೇನಿಲ್ಲ. ಅವರು ಬಂದಾರೆಂದು ಹೆದರಿ ನೀವು ಬಾರದೆ ನಿಂತಿರಿ, ಅಲ್ಲವೇ...?"

"ನೀವು ನಡೆದಿದ್ದನ್ನೆಲ್ಲ ಹೇಳುತ್ತಿಲ್ಲ. ಆತ ಮಹಾ ಕೋಪಿಷ್ಠ."

"ಅದು ನಿಮಗೆ ಹೇಗೆ ಗೊತ್ತು?"

"ಹಿಂದಿನ ಅನುಭವ!!"

"ಆತ ರೆವೆನ್ಯೂ ಕಮೀಶನರರೇ ನಿಜವಾಗಿದ್ದರೆ, ನೀವು ಹೇಳಿದಂತೆ ಆತ ಕೋಪಿಷ್ಠನೇ ಆಗಿದ್ದರೆ ನೀವು ಕೆಲಸ ಕಳೆದುಕೊಂಡು ಎಷ್ಟೋ ದಿನಗಳಾಗಬೇಕಿತ್ತು."

"ಏಕೆ? ಏಕೆ?? ನಾನೇನು ಮಾಡಿದ್ದೆ?"

"ನೀವು ಎರಡುವರ್ಷದಿಂದ ಅರ್ಜಿಯನ್ನು ಮುಂದೂಡಿದ್ದು. ಆ ಹಳ್ಳಿಗೆ ಹೋದರೂ ಆ ಕೆಲಸ ಮಾಡದೆ ಬಂದದ್ದು, ಆತ ಕೋಪಿಷ್ಠ ಎಂಬ ಅಭಿಪ್ರಾಯವನ್ನು ಹೊಂದಿದ್ದು ಇಷ್ಟೇ ಸಾಕು" ಎಂದು ಒಂದರೆಕ್ಷಣ ತಡೆದು "ಅದು ಸರಿ— ಈ ಅರ್ಜಿ ರೆವೆನ್ಯೂ ಕಮೀಶನರರಿಗೆ ಸಂಬಂಧ ಪಟ್ಟದ್ದು ಎಂದು ಏಕೆ ನನಗೆ ತಿಳಿಸಲಿಲ್ಲ?" ಎಂದೆ.

"ತಿಳಿಸಿದ್ದರೆ ಏನು ಮಾಡುತ್ತಿದ್ದಿರಿ...?"

"ಅವರು ನಿಂತುಕೊಂಡೇ ಪ್ರಶ್ನೆಗಳನ್ನು ಹಾಕುತ್ತಿದ್ದಾಗ ನಾನು ಮಲಗಿಕೊಂಡೇ ಉತ್ತರಿಸುತ್ತಿರಲಿಲ್ಲ" ಎಂದು ಉಪಸಂಹರಿಸಿದೆ.

●

ನನಗೆ ವರ್ಗವಾಗಿ ಆ ಊರು ಬಿಡುವ ಮುಂಚೆ ಬಡವರು ಹರಿಜನರಿಗೆ ಸರಕಾರವು ಮುಫತ್ತಾಗಿ ಮಂಜೂರು ಮಾಡಿದ್ದ ಭೂಮಿಯನ್ನು ಅವರಿಗೆ ಅಳೆದು ಹದ್ದುಬಸ್ತು ಮಾಡಿಕೊಡುವ ಕೆಲಸ ಉಳಿದಿತ್ತು. ಈ ಹರಿಜನರು ತುಂಬ ಬಡವರಾಗಿದ್ದು ಕೂಲಿ ಕುಂಬಳ ಮಾಡಿಕೊಂಡು ಜೀವನ ನಡೆಸುತ್ತಿದ್ದ ಕಾರಣ ಆದಷ್ಟು ಬೇಗ ಅವರ ಜಮೀನನ್ನು ಅವರಿಗೆ ಸುಪರ್ದು ಮಾಡುವುದು

ಲೇಸೆಂದು ಮಣಗನ ಹಳ್ಳಿಗೆ ಹೊರಟೆ. ಮಳೆಗಾಲ ಸಮೀಪಿಸುತ್ತಿದ್ದುದರಿಂದ ಆ ಬಡಜೀವಿಗಳು ಜಮೀನನ್ನು ಆಬಾದು ಮಾಡಿಕೊಂಡು, ಹುರುಳಿಯಂಥ ಯಾವುದಾದರೂ ಕಡಿಮೆ ವೆಚ್ಚದ ಫಸಲನ್ನು ಬೆಳೆದುಕೊಳ್ಳಲಿ ಎಂಬ ಸದುದ್ದೇಶದಿಂದ ಅವರಿಗೆ ಹೇಳಿ ಕಳುಹಿಸಿದೆ. ಆದರೆ ಎರಡೆರಡು ಬಾರಿ ಒತ್ತಾಯ ಮಾಡಿ ಹೇಳಿಕಳುಹಿಸುವವರೆಗೂ ಅವರು ಬರಲೇ ಇಲ್ಲ. ಬಂದವರು ಎಲ್ಲರೂ ತಮಗೆ ಭೂಮಿ ಬೇಕಿಲ್ಲ ಎಂದು ಒಕ್ಕೊರಲಿನಿಂದ ಘೋಷಿಸಿದ್ದು ಕೇಳಿ ನನಗೆ ಆಶ್ಚರ್ಯ ನಿರಾಶೆ ಏಕ ಕಾಲದಲ್ಲಿ ಆಯಿತು. ಏಕೆಂದರೆ ಸಾಕಷ್ಟು ದೂರವಿದ್ದ ಆ ಹಳ್ಳಿಗೆ ನಾನು ತುಂಬ ಶ್ರಮವಹಿಸಿ ಬಂದಿದ್ದೆ.

"ಸರಕಾರವು ನಿಮಗೆ ಸ್ವಂತ ಭೂಮಿ ಇಲ್ಲದಿರುವುದರಿಂದ ಜೀವನೋಪಾಯಕ್ಕಾಗಿ ಪುಕ್ಕಟೆಯಾಗಿ ಜಮೀನನ್ನು ಕೊಟ್ಟಿದೆ. ಹತ್ತು ವರ್ಷಕಾಲ ಕಂದಾಯವನ್ನೂ ಮನ್ನಾ ಮಾಡಲಾಗಿದೆ. ಇಷ್ಟೆಲ್ಲ ಸೌಕರ್ಯ ಮಾಡಿಕೊಟ್ಟಾಗ್ಯೂ ನೀವು 'ಜಮೀನು ಬೇಡ' ಎನ್ನುತ್ತೀರಿ. ಕಾರಣವೇನು?"

"ಸ್ವಾಮಿ, ಈ ಜಮೀನು ಬರಡು. ಈ ಬರೀ ಒಣ ಭೂಮಿಯನ್ನು ಕಟ್ಟಿಕೊಂಡು ನಾವೇನು ಮಾಡೋಣ? ನಮಗೆ ಸ್ವಂತ ಬೇಸಾಯಕ್ಕೆ ಅನುಕೂಲವಿಲ್ಲ. ಕೈಯಲ್ಲಿ ಕಾಸಿಲ್ಲ, ಆದ್ದರಿಂದ ಈ ಜಮೀನು ನಮಗೆ ಬೇಡ."

"ಅಲ್ಲಪ್ಪ... ಹೊಸ ನೆಲ ಮೊದಲು ಬರಡಾಗಿಯೇ ಇರುತ್ತದೆ. ಆಬಾದು ಮಾಡಿಕೊಂಡಂತೆಲ್ಲ ಜಮೀನು ಹಸನಾಗುತ್ತದೆ. ಇದೆಲ್ಲ ನಿಮಗೆ ಗೊತ್ತೇ ಗೊತ್ತು. ಈಗಲೂ ಯೋಚಿಸಿನೋಡಿ. ಒಂದೆರಡು ವರ್ಷಗಳಲ್ಲಿ ನಿಮ್ಮವೂ ಸುತ್ತಮುತ್ತಿನ ಹೊಲಗಳಂತೆಯೇ ಆಗುತ್ತವೆ. ಬಂದಿದ್ದನ್ನು ಬಿಡಬೇಡಿ. ಜಮೀನು ನಿಮ್ಮದ್ದಾಗಿದ್ದರೆ ದನಕರುಗಳನ್ನು ಮೇಯಿಸಲು ಹುಲ್ಲುಗಾವಲಾದರೂ ಆಗುತ್ತದೆ. ಕೈ ಬಿಟ್ಟರೆ ಮನೆಯ ಬಾಗಿಲಿಗೆ ಬಂದಿದ್ದನ್ನು ಕಳೆದುಕೊಳ್ಳುತ್ತೀರಿ. ಪುನಃ ನೀವು ಕೇಳಿಕೊಂಡರೂ ಈ ಭೂಮಿಯನ್ನು ಸರಕಾರವು ಮಂಜೂರು ಮಾಡುವುದಿಲ್ಲ ತಿಳಿಯಿತೆ?"

"ಈ ಬರಡು ಜಮೀನು ನಮಗೆ ಬೇಕಿಲ್ಲ ಸ್ವಾಮಿ."

"ಹಾಗಾದರೆ ರೈತರು ಆಬಾದು ಮಾಡಿ, ಬೆಳೆ ತೆಗೆದುಕೊಳ್ಳುತ್ತಿರುವ ಹಸನಾದ ತೋಟದ ಜಮೀನನ್ನು ಕೊಟ್ಟರೆ ಒಪ್ಪುತ್ತೀರಾ...?"

ಅವರು ನಿರುತ್ತರರಾದರು. ಅಲ್ಲಿ ನೆರೆದಿದ್ದ ಜನರನ್ನು ಕುರಿತು ಇವರಿಗೆ ಸ್ವಲ್ಪ ವಿವೇಕ ಹೇಳಿ ಎಂದೆ.

ಈ ಹರಿಜನರ ಬಾಲಭಾಷೆಗಳನ್ನು ಜನರು ಆಕ್ಷೇಪಿಸಿದರು. ಕೆಲವರು ಸೌಮ್ಯವಾಗಿ ಹೇಳಿದರೆ ಇನ್ನು ಕೆಲವರು ಉಗ್ರವಾಗಿ ಖಂಡಿಸಿದರು. ಯಾರ ಮಾತಿಗೂ ಅವರು ಒಪ್ಪಲಿಲ್ಲ. "ಅವರಿಗೆ ಬೇಡದಿದ್ದರೆ ಬಿಡಲಿ. ನೀವು ಸರಕಾರದವರು. ನೀವೇಕೆ ಪಂಚಾಯತಿ ಮಾಡುತ್ತೀರಿ? ಅವರು ಏನು ಹೇಳುತ್ತಾರೋ ಅದನ್ನು ಬರೆಸಿಕೊಂಡು ರುಜು ಮಾಡಿಸಿಕೊಂಡು ಬಿಡಿ. ಅವರ ಹಣೆಯ ಬರಹ, ಅನುಭವಿಸಲಿ." ಎಂದರು. ಐವರು ಪೈಕಿ ನಾಲ್ವರು ತಮಗೆ ಜಮೀನು ಬೇಡವೆಂದು ಬರೆಸಿ, ರುಜು ಮಾಡಿ ಹೊರಟು ಹೋದರು. ಐದನೆಯವ ಮೃತನಾಗಿದ್ದರಿಂದ ಅವನ ವಿಧವೆ ಹೆಂಡತಿ ಮತ್ತು ಹತ್ತು ವರ್ಷದ ಮಗ ಮಾತ್ರ ಉಳಿದುಕೊಂಡಿದ್ದರು. ಅವರನ್ನು ಕೇಳಿದೆ.

"ಏನಮ್ಮ, ನಿಮ್ಮವರೆಲ್ಲ ಕೈಗೆ ಬಂದ ಭಾಗ್ಯವನ್ನು ಒದೆದು ಹೋದರು. ಜಮೀನನ್ನು ಒಲ್ಲೆ ಎಂದರು. ನೀನು ಏನು ಹೇಳುತ್ತಿ?"

"ಸ್ವಾಮಿ... ನನಗೆ ಗಂಡನಿಲ್ಲ. ಅವರು ತೀರಿಕೊಂಡರು. ಒಬ್ಬ ಹತ್ತು ವರ್ಷದ ಮಗನಿದ್ದಾನೆ. ಅವನೇ ನನ್ನ ಮನೆಗೆ ಗಂಡಸು. ದುಡಿಯುವ ಗಂಡಸರೇ ಜಮೀನು ಬರಡು, ಬೇಡ ಎಂದು ಹೋಗಿದ್ದಾರೆ. ನಾನು ಒಂಟಿ ಹೆಂಗಸು. ನನ್ನಿಂದ ಏನು ಆದೀತು...?"

"ನಾನು ಹೇಳುವುದನ್ನು ಕೇಳಮ್ಮ— ಅವರಿವರ ಮಾತನ್ನು ಕೇಳಿಕೊಂಡು ಮೋಸ ಹೋಗಬೇಡ. ಹೇಗೂ ನಿನಗೆ ಮಗನಿದ್ದಾನೆ. ಸಾಗುವಳಿ ಮಾಡಲು ಆಗದಿದ್ದರೂ ಜಮೀನು ಹಾಳು ಬಿದ್ದರೂ ಪರವಾಗಿಲ್ಲ. ಅದು ನಿನ್ನದಾಗಿ ಬಿದ್ದಿರಲಿ."

"ನನ್ನಲ್ಲಿ ಎತ್ತಿಲ್ಲ—ಕತ್ತೆಯಿಲ್ಲ. ಕೈಲಿ ಕಾಸಿಲ್ಲ; ದಿಕ್ಕು ಮೊದಲೇ ಇಲ್ಲ. ಹಂಗೂ ಹಿಂಗೂ ಗೌಡ

ದೀರ ಮನೇಲಿ ಕೂಲಿ ಕುಂಬಳ ಮಾಡಿಕೊಂಡಿರುತ್ತೀನಿ. ನೀವೇ ಹೇಳಿ ನಾನು ಏನು ಮಾಡಲಿ? ನನ್ನ ವಿಷಯವೆಲ್ಲ ಹೇಳಿದ್ದೀನಿ."

"ನಾನು ಒಂದು ಒಳ್ಳೇ ಮಾತು ಹೇಳುತ್ತೀನಿ. ನನ್ನ ಕೈಲಿ ಸಾಧ್ಯವಿದ್ದುದನ್ನೇ ಹೇಳುತ್ತೀನಿ ಕೇಳು. ಬದುಕಿದರೆ ಬದುಕು, ಕೆಟ್ಟರೆ ಕೆಡು ನಾನು ಆ ಮೂಲೆಯಲ್ಲಿ ಆರು ಎಕರೆ ಭೂಮಿಯನ್ನು ನಿನಗೆ ಬಿಟ್ಟು ಕೊಡುತ್ತೇನೆ. ಎರಡೂ ಕಡೆ ಸಾಗುವಳಿಯಾಗುತ್ತಿರುವ ಭೂಮಿಗಳಿವೆ. ಎರಡೂ ಕಡೆ ಬೇಲಿಗಳಿವೆ. ನೀನು ಬೇಲಿಯನ್ನು ಹಾಕಬೇಕಿಲ್ಲ. ಅಷ್ಟು ಜಮೀನೂ ಹಾಗೇ ಇರಲಿ. ಅದರಲ್ಲಿ ಅರ್ಧ ಎಕರೆಗೆ ಒಂದು ಒತ್ತಲು ಮಾಡಿಕೋ, ಪಕ್ಕದಲ್ಲಿ ಒಂದು ಗುಂಡಿ ಇದೆ. ಆರು ತಿಂಗಳು ನೀರು ನಿಲ್ಲುತ್ತೆ. ಅರ್ಧ ಎಕರೆಯಲ್ಲಿ ಅರ್ಧ ಭಾಗವನ್ನು ಅಗೆದು ಮೆಣಸಿನ ಸಸಿ ಹಾಕಿಸು. ಅದು ಒಂದು ತಿಂಗಳಲ್ಲಿ ಕಾಯಿ ಬಿಡುತ್ತದೆ. ಸಂತೆಯಲ್ಲಿ ಮಾರಿಕೋ. ನಂಜಪ್ಪನವರಿಗೆ ಹೇಳಿ ಅವರ ತೋಟದಿಂದ ಹತ್ತು ನಿಂಬೆ ಸಸಿ ಕೊಡಿಸುತ್ತೇನೆ. ಗುಂಡಿ ನೀರನ್ನು ಗಡಿಗೆಯಲ್ಲಿ ಎತ್ತಿ ಹಾಕಿ ಸಸಿ ಬೆಳೆಸು. ಹಸಿ ಮೆಣಸಿನಕಾಯಿ, ಕೊತ್ತುಂಬರಿ ಇವುಗಳಿಂದ ವಾರವಾರವೂ ಸ್ವಲ್ಪ ಕಾಸು ಸಂಪಾದಿಸಬಹುದು. ಒಂದು ವರ್ಷದಲ್ಲಿ ನಿಂಬೆಗಿಡ ಕಾಯಿ ಬಿಡುತ್ತದೆ. ಮೊದಲು ಸ್ವಲ್ಪ ಕಷ್ಟವಾಗಬಹುದು. ದೇವರಿದ್ದಾನೆ— ಇಷ್ಟಪಟ್ಟರೆ ಕೈ ತುಂಬ ಕಾಸು ಸಂಪಾದಿಸಬಹುದು. ಕಷ್ಟಪಟ್ಟರೆ ಸುಖವುಂಟು. ಏನು ಹೇಳುತ್ತಿ?"

ಈ ಮಾತುಗಳನ್ನು ಕೇಳುತ್ತಿದ್ದ ರೈತರು ನನ್ನ ಮಾತನ್ನು ಅನುಮೋದಿಸಿದರು. ಆಕೆ ಬೇರೆ ಮಾತಿಲ್ಲದೆ ಜಮೀನು ಉಳಿಸಿಕೊಳ್ಳಲು ಒಪ್ಪಿದಳು.

"ನೀವು ನಮ್ಮ ತಂದೆ ಹಾಗೆ. ಬುದ್ಧಿವಂತರ ಮಾತನ್ನು ಮೀರಬಾರದು. ದೇವರ ಮೇಲೆ ಭಾರ ಹಾಕಿ ಒಂದು ಸಣ್ಣ ಕೈತೋಟ ಮಾಡಿಕೊಳ್ಳುತ್ತೀನಿ. ಜಮೀನನ್ನು ವಿಂಗಡಿಸಿಕೊಡಿ ಬುದ್ಧೀ."

ನಾನು ಹೇಳಿದಂತೆ ವ್ಯವಸ್ಥೆ ಮಾಡಿ ಆಕೆಗೆ ಜಮೀನು ವಿಂಗಡಿಸಿ ಕೊಟ್ಟು ಹಿಂದಿರುಗಿದೆ. ನಂತರ ಆ ಜಾಗದಿಂದ ನನಗೆ ವರ್ಗವೂ ಆಗಿ ಆ ಸ್ಥಳದಿಂದ ದೂರ ಹೊರಟು ಹೋದೆ.

ಕಾಲಕ್ರಮೇಣ ಈ ವಿಷಯ ಮರೆತೂ ಹೋಗಿತ್ತು. ಎಂಟು ವರ್ಷಗಳ ನಂತರ ಆ ಪ್ರಾಂತದಲ್ಲಿ ನನಗೆ ಕೆಲಸ ಬಿದ್ದಿತ್ತು. ಮಣಗನ ಹಳ್ಳಿಯ ಸಮೀಪದಲ್ಲೇ ಇದ್ದೆ. ಆ ವರ್ಷ ಅಲ್ಲೆಲ್ಲಾ ಹೊಗಸಾಗಿ ಮಳೆ ಆಗಿದ್ದ ಪ್ರಯುಕ್ತ ಜನರೆಲ್ಲ ಹರ್ಷಚಿತ್ತರಾಗಿ ಇದ್ದರು. ಸಾಕಷ್ಟು ದೊಡ್ಡದಾಗಿದ್ದ ಮಣಗನ ಹಳ್ಳಿಯ ಕೆರೆ ತುಂಬಿ ಕೋಡಿ ಹರಿಯುತ್ತಿದೆ ಎಂಬ ಸುದ್ದಿ ಕೇಳಿ ನೋಡಲು ಹೊರಟೆ.

ಸಾಧಾರಣವಾಗಿ ಈ ಕೆರೆ ಪ್ರತಿವರ್ಷವೂ ತುಂಬುವುದಿಲ್ಲ. ತುಂಬಿದರೂ ಕೋಡಿ ಹರಿಯುವುದಿಲ್ಲ. ಕೋಡಿ ತುಂಬಿ ಬಂಡೆಗಳ ಮೇಲೆ ಹರಿಯುವ ಹೊಸ ನೀರು ಅನೇಕ ಸಣ್ಣ ಪುಟ್ಟ ಜಲಪಾತಗಳನ್ನು ತುಂಬಿಸುವುದು— ತುಂಬಿ ಹರಿಸುವುದು. ಬೆಳಗಿನ ಸೂರ್ಯನ ಕಿರಣಗಳು ನೀರಿನಲ್ಲಿ ಪ್ರವೇಶಿಸಿ, ಅಪೂರ್ವ ಪ್ರಭೆಯನ್ನು ಬೀರುವವು, ಇತ್ತ ಕಡೆ ನೀರಿನಿಂದ ತುಂಬಿ ತುಳುಕಿ ನಲಿಯುವ ಅಲೆಗಳ ಕುಣಿದಾಟವಿದ್ದರೆ ಅತ್ತ ಕಡೆ



"ಛೀ! ವಿರೋಧಿ ಅಭ್ಯರ್ಥಿ ಕೈಯಲ್ಲಿ ನಮ್ಮ ಅಭ್ಯರ್ಥಿಗೆ ಸೋಲು? ಖಂಡಿತಾ ಇಲ್ಲ. ಅವನನ್ನು ಸೋಲಿಸಲು ನಮ್ಮ ಪಕ್ಷದಲ್ಲೇ ಹಲವರು ಹೆಣಗಾಡುತ್ತಿದ್ದಾರೆ."

ಬಿಡುವಿಲ್ಲದೆ ಕೇಳಿಸುವ ಸುಶ್ರಾವ್ಯನಾದ, ಎಷ್ಟು ಹೊತ್ತು ನೋಡಿದರೂ ಸಾಕೆಂಬ ಅನಿಸಿಕೆಯೇ ಹುಟ್ಟುವುದಿಲ್ಲ. ದಿನವೂ ಸಂಜೆ ತಪ್ಪದೆ ಕೆರೆಯ ಬಳಿಗೆ ಹಾಜರಾಗುತ್ತಿದ್ದೆ.

ಪ್ರವಾಸಿ ಮಂದಿರದಿಂದ ಆ ದಿನವೂ ಕೆರೆಯ ಬಳಿ ಹೊರಟೆ. ಅಂದು ಸಂತೆ, ಸಂತೆಯ ಬಯಲನ್ನು ದಾಟಿಯೇ ಕೆರೆಯ ಸಮೀಪಕ್ಕೆ ಹೋಗಬೇಕು. ಆ ದಿನ ನನ್ನಂತೆಯೇ ಕೆರೆ ಕೋಡಿಯ ಸೊಬಗನ್ನು ನೋಡಲು ನನ್ನಂಥ ಜನರ ಗುಂಪೇ ಅತ್ತಕಡೆ ಧಾವಿಸುತ್ತಿತ್ತು. ಏಕೆಂದರೆ ಈ ನೋಟ ಬಹಳ ದಿನ ಉಳಿಯುವಂಥದಲ್ಲ. ಸಂತೆ ಆಗ ತಾನೇ ಸೇರುತ್ತಿತ್ತು. ಹೊಂಬೆಳಕು ಮೂಡಲಿನ ಅಂಚಿನಿಂದ ಹೆದಗೇರಿಸಿದ ಬಾಣಗಳಂತೆ ಕಾಣಿಸುತ್ತಿತ್ತು. ಸಂತೆ ಬಯಲನ್ನು ದಾಟುತ್ತಿದ್ದಾಗ "ಸ್ವಾಮಿ, ಬುದ್ಧೀ ಅಯ್ನೋರೆ" ಎಂಬ ಕೂಗು ಕೇಳಿಸಿತು. ನನಗಲ್ಲ ಎಂದು ನಡೆದಿದ್ದೆ "ಲೇ ಬುದ್ಧಿಯೋರ್ನ ಕರೀಲಾ" ಎಂದದ್ದೂ ಒಬ್ಬ ಯುವಕ ನನ್ನನ್ನು ತಡೆದದ್ದೂ ಆಯಿತು. ಒಬ್ಬ ಹೆಂಗಸು ನನ್ನ ಬಳಿಗೆ ಧಾವಿಸಿ ಬಂದು ಕೈ ಮುಗಿದು ನಿಂತಳು.

"ಲಾ ಮಗಾ ಸ್ವಾಮಿಗೋಳಿಗೆ ಅಡ್ಡ ಬೀಳಲಾ.. ಅಡ್ಡಬೀಳು" ಎಂದಳು ಆ ಹುಡುಗ ನಮಸ್ಕರಿಸಿದ.

ನಿಂತು ನೋಡಿದರೆ ಅದೇ ಹರಿಜನರ ಹೆಂಗಸು. ಅವಳ ಮಗ. "ನೆನ್ಪಿದೆಯಾ ಬುದ್ಧೀ— ನಾವನಕ ದಿನಾ ನಿಮ್ಮ ಪಾದ ನೆನೀತೀವಿ. ಸ್ವಾಮಿ ಮೂಡಿದಾಗ, ದೀಪ ಮುಟ್ಟಿಸುವಾಗ ನಿಮ್ಮನ್ನು ನೆನೀ-ತೀವಿ. ಹುಡುಗನಿಗೆ ಹದಿನೆಂಟು ವರುಷವಾಯಿತು. ನೀವು ನಮಗೆ ಜಮೀನು ಮಾಡಿಕೊಟ್ಟಾಗ ಅವನಿಗೆ ಎಂಟುವರುಷ. ನಿಮ್ಮ ಪಾದ, ನೀವು ಕೊಟ್ಟ ಭೂಮೀಲಿ ಮೆಣಸಿನಕಾಯಿ, ಕೊತ್ತಂಬರಿ, ಕೀರೆ, ದಂಟು, ಸಪ್ಪು ಬೆಳೀತಿದೀವಿ. ನಿಮ್ಮ ಮಾತು ತೆಗೆದು ಹಾಕಿಲ್ಲ ಅಂತ ನಾವು ಬದುಕಿಕೊಂಡ್ವಿ. ಈಗ ಐದಂಕಣದ ಮನೆ ಕಟ್ಟಿದೀವಿ. ಎರಡೆಮ್ಮೆ, ಐದು ಹಸು, ಆರು ಆಡುಗಳಿವೆ. ಒಂದು ಜೊತೆ ಗಿಡ್ಡಗಳಿವೆ. ಗಾಡಿ ತರೋಕೆ ಮಾತಾಡಿದ್ದೀವಿ. ಕೈತೋಟದ ಜತೆ ಹೊಲಾನೂ ಮಾಡುತಿದೀವಿ. ಕಾಳುಕಡ್ಡಿ ಬೆಳೆ ತೆಗೀತಾ ಇದೀವಿ. ದನಗಳಿಗೆ ಮೇವೂ ಆಗುತಾವೆ. ನಿಮ್ಮ ಮಾತು ಕೇಳಿ ಬದುಕಿಕೊಂಡೆ. ಎಲ್ಲ ನೆಟ್ಟಗಾಗದೆ. ನಿಮ್ಮನ್ನು ನೆನೆದು ದೀಪ ಮುಟ್ಟಿಸುತೀವಿ. ನಮ್ಮ ತಂದೇ ಹಂಗೆ ಬುದ್ಧಿ ಮಾತು ಹೇಳಿ ಬದುಕಲು ದಾರಿ ತೋರಿಸಿದಿರಿ ನಿಮ್ಮ ಪಾದ. ನಿಮ್ಮ ಪಾದಕ್ಕೆ ಬಿದ್ದೆ," ಎಂದಳು. ಅವಳ ಕಣ್ಣುಗಳಲ್ಲಿ ಕೃತಜ್ಞತೆ ಸೂಸುತ್ತಿತ್ತು.

ಅವಳ ನಿವೇದನೆಯಿಂದ ನನಗೂ ಕರುಳು ಕಲಕದಂತೆ ಆಯಿತು "ದೇವರು ಒಳ್ಳೆಯದನ್ನು ಮಾಡಲಮ್ಮ" ಎಂದೆಂದು ಮುಂದುವರಿದೆ. ✡



ಗಣಿತದಲ್ಲಿ ಹಿಂದುಳಿದ ಮಗನ ಬಗ್ಗೆ ಶಿಕ್ಷಕಿಗೆ ತಾಯಿ ಹೇಳಿದ್ದು; "ಪ್ರಯತ್ನಿಸೋದಿಲ್ಲ ಅಂತೇನಿಲ್ಲ. ಅದ್ರೆ ಅಂಥದ್ರಲ್ಲೆಲ್ಲಾ ಅವ್ನಿಗೆ ನಂಬಿಕೆ ಇಲ್ಲ."

*

ಪ್ರಥಮೋಪಚಾರದ ತಜ್ಞರೊಬ್ಬರು ಮಹಿಳಾ ಸ್ಕೌಟ್‌ಗಳಿಗೆ ಪಾಠಮಾಡುತ್ತ ಕೇಳಿದರು: "ಆಪರೇಶನ್ ಮಾಡುವಾಗ ಸರ್ಜನ್ನರು ಮುಖದ ಮೇಲೆ ಬಟ್ಟೆಯನ್ನೇಕೆ ಹಾಕಿಕೊಳ್ಳುತ್ತಾರೆ?"

ಚಿಕ್ಕ ಹುಡುಗಿಯೊಬ್ಬಳು ಕೂಡಲೆ, "ಏನಾದರೂ ತಪ್ಪಾದರೆ ರೋಗಿಗೆ ಆಪರೇಶನ್ ಮಾಡಿದವರಾರೆಂದು ಗೊತ್ತಾಗದಿರಲಿ ಎಂದು," ಎಂದು ಉತ್ತರಿಸಿದಳು.

# 'ಕಸ್ತೂರಿ'ಯ ಅರ್ಧವಾರ್ಷಿಕ ಪರಿವಿಡಿ

## ಸಪ್ಟೆಂಬರ್ ೧೯೮೬ ರಿಂದ ಫೆಬ್ರುವರಿ ೧೯೮೭ ರವರೆಗೆ

ಕ್ರಮ: ಲೇಖನದ ಹೆಸರು, ತಿಂಗಳು, ಪುಟಸಂಖ್ಯೆ

ಸ=ಸಪ್ಟೆಂಬರ್ ಅ=ಅಕ್ಟೋಬರ್ ನ=ನವೆಂಬರ್ ಡಿ=ಡಿಸೆಂಬರ್
ಜ=ಜನೆವರಿ ಫೆ=ಫೆಬ್ರುವರಿ

**ಕವನ–ಉವಾಚ–ಚುಟುಕು**



**ಚರ್ಚೆ- ಚಿಂತನ**



**ಜೀವನ ಚರಿತ್ರೆ—ವ್ಯಕ್ತಿಚಿತ್ರ**

**ಸಾಮಾನ್ಯ**



**ಹರಟೆ–ನಗೆಬರಹ**





Edited, printed and published by M. N. Mahishi on behalf of the Loka Shikshana Trust, Samyukta Karnataka Press, Koppikar Road, Hubli–580 020 Phone: 64307. Rept: Bombay, V. Satyamurthy Phone: 5510502, Calcutta: H. Majumdar Phone: 46–42331 Madras: K. A. Subramanian Phone: 842201; New Delhi; V. K. Chopra Phone: 7114785.

*Registered with the Registrar of Newspapers for India under No. 3539/57*

Licence No. L2120/WPP No. 33



Cover Printed at. Bharat Photo Offset Works, Dharwad 580 00